# ವಸಾಹತುಶಾಹಿ ಆಧುನಿಕತೆ ಮತ್ತು ಮಹಿಳೆ

## ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಲ್ಲಿಸಲು ಸಿದ್ಧಪಡಿಸಿದ ಮಹಾಪ್ರಬಂಧ)





ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩೨೭೬

೨೦೧೮

# ವಸಾಹತುಶಾಹಿ ಆಧುನಿಕತೆ ಮತ್ತು ಮಹಿಳೆ

## ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಲ್ಲಿಸಲು ಸಿದ್ಧಪಡಿಸಿದ ಮಹಾಪ್ರಬಂಧ)








ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩೨೭೬

೨೦೧೮

ಪರಿವಿಡಿ ಪುಟಗಳು

ಅಧ್ಯಾಯ: ಒಂದು ೧–೩೪

ಅಧ್ಯಯನದ ಉದ್ದೇಶ ವ್ಯಾಪ್ತಿ ಹಾಗೂ ವಿಧಾನ

೧.೧ ಪೀಠಿಕೆ

೧.೨ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೩ ಅಧ್ಯಯನದ ವಿಧಾನ

೧.೪ ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಅಧ್ಯಾಯ: ಎರಡು ೩೫–೬೧

ವಸಾಹತುಪೂರ್ವ ಕಾಲಘಟ್ಟದ ಮಹಿಳೆಯ ಸ್ಥಿತಿಗಳು

೨.೧ ಪಾಡ್ದನಗಳಲ್ಲಿ ಸ್ತ್ರೀಯರು

೨.೨ ಕರಾವಳಿಯ ಪ್ರಮುಖ ರಾಜಮನೆತನಗಳ ಸ್ತ್ರೀಯರು

೨.೩ ಕೆಳವರ್ಗದ ಮಹಿಳೆಯರ ಸ್ಥಿತಿಗತಿಗಳು

ಅಧ್ಯಾಯ: ಮೂರು ೬೨–೧೧೧

ಮಿಷನರಿಗಳು ಮತ್ತು ಮಹಿಳೆ

೩.೧ ಬ್ರಿಟಿಷ್ ಆಡಳಿತದಲ್ಲಿ ಬಾಸೆಲ್ ಮಿಷನ್ ಮತ್ತು ರೋಮನ್ ಕ್ಯಾಥೋಲಿಕರ ಶೈಕ್ಷಣಿಕ ಚಟುವಟಿಕೆಗಳು

೩.೨ ಮಹಿಳಾ ಶಿಕ್ಷಣ ಮತ್ತು ಸ್ಥಳೀಯ ಶಿಕ್ಷಣ ಸಂಸ್ಥೆಗಳು

೩.೩ ಬ್ರಿಟಿಷ್ ಆಡಳಿತದಲ್ಲಿ ಮಿಷನರಿಗಳು ಮತ್ತು ಆರೋಗ್ಯ ಸೇವೆಗಳು

ಅಧ್ಯಾಯ: ನಾಲ್ಕು

ಮಹಿಳೆ ಮತ್ತು ಸಾಮಾಜಿಕ ಸುಧಾರಣೆಗಳು ೧೧೨-೧೫೨

೪.೧ ಮಹಿಳೆಯರ ಶ್ರೇಯೋಭಿವೃದ್ಧಿಗೆ ಶ್ರಮಿಸಿದ ಸುಧಾರಕರು

೪.೨ ಪ್ರಮುಖ ಮಹಿಳಾಪರ ಸಾಮಾಜಿಕ ಸಂಸ್ಥೆಗಳು

೪.೩ ಸಮಾಜ ಸುಧಾರಣೆ ಮತ್ತು ಮಹಿಳಾಪರ ನೀತಿಗಳು

ಅಧ್ಯಾಯ: ಐದು ೧೫೩-೧೯೬

ಶೈಕ್ಷಣಿಕ ಸ್ಥಿತ್ಯಂತರ ಮತ್ತು ಸಾಮಾಜಿಕ ಬದಲಾವಣೆ

೫.೧ ಮಹಿಳೆಯ ಬದುಕಿನಲ್ಲಿ ಶಿಕ್ಷಣದ ಪ್ರಭಾವ

೫.೨ ಪತ್ರಿಕೆಗಳಲ್ಲಿ ಪ್ರಕಟವಾದ ಸ್ತ್ರೀಪರ ಲೇಖನಗಳು

೫.೩ ವಸಾಹತು ಕಾಲಘಟ್ಟದ ಮಹಿಳಾ ಬರಹಗಾರ್ತಿಯರು

೫.೪ ಆಯ್ದ ಲೇಖಕರ ಬರವಣಿಗೆಗಳಲ್ಲಿ ಸ್ತ್ರೀ ಸಂವೇದನೆಗಳು

ಅಧ್ಯಾಯ: ಆರು ೧೯೭-೨೩೪

ಸ್ವಾತಂತ್ರ್ಯ ಹೋರಾಟ ಮತ್ತು ಮಹಿಳೆ

೬.೧ ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರ್ತಿಯರು

೬.೨ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟ ಮತ್ತು ಮಹಿಳೆ

ಉಪಸಂಹಾರ ಮತ್ತು ಫಲಿತಗಳು ೨೩೫-೨೪೪

ಆಕರ ಸೂಚಿ ೨೪೫-೨೬೧

ಅನುಬಂಧ

# ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ ವ್ಯಾಪ್ತಿ ಹಾಗೂ ವಿಧಾನ

೧.೧ ಪೀಠಿಕೆ

೧.೨ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೩ ಅಧ್ಯಯನದ ವಿಧಾನ

೧.೪ ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

# ಅಧ್ಯಾಯ : ಒಂದು

## ೧.೧ ಪೀಠಿಕೆ

ಸ್ತ್ರೀಯರು ಹೊಂದಿರುವ ಸ್ಥಾನಮಾನವೆಂಬುವುದು ಯಾವುದೇ ಸಮಾಜದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಮತ್ತು ನಾಗರಿಕತೆಯ ಮುನ್ನಡೆಯನ್ನು ಅಳೆಯುವಲ್ಲಿ ಮಾನದಂಡವಿದ್ದಂತೆ ಎನ್ನುವ ಮಾತಿನಂತೆ, ಸ್ತ್ರೀಯರಿಗೆ ನೀಡಲಾಗಿರುವ, ಸ್ಥಾನಮಾನ, ವ್ಯಾವಹಾರಿಕ ಸ್ವಾತಂತ್ರ್ಯ, ಹಕ್ಕುಗಳು, ಅಧಿಕಾರ ಮುಂತಾದುವುಗಳ ಆಧಾರದ ಮೇಲೆ ಸಮಾಜವೊಂದರ ಸ್ವರೂಪವನ್ನು ಊಹಿಸಿಕೊಳ್ಳಬಹುದು. ಪ್ರಾಚೀನ ಭಾರತದಲ್ಲಿ ಮಹಿಳೆಯರ ಸ್ಥಿತಿಗತಿಗಳು ಉತ್ತಮವಾಗಿದ್ದರೂ ನಂತರದಲ್ಲಿ ಅವು ದುಸ್ಥಿತಿಗೆ ಬಂದಿರುವ ಸಂಗತಿಗಳು ಚರಿತ್ರೆಯಲ್ಲಿ ದಾಖಲಾಗಿದೆ. ಭಾರತವು ಬ್ರಿಟಿಷರ ಆಳ್ವಿಕೆಗೆ ಒಳಪಟ್ಟ ನಂತರ, ಬಹುರೂಪಿ ಸಾಂಸ್ಕೃತಿಕ ಪರಂಪರೆಗಳನ್ನು ಹೊಂದಿದ್ದ ಭಾರತದ ಕೌಟುಂಬಿಕ ವಲಯದಲ್ಲಿ ಸಂಪ್ರದಾಯ ಮತ್ತು ಸಮಕಾಲೀನತೆಗಳ ಸಂಘರ್ಷವುಂಟಾಯಿತು. ವಸಾಹತು ಆಡಳಿತಕ್ರಮವು ಪಾಶ್ಚಾತ್ಯ ಪ್ರಭುತ್ವದ ಹೇರಿಕೆ, ಗುಲಾಮತ್ವ ಎನಿಸಿದ್ದರೂ, ಮಹಿಳೆಯ ಪ್ರಶ್ನೆಯ ಹಿನ್ನಲೆಯಲ್ಲಿ ಗಮನಿಸಿಕೊಳ್ಳುವುದಾದರೆ ವಸಾಹತು ಆಡಳಿತವು ಶತಮಾನಗಳಿಂದ ಹೆಣ್ಣಿನ ಶೋಷಣೆಯ ಅರಿವು ಮತ್ತು ಎಚ್ಚರ ಮೂಡಿಸಿದ ಕಾಲಘಟ್ಟವಾಗಿದೆ. ಪ್ರಸ್ತುತ ಸಂಶೋಧನಾ ಅಧ್ಯಯನವು ೧೮೬೯ ರಿಂದ ೧೯೪೭ರವರೆಗಿನ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ವಸಾಹತುಶಾಹಿ ಆಧುನಿಕತೆ ಮತ್ತು ಮಹಿಳೆಗೆ ಸಂಬಂಧಿಸಿದ್ದಾಗಿದೆ.

ವಸಾಹತುಶಾಹಿ ಆಡಳಿತದ ವಿರುದ್ಧ ಹೋರಾಟದಲ್ಲಿ ಪಾಶ್ಚಿಮಾತ್ಯ ಜೀವನ ಶೈಲಿಯ ಅನುಕರಣೆಗೆ ಇಡೀ ದೇಶ ಒಳಗಾಗುತ್ತಿರುವ ಸಂದರ್ಭದಲ್ಲಿ ಹತ್ತೊಂಭತ್ತನೇ ಶತಮಾನದಲ್ಲಿ 'ಮಹಿಳಾ ಪ್ರಶ್ನೆಗಳು' ದೊಡ್ಡ ಪ್ರಮಾಣದಲ್ಲಿ ಕೇಳಿಸತೊಡಗಿದವು. ಆದರೆ ಇಲ್ಲಿ ಮಹಿಳೆಯರಿಗೆ ಏನು ಬೇಕು? ಎಂಬ ಪ್ರಶ್ನೆ ಬರಲೇ ಇಲ್ಲ; ಬದಲಿಗೆ ಅವರನ್ನು 'ಆಧುನಿಕರನ್ನಾಗಿಸುವುದು' ಹೇಗೆ? ಎಂಬುವುದೇ ಮುಖ್ಯವಾಯಿತು. ಹತ್ತೊಂಭತ್ತನೆಯ ಶತಮಾನದ ಬ್ರಿಟಿಷ್ ಇಂಡಿಯಾದಲ್ಲಿ ಮಹಿಳಾ ಪ್ರಶ್ನೆಯೇ ಮುಖ್ಯವೆನಿಸಲು ಕಾರಣ, ವಿದೇಶಿ ಪ್ರಭುಗಳು ಸಮಾಜದಲ್ಲಿ ಮುಖ್ಯವಾಗಿ ಈ ಸಂಗತಿಯ ಬಗ್ಗೆಯೇ ಲಕ್ಷ್ಯವಹಿಸಬೇಕೆಂದು ಉದ್ದೇಶಿಸಿದ್ದು. ಭಾರತೀಯರನ್ನು 'ನಾಗರಿಕರನ್ನಾಗಿಸುವ ಘನ ಉದ್ದೇಶ' ವನ್ನು

ಬಿಂಬಿಸುತ್ತಾ ಹೊರಟ ಪ್ರಭಾವಶಾಲಿಗಳಾದ ಬ್ರಿಟಿಷ್ ಲೇಖಕರು ಭಾರತದ ಧರ್ಮಗಳು, ಸಂಸ್ಕೃತಿ ಹಾಗೂ ಮಹಿಳೆಯರನ್ನು ಕುರಿತು ಇಲ್ಲಿರುವ ರೀತಿ ನೀತಿಗಳ ವಾಸ್ತವಿಕತೆಯನ್ನು ಬಿಂಬಿಸತೊಡಗಿದರು. ವಸಾಹತು ಪ್ರಭುತ್ವವು ಮೇಲುಗೈ ಪಡೆದಂತ ಬದಲಾವಣೆ ಚಾಲನೆಗೊಂಡಿತು. ಭಾರತೀಯರು ಆಮದಾಗಿ ಬಂದ ಆದರ್ಶದ ಕಲ್ಪನೆಗಳನ್ನೂ, ಸಂಸ್ಥೆಗಳನ್ನೂ ತಮ್ಮಲ್ಲಿದ್ದ ಸಾಮಾಜಿಕ ಹಾಗೂ ಸಾಂಸ್ಕೃತಿಕ ನಡಾವಳಿಗಳಲ್ಲಿ ಹೊಂದಿಸಿಕೊಳ್ಳತೊಡಗಿದರು. ಲಿಂಗವ್ಯವಸ್ಥೆಯ ಆಯಾಮದ ಸಂಬಂಧಗಳನ್ನು ಪುರ್ನವ್ಯಾಖ್ಯಾನಿಸುವಲ್ಲಿ ಈ ವಿದೇಶಿ ಆದರ್ಶಗಳು ಮತ್ತು ಪರಿಕಲ್ಪನೆಗಳು ದಾರಿದೀಪಗಳಾದವು.[೧] ಆದರೆ ಈ ಸಂಬಂಧಗಳಲ್ಲಿ ಬದಲಾವಣೆಗಳು ಆಗಬೇಕೆಂಬುವುದಕ್ಕೆ ಪ್ರತಿಕ್ರಿಯೆಗಳು ವಿವಿಧ ರೀತಿಯದಾಗಿತ್ತು.

ಪಾರ್ಥಾ ಚಟರ್ಜಿಯವರ ಅಭಿಪ್ರಾಯದಂತೆ 'ಭಾರತೀಯರು ವಿಜ್ಞಾನ, ತಂತ್ರಜ್ಞಾನ, ಪಾಶ್ಚಾತ್ಯ ರೀತಿಯ ರಾಜಕೀಯ ರಚನೆಗಳು ಎಲ್ಲದರ ಬೆನ್ನು ಹತ್ತಿದರೂ, ತಮ್ಮ ಅಸ್ಮಿತೆಯ ಮೂಲ ಚಹರೆಯನ್ನು ಮಾತ್ರ ಮನೆಯಲ್ಲೇ ಕಂಡದ್ದು. ಈ ಮನೆಯನ್ನು ನಿರಂತರವಾಗಿ ರಕ್ಷಿಸಿ, ಬಲಪಡಿಸುವುದರೊಂದಿಗೆ ಯಾವುದೇ ಪಲ್ಲಟಗಳಿಗೆ ಅವಕಾಶವಾಗಬಾರದು ಎಂಬುವುದನ್ನೇ ಅವರು ಬಯಸಿದರು'.[೨] ಅಂತೆಯೇ ಪ್ರಾಚೀನಕಾಲದಲ್ಲಿದ್ದ ಪುರುಷರೊಂದಿಗಿನ ಸಮಾನ ಸ್ಥಾನಮಾನದಿಂದ, ಮಧ್ಯಯುಗೀನ ಕಾಲದಲ್ಲಿನ ಕೆಳಮಟ್ಟದಿಂದ, ಸಮಾಜ ಸುಧಾರಕರು ಸಮಾನ ಹಕ್ಕುಗಳ ಜಾಗೃತಿ ಮೂಡಿಸುವವರೆಗೆ, ಭಾರತದ ಇತಿಹಾಸದಲ್ಲಿ ಮಹಿಳೆ ಹಲವು ಎಡರು ತೊಡರುಗಳನ್ನು ಕಂಡಿರುವಳು. ತೊಟ್ಟಿಲಿನಿಂದ ಮರಣದವರೆಗೂ ಹೆಣ್ಣಿನ ಜೀವನದಲ್ಲಿ ಶಿಕ್ಷಣ, ವಿವಾಹ, ವಿಚ್ಛೇದನ, ವೈಧವ್ಯ ಮುಂತಾದ ಅನೇಕ ಘಟ್ಟಗಳಲ್ಲಿ ಅವಳು ಮಾಡಬೇಕಾದ ಮತ್ತು ಮಾಡಲೇಬಾರದ ಕಾರ್ಯಗಳನ್ನು ಧರ್ಮದ ಮೂಲಕ ವಿಧಿಸಲಾಗಿದೆ.

ಮಾನವ ಸೃಷ್ಟಿಗೆ, ಪೋಷಣೆ ಹಾಗೂ ಅಭಿವೃದ್ಧಿಯ ಹೊಣೆ ಹೊತ್ತ ಆಕೆಗೆ ಸ್ವಾತಂತ್ರ್ಯ ನೀಡದಿರುವುದು ಪುರುಷಪ್ರಧಾನ ಸಮಾಜದ ಸೋಲೇ ಎಂದು ಹೇಳಬೇಕಾಗುತ್ತದೆ. ಅವಕಾಶಗಳನ್ನು ನೀಡದೆ ನಿರ್ಬಂಧಗಳನ್ನು ಮಾತ್ರ ಹೇರಿರುವುದು ಮಾತ್ರವಲ್ಲ, ಆಕೆ ತನ್ನ ಕರ್ತವ್ಯವೆಂಬಂತೆ ಸಾಂಸ್ಥಿಕ ಚೌಕಟ್ಟಿನಲ್ಲಿಯೇ ಅವುಗಳನ್ನು ಮೌನವಾಗಿ ಸ್ವೀಕರಿಸಬೇಕಾಗಿದೆ.[೩] ಭಾರತದ ಕಾನೂನುಬದ್ಧ ವಿಷಯಗಳಾದ ಧರ್ಮಶಾಸ್ತ್ರಗಳು ಹಾಗೂ ಸಮಾನ ರೀತಿಯ ಸಾಹಿತ್ಯದಲ್ಲಿಯೂ 'ಮಹಿಳೆ' ಎಂಬ ಪದವನ್ನು ಯಾವುದೇ ಸಾಮಾಜಿಕ ಮೂಲ ಅಥವಾ ಸ್ಥಾನಮಾನವನ್ನು ಗಣನೆಗೆ ತೆಗೆದುಕೊಳ್ಳದೆ ಬಳಸಲಾಗಿದೆ. ಈ ಗ್ರಂಥಗಳಲ್ಲಿರುವ ಇನ್ನೊಂದು ಆಸಕ್ತಿದಾಯಕ ವಿಷಯವೆಂದರೆ ಪುರುಷರಿಗೆ ಸಂಬಂಧಿಸಿದಂತೆ ಸೂಕ್ಷ್ಮ ವ್ಯತ್ಯಾಸಗಳನ್ನು ಗಮನದಲ್ಲಿಟ್ಟು ವರ್ಗೀಕರಿಸಿ, ಮಹಿಳೆಯರನ್ನು ಸಾಮಾನ್ಯ ವರ್ಗದಲ್ಲಿ ಕಂಡು, ನಿಸ್ಸಂದಿಗ್ಧವಾಗಿ ತಳಸ್ತರಕ್ಕೆ ಸಮವೆಂದು ವ್ಯಾಖ್ಯಾನಿಸಿರುವುದು.[೪]

ಮಹಿಳೆಯರಿಗೆ ಅವರದೇ ಆದ ಹಿತಾಸಕ್ತಿಗಳಿರುವುದು ಸಾಧ್ಯವಿಲ್ಲವೆಂಬ ಸಂಗತಿಯು ವ್ಯಾಪಕವಾಗಿ ನೆಲೆಯೂರಿ, ಅವರ ಹಿತಾಸಕ್ತಿಗಳ ಬಗ್ಗೆ ಯೋಚಿಸುವುದು 'ಮಹಿಳೆ'ಗೆ ತಕ್ಕುದಲ್ಲವೆಂಬ ನಂಬಿಕೆಯನ್ನು ಸಮಾಜದಲ್ಲಿ ಬಿತ್ತಲಾಗಿದೆ. ನಮ್ಮ ಸಮಾಜದ ಸಂದರ್ಭದಲ್ಲಿ ಮಹಿಳೆಯೊಬ್ಬಳನ್ನು 'ನಿನಗೇನು ಬೇಕು' ಎಂಬ ಪ್ರಶ್ನೆ ಕೇಳಿದರೆ ಸಹಜವಾಗಿ ಆಕೆಯು ಗಂಡನ, ಮಕ್ಕಳ, ಕುಟುಂಬದ ಅಭ್ಯುದಯವನ್ನು ಹಾರೈಸುತ್ತಾಳೆ ವಿನಾಃ 'ತನಗೆ'ಏನು ಬೇಕು, ತನ್ನ ಆಸಕ್ತಿಗಳೇನು ಎಂಬುವುದನ್ನು ಹೇಳುವುದಿಲ್ಲ. ತನ್ನ ಹಿತಾಸಕ್ತಿಗಳ ಬಗ್ಗೆ ಯೋಚಿಸಬೇಕು ಎಂಬ ವಿಚಾರಗಳು ಮಹಿಳೆಯರ ಮನಸ್ಸಿನಲ್ಲಿ ಮೂಡದಂತೆ ಅವರನ್ನು ಬೆಳೆಸಲಾಗುತ್ತದೆ. ಮಹಿಳೆಯರು ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ಹಾಗೂ ಬದುಕನ್ನು ಕಟ್ಟಿಕೊಳ್ಳುವ ಕುರಿತು ಯೋಚಿಸುವಂತಾಗಬೇಕು. ತನ್ನ ವ್ಯಕ್ತಿತ್ವ-ಬದುಕು ದೈಹಿಕ ಭದ್ರತೆಗಳಿಗೆ ಸಂಬಂಧಿಸಿದಂತೆ ತೀರ್ಮಾನ ತೆಗೆದುಕೊಳ್ಳುವ ಹಕ್ಕು ಮಹಿಳೆಯರಿಗಿರಬೇಕು.[೫]

ಸಮಾಜದ ಪರಿಗಣನೆಯಲ್ಲಿ 'ಹೆಣ್ಣು' ಎಂಬುದು ಒಂದು ಪ್ರತ್ಯೇಕ ಜಾತಿಯೇ ಆಗಿದೆ. ಮಹಿಳೆಯರು ತಾವೇ ಹೀಗೆ ಪ್ರತ್ಯೇಕ ಜಾತಿಯಾಗಿ ಉಳಿಯಲು ಬಯಸುವುದಿಲ್ಲವಾದರೂ, ಇದೊಂದು ಸಾಮಾಜಿಕ ವಾಸ್ತವವಂತೂ ಆಗಿದೆ. ಫ್ರಾನ್ಸ್ ಚಿಂತಕಿ ಸಿಮಾನ್ ದಿ ಬೊವಾ ಹೇಳುವಂತೆ 'ಹೆಣ್ಣಾಗಿ ಯಾರೂ ಹುಟ್ಟುವುದಿಲ್ಲ, ಸಾಮಾಜಿಕವಾಗಿ ಹೆಣ್ಣಾಗಿ ರೂಪಿತವಾಗುತ್ತಾಳಷ್ಟೆ' ಎಂಬ ಮಾತು ಗಮನಾರ್ಹ. ಹೆಣ್ಣು ಎಂದರೆ ಪ್ರತ್ಯೇಕ ಭಾವನೆ, ಅವಳ ಗುಣ ಸ್ವಭಾವ, ವರ್ತನೆ ಸಾಮರ್ಥ್ಯಗಳು ಯಾವ ಸ್ವರೂಪದ್ದು ಎಂಬುವುದನೆಲ್ಲಾ ಈ ಪುರುಷ ಚಿಂತನೆ ತನಗೆ ಬೇಕಾದಂತೆ ವ್ಯಾಖ್ಯಾನಿಸಿಬಿಟ್ಟಿದೆ ಎಂದಿದ್ದಾರೆ.[೬] ಮುಂದುವರಿದು ಆಕೆ, 'ಗಂಡು ಹೆಣ್ಣುಗಳ ಪ್ರತ್ಯೇಕಿಕರಣ ಒಂದು ಜೈವಿಕ ವಾಸ್ತವ, ಅದನ್ನು ತೂರೆದು ಹಾಕಲು ಸಾಧ್ಯವೇ ಇಲ್ಲ' ಎಂದು ವಾದಿಸುತ್ತಾಳೆ.

ಹೆಂಗಸರಿಗೆ ಹಲವು ಬಿಡುಗಡೆಯ ದಾರಿಗಳಿವೆ. ಆದರೆ, ಬದುಕಿನಲ್ಲಿ ಅವೆಲ್ಲವೂ ಮುಚ್ಚಿ ಹೋಗಿರುತ್ತದೆ. ಮದುವೆಯ ಸಂಕೋಲೆ ಭಾರವಾಗಿರುವ ಪ್ರದೇಶಗಳಲ್ಲಿ ಹೆಂಡತಿಯಾದವಳು ಬಿಡುಗಡೆಯಿಲ್ಲದ ಬದುಕಿನ ಚೌಕಟ್ಟಿಗೆ ಹೇಗಾದರೂ ಹೊಂದಿಕೊಳ್ಳಬೇಕಾಗಿದೆ. ಹೆಣ್ಣಿನ ಬದುಕನ್ನು ಅವಳ ಜೈವಿಕತೆ, ಮಾನಸಿಕ ವಿಶ್ಲೇಷಣೆ ಮತ್ತು ಚಾರಿತ್ರಿಕ ವಸ್ತುಸ್ಥಿತಿಗಳ ಸಂದರ್ಭದಲ್ಲಿಟ್ಟೇ ಗ್ರಹಿಸಬೇಕೆಂಬುದು ಬೊವಾರವರ ಗ್ರಹಿಕೆ.[೭] ಚರಿತ್ರೆಯ ವಿವಿಧ ಹಂತಗಳಲ್ಲಿ ಗಂಡು, ಹೆಣ್ಣನ್ನು ಬಹುಬಗೆಯ ನಿರೀಕ್ಷೆ, ಆತಂಕ, ತಲ್ಲಣ ಹಾಗೂ ಭಯಗಳಲ್ಲಿ ನೋಡುತ್ತಾ ಭೂಮಿ ಎಂದೋ, ತಾಯಿ ಎಂದೋ, ದೇವತೆಯೆಂದೋ ದೂರವಾಗಿಯೇ ಇರಿಸಿ ತನ್ನಿಂದ ಹೊರತಾದದ್ದೆಂದು ತಿಳಿದನೇ ಹೊರತು, ತನ್ನ ಸಹಜೀವಿಯಾಗಿ ಎಂದೂ ಅವಳನ್ನು ನೋಡಲಿಲ್ಲ.

ಪ್ರಾಚೀನ ಸಮಾಜಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದ ಲೆವಿಸ್ಟ್ರಾಸ್ 'ಸಾಮಾಜಿಕ ಅಧಿಕಾರ ಯಾವಾಗಲೂ ಪುರುಷನದೇ ಎಂದು ಗ್ರಹಿಸಿದ್ದಾನೆ'. ವಂಶದ ಮುಂದುವರಿಕೆ ಹೆಣ್ಣಿನ ತಲೆಮಾರಿನಲ್ಲೇ ಆದರೂ, ಮನೆತನದ ಅಧಿಕಾರ ಮಾತ್ರ ಗಂಡು ಮಕ್ಕಳಲ್ಲೇ ನೆಲೆಯಾಗುತ್ತದೆ. ಅಲ್ಲಿ ಅವಳು ಅಧಿಕಾರದ ಮಾಧ್ಯಮವೇ ಹೊರತು ಅದರ ವಾರಸುದಾರಳಲ್ಲ. ಇತ್ತ ಆಸ್ತಿಪಾಸ್ತಿಯ ನಿರ್ವಹಣೆ ಸೋದರನಿಗೆ ಸಲ್ಲುತ್ತದೆ. ಸೋದರನೇನೂ ಸದಾಕಾಲ ಸೋದರಿಯ ಪರವಾಗಿರುವುದಿಲ್ಲ. ಸಮಯ ಬಂದರೆ ಅವನು ತಂದೆಯಾಗಿ ತನ್ನ ಸ್ಥಾನವನ್ನು ನಿರೂಪಿಸಲು ಬಯಸುತ್ತಾನೆಯೇ ಹೊರತು ಸೋದರನಾಗಿ ಅಲ್ಲ ಎಂದಿದ್ದಾನೆ.[೬]

ಮೇರಿವುಲ್ಸನ್ ಕ್ರಾಫ್ಟ್ ಪ್ರಕಾರ 'ಸ್ತ್ರೀಯರನ್ನು ಲೈಂಗಿಕ ಜೀವಿಗಳೆಂದು ಪರಿಗಣಿಸುವುದಕ್ಕಿಂತ ಮಾನವ ಜೀವಿಗಳನ್ನಾಗಿ ನೋಡಿ, ಅವರ ಬೇಡಿಕೆಗಳನ್ನು ಕೇವಲ ಮಹಿಳೆಯರ ಬೇಡಿಕೆಯನ್ನಾಗಿ ಪೂರೈಸುದಕ್ಕಿಂತ ಮಾನವ ಜೀವಿಯ ಬೇಡಿಕೆಗಳಾಗಿ ಪರಿಗಣಿಸುವುದು ತುಂಬಾ ಮುಖ್ಯ'. ಸ್ತ್ರೀಯರಲ್ಲೂ ತಾರ್ಕಿಕ ಶಕ್ತಿ, ವಿಚಾರ ಮನೋಭಾವ ಹಾಗೂ ನಿರ್ಧಾರ ಕೈಗೊಳ್ಳುವ ಸಾಮರ್ಥ್ಯವಿರುವುದರಿಂದ ಸ್ತ್ರೀಯರು ಪುರುಷರಿಗಿಂತ ಕೀಳು ಎಂಬುವುದನ್ನು ಮೇರಿ ಒಪ್ಪಿಕೊಳ್ಳುವುದಿಲ್ಲ. ಆದರೆ ಅನೇಕ ಪೀಳಿಗೆಗಳಿಂದ ಅವರ ಸಾಮರ್ಥ್ಯ ಕೌಶಲ್ಯಗಳನ್ನು ಬಳಸದೇ ಇರುವುದರಿಂದ ಅವರು ಮುರುಟಿ ಹೋಗಿದ್ದಾರೆ. ಅವರಿಗೆ ಸಾಕಷ್ಟು ಅವಕಾಶ, ಸ್ವಾತಂತ್ರ್ಯ ಹಾಗೂ ಶಿಕ್ಷಣ ದೊರೆತರೆ ತಮ್ಮ ಸಾಮರ್ಥ್ಯವನ್ನು ಬೆಳೆಸಿಕೊಂಡು ಪರಿಸ್ಥಿತಿಯನ್ನು ಉತ್ತಮಪಡಿಸಿಕೊಳ್ಳಬಹುದು ಎಂಬುದು ಅವಳ ಅಭಿಮತ.

ರೂಸೋವಿನ ವಾದಗಳಿಗೆ ಅತ್ಯಂತ ಸಮರ್ಪಕವಾದ ಪ್ರತಿವಾದಗಳನ್ನು ಮುಂದಿಡುವ ಸಂದರ್ಭ, ಸ್ತ್ರೀಯರನ್ನು ಕೇವಲ ಲೈಂಗಿಕ ಜೀವಿಗಳನ್ನಾಗಿ ಪರಿಗಣಿಸಿ ಸ್ವಾತಂತ್ರ್ಯವನ್ನು ನಿರಾಕರಿಸಿ, ಪುರುಷರಿಗೆ ಎಲ್ಲ ಸಮಯದಲ್ಲೂ ಸ್ವಾತಂತ್ರ್ಯ ಸಮಾನತೆ ನೀಡಬೇಕೆನ್ನುವ ರೂಸೋವಿನ ವಿಚಾರವನ್ನು ಕಟುವಾಗಿ ಟೀಕಿಸುತ್ತಾಳೆ. ಸ್ತ್ರೀಯರನ್ನು ಅಪರಿಪೂರ್ಣಳನ್ನಾಗಿಸಿ ಅನ್ಯಾಯದ ಸಹನೆಯನ್ನು ಒಪ್ಪದೆ, ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವದ ತತ್ವಗಳನ್ನು ಸ್ತ್ರೀಯರಿಗೂ ಅನ್ವಯಿಸಬೇಕೆಂದು ಅಭಿಪ್ರಾಯ ಪಡುತ್ತಾಳೆ. ಸಮಾಜದ ಪ್ರಗತಿಗೆ ಸ್ತ್ರೀ ಪುರುಷರ ಸಮಾನತೆ ಅತ್ಯವಶ್ಯ ಎಂದರಿತ ಮೇರಿವುಲ್ಸನ್, ೧೮ನೇ ಶತಮಾನದಲ್ಲೇ ಮಹಿಳೆಯರ ಹಕ್ಕುಗಳ ಪ್ರಶ್ನೆಗಳನ್ನು ಎತ್ತಿ ಮುಂದೆ ಸ್ತ್ರೀವಾದಿ ಚಿಂತನೆಗೆ ದಾರಿಮಾಡಿಕೊಟ್ಟಳು.[೭] ಜಗತ್ತಿನಾದ್ಯಂತ ನಾವು ಗಮನಿಸಿದರೆ, ಸ್ತ್ರೀಪರ ದನಿ ಪರಿಣಾಮಕಾರಿಯಾಗಿ ಮೂಡಿ ಬಂದು ಸಾಮೂಹಿಕ ಬದಲಾವಣೆಯನ್ನು ಉಂಟು ಮಾಡಿದುದು ಮೊದಲು ಪಾಶ್ಚಾತ್ಯ ದೇಶಗಳಲ್ಲೆ. ಹೀಗೆ ದನಿಯೆತ್ತಿದ ಆದಿ ಚಿಂತಕರಲ್ಲಿ ಪ್ರಮುಖವಾಗಿ ಹೆಸರಿಸಬೇಕಾದವರೆಂದರೆ, ಮೇರಿವುಲ್ಸನ್ ಕ್ರಾಫ್ಟ್, ವರ್ಜೀನಿಯಾ ವುಲ್ಫ್, ಸಿಮೊನ್ ದಿ ಬೊವಾ, ಬೆಟ್ಟಿ ಫ್ರೀಡನ್, ಕೇಟ್ ಮಿಲೆಟ್

ಮತ್ತು ಜರ್ಮೀ ಗ್ರಿಯರ್.[೧೦] ನಿಸರ್ಗ ಸಹಜವಾದ ಲಿಂಗಬೇಧ ನೀತಿಯಲ್ಲಿ ಹೆಣ್ಣು ಗಂಡುಗಳಿಬ್ಬರೂ ಸಮಾನವಾಗಿ ಪ್ರಧಾನರಾಗಿದ್ದರೂ, ಲಿಂಗಬೇಧ ವೈಶಿಷ್ಟ್ಯ ಸಾಮರ್ಥ್ಯಗಳೇ, ಸಮಾಜ ವ್ಯವಸ್ಥೆಯಲ್ಲಿ ಲಿಂಗತಾರತಮ್ಯಕ್ಕೆ ಕಾರಣಗಳಾಗಿಬಿಟ್ಟವು ಎಂಬುವುದು ಹೆಣ್ಣಿನ ಬದುಕಿನ ದುರಂತ. ಇಡೀ ಸಮಾಜ ವ್ಯವಸ್ಥೆಯ ನಿಯಂತ್ರಣವಷ್ಟೂ ಪುರುಷನಿಗೆ ದಕ್ಕಿಹೋದದ್ದಷ್ಟೇ ಅಲ್ಲದೆ, ಶತಮಾನಗಳಾದರೂ ಈ ತಾರತಮ್ಯದ ಬಂಧನವು ಸಡಿಲಗೊಳ್ಳದೇ ಉಳಿದು ಬರುವ ಅದಾವ ತಂತ್ರ ಈ ಸಮಾಜ ವ್ಯವಸ್ಥೆಯಲ್ಲಿದೆ ಎಂಬುವುದನ್ನು ಮಹಿಳೆಯ ಬದುಕು ಗ್ರಹಿಸಬೇಕಿದೆ. ಇಂತಹ ಸಮಾಜ ವ್ಯವಸ್ಥೆಯ ಜಾಲದಲ್ಲಿ ಸಿಲುಕಿರುವ ಮಹಿಳೆಗೆ ತನಗೊಂದು ಸ್ವಂತ ಅಸ್ಥಿತ್ವವಿದ್ದಿತು ಎಂಬುವುದನ್ನೇ ವಿಸ್ಮೃತಿಗೆ ತಳ್ಳಿಬಿಡುವಂತಾಗಿ, ಅವಳಲ್ಲಿ ತನ್ನ ದುಸ್ಥಿತಿಗೆ ಕಾರಣ ತಾನಿರುವ ವಾತಾವರಣದಲ್ಲಿದೆ ಎಂದು ಗ್ರಹಿಸುವ ಶಕ್ತಿಯೂ ಕುಂದಿ ಹೋಗಿ, ತನ್ನ ಹೆಣ್ಣು ಜನ್ಮವನ್ನೇ ನಿಂದಿಸಿಕೊಂಡು ಮೌನಿಯಾಗಬೇಕಾಯಿತು. ಆದರೆ ಇಪ್ಪತ್ತನೆಯ ಶತಮಾನದಲ್ಲಾದ ಜಾಗತಿಕ ಕಾರಣಗಳಿಂದಾಗಿ ಇತರ ದಮನಿತ ಸಮುದಾಯಗಳಂತೆ ಮಹಿಳಾ ಸಮುದಾಯವೂ ಜಾಗ್ರತಗೊಂಡು ದನಿ ಎತ್ತಲು ಅವಕಾಶಗಳನ್ನು ಕಂಡುಕೊಂಡಿತು.[೧೧]

ಭಾರತವು ರಾಜಪ್ರಭುತ್ವದಿಂದ ವಸಾಹತುಪ್ರಭುತ್ವಕ್ಕೆ ಸಂಪೂರ್ಣವಾಗಿ ಬದಲಾದಾಗ ಸ್ಥಳೀಯ ರಾಜಕಾರಣ, ಆರ್ಥಿಕತೆ ಹಾಗೂ ಸಾಮಾಜಿಕ ರಚನೆಯಲ್ಲಿ ಮಹತ್ತರ ಬದಲಾವಣೆಗಳು ಆದವು.[೧೨] ಭಾರತೀಯರು ಆಮದಾಗಿ ಬಂದ ಆದರ್ಶದ ಕಲ್ಪನೆಗಳನ್ನೂ, ಸಂಸ್ಥೆಗಳನ್ನೂ ತಮ್ಮಲ್ಲಿದ್ದ ಸಾಮಾಜಿಕ ಹಾಗೂ ಸಾಂಸ್ಕೃತಿಕ ನಡಾವಳಿಗಳಲ್ಲಿ ಹೊಂದಿಸಿಕೊಳ್ಳತೊಡಗಿದರು.ಲಿಂಗವ್ಯವಸ್ಥೆಯ ಆಯಾಮದ ಸಂಬಂಧಗಳಲ್ಲಿ ಸುಧಾರಣೆಗಳಾಗಬೇಕೆಂಬುವುದನ್ನು ಎಲ್ಲರೂ ಒಪ್ಪಿದರೆಂದೇನಲ್ಲ, ಭಾರತದ ಬುದ್ಧಿಜೀವಿಗಳಲ್ಲಿ ಹಲವರು ನಮ್ಮ ಸ್ವಂತ ಸಂಸ್ಕೃತಿಯಲ್ಲಿ ಮಹಿಳೆಯರನ್ನು ಹೇಗೆ ನಡೆಸಿಕೊಂಡು ಬಂದಿದ್ದೇವೋ ಅದೇ ಔಚಿತ್ಯ ಪೂರ್ಣವಾಗಿದೆ ಎಂಬ ಹೆಮ್ಮೆಯನ್ನೇ ತೋರಿದರು. ಆದರೆ, ಸಮಾಜದ ಸ್ವಾಸ್ಥ್ಯದ ದುಸ್ಥಿತಿಗೂ, ಅಲ್ಲಿನ ಮಹಿಳೆಯರ ಸ್ಥಿತಿಗೂ ಸಂಬಂಧವಿರುತ್ತದೆ ಎಂಬ ತರ್ಕವನ್ನು ಒಪ್ಪಿದವರು ಮಾತ್ರವೇ, ಪ್ರಗತಿ ಪಥದಲ್ಲಿ ಸ್ತ್ರೀ ಶಿಕ್ಷಣ ಹಾಗೂ ಅಭಿವೃದ್ಧಿಗಳೇ ಮೊದಲ ಹೆಜ್ಜೆಗಳು ಎಂದು ಗುರುತಿಸಿದರು.[೧೩]

೧೯೫೨ರಲ್ಲಿ ಪ್ರಕಟವಾದ ಫ್ಯಾನನ್ ರಚಿಸಿದ 'ಕಪ್ಪು ಚರ್ಮ ಬಿಳಿಯ ಮುಖವಾಡ' ಎಂಬ ಕೃತಿಯು ವಸಹತೀಕರಣಕ್ಕೊಳಪಟ್ಟ ಕಪ್ಪು ಜನರ ಮಾನಸಿಕ ಸ್ಥಿತಿಯನ್ನು ಅತ್ಯಂತ ನಿಷ್ಠುರವಾಗಿ ವಿಶ್ಲೇಷಿಸುತ್ತದೆ. ಈ ಕೃತಿಯು ಫ್ರೆಂಚರ ವಸಾಹತೀಕರಣಕ್ಕೆ ಒಳಪಟ್ಟ ಉತ್ತರ ಆಫ್ರಿಕಾದ ಆಂತಿಲೆ ಎಂಬ ಪ್ರದೇಶದ ಜನರು ಮತ್ತು ಅವರ ಸಂಸ್ಕೃತಿಗೆ ಸಂಬಂಧಿಸಿದ್ದರೂ, ಪರೋಕ್ಷವಾಗಿ, ವಸಾಹತೀಕರಣಗೊಳಪಟ್ಟ ಏಷ್ಯಾ, ಆಫ್ರಿಕಾ, ಇತ್ಯಾದಿ ಖಂಡಗಳ ಎಲ್ಲಾ ವಸಾಹತುಗಳಿಗೂ ಪ್ರಸ್ತುತವಾಗುತ್ತದೆ.[೧೪] ವಸಾಹತುಶಾಹಿಯು ತನ್ನ ಅಧೀನ ರಾಷ್ಟ್ರಗಳ ಮೇಲೆ ತನ್ನ ಪ್ರಭುತ್ವವನ್ನು

ಬಲಪಡಿಸಲು ಎಂತೆಂತಹ ಮಾರ್ಗವನ್ನು ಅನುಸರಿಸಿತು ಎಂಬುವುದನ್ನು ನಾವು ಸ್ಪಷ್ಟವಾಗಿ ಗ್ರಹಿಸಿದರೆ ಅದರಿಂದ ಬಿಡುಗಡೆ ಸಾಧ್ಯವಾಗುತ್ತದೆ ಎಂದು ಫ್ಯಾನನ್ ಮಂಡಿಸುತ್ತಾನೆ. ಫ್ಯಾನನ್ ವಿಶ್ಲೇಷಿಸುವಂತೆ 'ಮೊದಲಿಗೆ ವಸಾಹತುಶಾಹಿಯು ಅಧೀನ ರಾಷ್ಟ್ರಕ್ಕೆ ತನ್ನದೇ ಆದ ಇತಿಹಾಸ ಸಂಸ್ಕೃತಿಗಳು ಇದ್ದವು ಎಂಬುವುದನ್ನು ಅಲ್ಲಗಳೆಯುತ್ತದೆ. ಅನಂತರ ದೇಶೀಯರನ್ನು ಬರ್ಬರತೆಯ ಮೂರ್ತ ರೂಪವೆಂಬಂತೆ ಚಿತ್ರಿಸುತ್ತಾ ಕ್ರಮವಾಗಿ ಅವರ ಸಮಾಜದಲ್ಲಿ ಇಂದೇ ಅಲ್ಲದೆ ಹಿಂದೆಂದೂ ಮಾನವೀಯ ಮೌಲ್ಯಗಳ ಅರಿವು ಇರಲಿಲ್ಲವೆಂದು ದಾಖಲಿಸುತ್ತದೆ. ಅಷ್ಟೇ ಅಲ್ಲದೆ ಅವರ ಹತ್ತಿರ ಬಂದವರೆಲ್ಲರನ್ನೂ ಅವರು ನಾಶಮಾಡುವ ಪ್ರವೃತ್ತಿಯವರಾಗಿದ್ದು, ಅವರಿಗೆ ಸೌಂದರ್ಯಪ್ರಜ್ಞೆ, ನೈತಿಕತೆ ಮತ್ತು ಪ್ರೀತಿ ವಿಶ್ವಾಸಗಳ ಗಂಧವಿಲ್ಲ; ತಮ್ಮ ಇಡೀ ಬದುಕನ್ನು ಅವರು ಮೃಗೀಯ ವಾಸನೆಗಳ ತೃಪ್ತಿಗಾಗಿ ಕಳೆಯುವಂತಹವರು' ಎನ್ನುತ್ತಾನೆ. ವಸಾಹತುಶಾಹಿಯು ಕೊನೆಗೊಂಡ ಕ್ಷಣದಲ್ಲಿ ಈ ಸಮಾಜ ಮತ್ತೆ ಮೊದಲಿನ ಎಂದರೆ ಬರ್ಬರಾವಸ್ಥೆಗೆ ಮರಳುತ್ತದೆ. ವಸಾಹತುಶಾಹಿ ತಾನೂ ನಂಬಿ, ಇತರರನ್ನು ನಂಬಿಸಲು ಪ್ರಯತ್ನಿಸುತ್ತದೆ.[೧೫]

ವಸಾಹತುಶಾಹಿ ವಿಜಯವು ಕೇವಲ ಉನ್ನತ ಶಾಸ್ತ್ರಾಸ್ತ್ರಗಳ ಶಕ್ತಿ, ಮಿಲಿಟರಿ ಸಾಮರ್ಥ್ಯ, ರಾಜಕೀಯ ಶಕ್ತಿ ಅಥವಾ ಆರ್ಥಿಕ ಭಾಗ್ಯ ಮಾತ್ರ ಆಗಿರದೆ ವಸಾಹತುಶಾಹಿತ್ವವನ್ನು ಸಾಧ್ಯಗೊಳಿಸುವುದಾಗಿದೆ. ವಸಾಹತುಶಾಹಿತ್ವ ಸ್ವತಃ ನಿಯಂತ್ರಣದ ಒಂದು ಸಾಂಸ್ಕೃತಿಕ ವಿಧಾನವಾಗಿದೆ. ಅಧೀನ ರಾಷ್ಟ್ರಗಳ 'ಸಾಂಸ್ಕೃತಿಕ ವಿನಾಶ'ವನ್ನು ವ್ಯವಸ್ಥಿತವಾಗಿ ಕಾರ್ಯಗತಗೊಳಿಸುವ ಒಂದು ಘಟ್ಟದಲ್ಲಿ, ವಸಾಹತುಶಾಹಿಯು ಅಧೀನ ರಾಷ್ಟ್ರದ ಜನತೆಗೆ ತಮ್ಮ ರಾಷ್ಟ್ರತ್ವದ ಗ್ರಹಿಕೆ ಪೊಳ್ಳೆಂದು, ತಾವು ಸಂಸ್ಕೃತಿ ಎಂದು ನಂಬಿದ್ದುದು ಕೇವಲ ಪ್ರಾಣಿಸಹಜ ಪ್ರವೃತ್ತಿಯೆಂದು ಮತ್ತು ಜೀವವಿಜ್ಞಾನದ ನೆಲೆಯಲ್ಲಿಯೂ ತಮ್ಮ ದೈಹಿಕ ಮತ್ತು ಮಾನಸಿಕ ಸ್ವರೂಪವು ತುಂಬಾ ಕೆಳಮಟ್ಟದ್ದೆಂದೂ ನಂಬುವಂತೆ ಶ್ರಮಿಸುತ್ತದೆ. ಕೊನೆಗೆ ವಿರೂಪಗೊಳಿಸಿ ಸಂಪೂರ್ಣವಾಗಿ ನಾಶಗೊಳಿಸುತ್ತದೆ ಎಂದು ಫ್ಯಾನನ್ ದಾಖಲಿಸುತ್ತಾನೆ.[೧೬]

ಎಡ್ವರ್ಡ್ ಸೈದ್‌ನ ಪ್ರಕಾರ ಪೌರಸ್ತ್ಯ ಚಿಂತನೆ ಎಂದರೆ: ಪೌರ್ವಾತ್ಯ ರಾಷ್ಟ್ರಗಳನ್ನು ಕುರಿತ 'ಜ್ಞಾನ' ವನ್ನು ಮತ್ತು ವಿವಿಧ ವಾಙ್ಮಯ ಪ್ರಕಾರಗಳಲ್ಲಿ ಅವುಗಳ ನಿರೂಪಣೆಗಳನ್ನು, ಪಾಶ್ಚಿಮಾತ್ಯ ರಾಷ್ಟ್ರಗಳು ತಮ್ಮ ರಾಜಕೀಯ ಉದ್ದೇಶಗಳಿಗಾಗಿ ನಿಯಂತ್ರಿಸುವುದು ಮತ್ತು ನಿಯಂತ್ರಣದ ಮೂಲಕ ಹತ್ತೊಂಭತ್ತನೆಯ ಶತಮಾನದುದ್ದಕ್ಕೂ ಪೌರ್ವಾತ್ಯ ರಾಷ್ಟ್ರಗಳ ಮೇಲೆ ತಮ್ಮ ರಾಜಕೀಯ-ಸಾಂಸ್ಕೃತಿಕ ಸತ್ತೆಯನ್ನು ಹೇಗೆ ಭದ್ರಗೊಳಿಸಿದವು ಎಂಬುವುದರ ವಿಶ್ಲೇಷಣೆ ವ್ಯಾಖ್ಯಾನಗಳಾಗಿವೆ.[೧೭] ವಸಾಹತುವಾದ ಜ್ಞಾನದ ಮೂಲಕ ವಿಜಯ ಎನ್ನುವಾಗ ಅಧಿಕಾರ ಮತ್ತು ಪ್ರಭುತ್ವದ ಬದಲಾವಣೆಯನ್ನು ಅಲ್ಲಗಳೆಯಲಾಗುವುದಿಲ್ಲ. ವಸಾಹತುವಾದದ ಅಂತರ್ಯದಲ್ಲಿ ಬಲವಂತವಿದೆ.

ವಸಾಹತು ಆಕ್ರಮಣವು ಜಯಶಾಲಿ ಮತ್ತು ಅಸಾಧಾರಣತೆಯ ಕುರಿತು ಮಾತ್ರವಲ್ಲದೆ ದಮನಿಸಲ್ಪಟ್ಟ ಮತ್ತು ಪ್ರಭುತ್ವ ಸಾಧಿಸಿದವರಿಗೂ ಸಂಬಂಧಿಸಿದೆ. ಭಾರತ ಐರೋಪೀಕರಣಗೊಳ್ಳದೆ, ಪಾಶ್ಚಾತ್ಯರು ಭಾರತೀಯರ ಮನಸ್ಸನ್ನು ವಸಾಹತೀಕರಣ ಮಾಡಿದರು.[೧೮] ವಸಾಹತುಶಾಹಿ ಆಳ್ವಿಕೆಯ ಉದ್ದೇಶ ರಾಜಕೀಯ ಗುಲಾಮಗಿರಿಯಾಗಿದ್ದು, ಆರ್ಥಿಕವಾಗಿಯೂ ಬ್ರಿಟಿಷರು ಭಾರತದಲ್ಲಿ ಉನ್ನತ ಹುದ್ದೆಗಳನ್ನು ಅವರ ದೇಶದವರಿಗೆ ನೀಡಿದರು. ಭಾರತದಿಂದ ಕಚ್ಚಾ ವಸ್ತುಗಳನ್ನು ಬ್ರಿಟನಿಗೆ ರಫ್ತುಮಾಡಿದುದರ ಪರಿಣಾಮವಾಗಿ ಹಲವಾರು ಭಾರತೀಯ ಕುಟುಂಬಗಳು ನಿರ್ಗತಿಕರಾದವು. ವಿದೇಶದಲ್ಲಿ ಯಂತ್ರಗಳಿಂದ ತಯಾರಿಸಿದ ಉತ್ಪನ್ನಗಳೊಂದಿಗೆ ಸ್ಪರ್ಧಿಸಲಾಗದೆ ಸಂಕಷ್ಟ ಅನುಭವಿಸಬೇಕಾಯಿತು.[೧೯] ವಸಾಹತುಶಾಹಿ ಆಧುನಿಕತೆಯ ಸಂದರ್ಭದಲ್ಲಿ ಸ್ವಲ್ಪ ಮಂದಿ ಅದಕ್ಕೆ ಹೊಂದಿಕೊಳ್ಳಲು ಮತ್ತು ಆದರಿಂದ ಲಾಭಪಡೆಯಲು ಇಷ್ಟಪಡದಿರಲಿಲ್ಲ. ಕೆಲವರು ಅಂತ:ಸ್ಫೂರ್ತಿಯಿಂದ ಅಥವಾ ಲೆಕ್ಕಾಚಾರದಿಂದ ಹಾಗೆ ಮಾಡಿದರು. ವಸಾಹತುಶಾಹಿಯು ಒಂದು ಹಬ್ಬುವ ಸಂಗತಿಯಾಗಿದ್ದು ಜನರು ಒಪ್ಪಲಿ ಬಿಡಲಿ, ಅವರನ್ನು ಅನ್ಯನ್ಯ ರೀತಿಗಳಲ್ಲಿ ಸ್ಪರ್ಶಿಸಿತು. ಅದೊಂದು ವಸ್ತುಸ್ಥಿತಿಯ ಸಂಗತಿಯಾಗಿದ್ದು ಹಂಚಿಕೆ ಮತ್ತು ಮುಂದುವರಿಕೆಗಳಿಗೆ ಎಡೆಮಾಡಿಕೊಟ್ಟಿತು.[೨೦]

ಪಾಶ್ಚಿಮಾತ್ಯ ಪ್ರಗತಿಯ ಮಾದರಿಯನ್ನು ತಿರಸ್ಕರಿಸಿದ ಗಾಂಧೀಜಿಯವರ ವಾದವನ್ನು, ವಸಾಹತ್ತೋತ್ತರ ಚಿಂತಕರಲ್ಲಿ ಒಬ್ಬರಾದ ಜ್ಞಾನ್ ಪ್ರಕಾಶ್ ಹೇಳುವಂತೆ, ಗಾಂಧೀಜಿಯವರು 'ಆಧುನಿಕ ಪೂರ್ವ' ವನ್ನು 'ಅ-ಆಧುನಿಕ' ವೆಂದು ಪುನರ್ವ್ಯಾಖ್ಯಾನಿಸುವ ಮೂಲಕ ವಸಾಹತುಶಾಹಿಯ ವೈಚಾರಿಕ ಮಾರ್ಗಗಳನ್ನೇ ನೂತನ ರೀತಿಯಲ್ಲಿ ಜೋಡಿಸಿ, ವಸಾಹತುಶಾಹಿಯ ಉಗ್ರ ಟೀಕೆ ಅಹಿಂಸಾತ್ಮಕವಾದ ರೂಪವನ್ನು ಪಡೆಯುವ ಒಂದು ಪ್ರಮುಖ ವಸಾಹತ್ತೋತ್ತರ ಗ್ರಂಥವನ್ನು ಗಾಂಧಿ ಇಲ್ಲಿ ನಿರ್ಮಿಸುವಲ್ಲಿ ಸಮರ್ಥರಾದರು ಎಂಬುವುದಾಗಿದೆ.[೨೧] ಆದರೆ ಭಾರತದಲ್ಲಿ ಆಧುನೀಕರಣ ಪ್ರಕ್ರಿಯೆಗೆ ವಿದೇಶಿಯರ ಆಗಮನ ಕಾರಣೀಭೂತವಾಗಿದೆ ಎನ್ನಬಹುದು. ಬ್ರಿಟಿಷ್ ಆಳ್ವಿಕೆಯು ಸ್ಥಿರಗೊಂಡ ಮೇಲಂತೂ ಪಾಶ್ಚಾತ್ಯ ಪ್ರಭಾವ ಭಾರತೀಯ ಸಮಾಜದ ಮೇಲಾಳತೊಡಗಿತು.

ಪಾಶ್ಚಾತ್ಯೀಕರಣವೆಂಬುವುದು ಪಾಶ್ಚಿಮಾತ್ಯ ದೇಶಗಳ ಜನರ ಜೀವನ ವಿಧಾನ, ಮೌಲ್ಯಗಳು, ಆಚಾರ ವಿಚಾರಗಳು, ಜಗದ್ದೃಷ್ಟಿ ಮುಂತಾದುವುಗಳನ್ನು ವ್ಯಕ್ತಿ ಅಥವಾ ಸಮೂಹವು ಅಳವಡಿಸಿಕೊಳ್ಳುವ ಪ್ರಕ್ರಿಯೆಯನ್ನು ಸಂಕೇತಿಸುವ ಕಲ್ಪನೆಯಾಗಿದೆ. ಭಾರತದಲ್ಲಿ ಪಾಶ್ಚಾತ್ಯ ಆಡಳಿತ ವ್ಯವಸ್ಥೆ ತಂದ ಶಿಕ್ಷಣ ಹಾಗೂ ಕಾನೂನುಗಳು ಸಾಮಾಜಿಕ ಬದಲಾವಣೆಗಳಿಗೆ ಎಡೆಮಾಡಿಕೊಟ್ಟಿತು. ಅದರಲ್ಲಿ ಮೊದಲಿಗೆ ಶಿಕ್ಷಣ ವ್ಯವಸ್ಥೆ ಮಹಿಳೆಯ ಬದುಕಿನ ಆಯಾಮವನ್ನು ಬದಲಿಸಿತು. ಕ್ರಿ.ಶ ೧೮೧೩ರ ನಂತರ ಭಾರತಕ್ಕೆ ಮಿಷನರಿಗಳ ಆಗಮನಕ್ಕೆ ಅವಕಾಶ ಕಲ್ಪಿಸಲಾಯಿತು. ಹತ್ತೊಂಭತ್ತನೆಯ ಶತಮಾನದ ಉತ್ತರಾರ್ಧದಲ್ಲಿ ತಿಳುವಳಿಕೆಯುಳ್ಳ ಭಾರತೀಯರ ಸಹಕಾರದಿಂದ ೧೮೪೯ರಲ್ಲಿ

ಸತಿ ಪದ್ಧತಿ, ಹೆಣ್ಣು ಶಿಶುಹತ್ಯೆ, ಮನುಷ್ಯರ ಬಲಿ, ಗುಲಾಮಿಪದ್ಧತಿ (೧೮೩೩) ಇವುಗಳನ್ನು ನಿಷೇಧಿಸಲಾಯಿತು. ಪಾಶ್ಚಿಮಾತ್ಯ ದೇಶಗಳ ವಿಚಾರಧಾರೆಗಳು ಭಾರತದ ಸಾಂಪ್ರದಾಯಿಕ ವ್ಯವಸ್ಥೆಯನ್ನು ಪಲ್ಲಟಗೊಳ್ಳಪಡಿಸಿತು. ಎಮ್. ಎನ್. ಶ್ರೀನಿವಾಸ್ ಇವರು ತಮ್ಮ 'ಸೋಷಿಯಲ್ ಚೇಂಜ್ ಇನ್ ಇಂಡಿಯಾ' ಎಂಬ ಕೃತಿಯಲ್ಲಿ ಪಾಶ್ಚಾತ್ಯ ಪ್ರಭಾವ ಹೇಗೆ ಸಾಮಾಜಿಕ ಬದಲಾವಣೆಯನ್ನು ತರಬಲ್ಲದು? ಎಂಬುವುದನ್ನು ವಿಶ್ಲೇಷಿಸಿದ್ದಾರೆ. 'ಪಾಶ್ಚಾತ್ತೀಕರಣ'ಎಂಬುವುದು ಭಾರತದ ಸಮಾಜ ಮತ್ತು ಸಂಸ್ಕೃತಿಯಲ್ಲಿ ಕಳೆದ ೧೫೦ ವರ್ಷಗಳ ಬ್ರಿಟಿಷ್ ಆಳ್ವಿಕೆ ತಂದಂತಹ ಬದಲಾವಣೆ ಎನ್ನಬಹುದು. ಇದು ಹೊಸ ಸಂಸ್ಥೆಗಳ ಸ್ಥಾಪನೆ (ಉದಾ: ಕ್ರೈಸ್ತ ಮಿಷನ್‌ಗಳ ಸ್ಥಾಪನೆ, ಪತ್ರಿಕೆಗಳು, ಚುನಾವಣೆ) ಮಾತ್ರವಲ್ಲದೆ ಭಾರತದಲ್ಲಿದ್ದ ಹಳೆಯ ಸಂಸ್ಥೆಗಳಲ್ಲಿ ಬದಲಾವಣೆಗಳನ್ನು ತಂದಿತು. ಪಾಶ್ಚಾತ್ಯರ ಆಗಮನ ಪೂರ್ವದಲ್ಲಿ ಭಾರತದಲ್ಲಿದ್ದಂತಹ ಗುರುಕುಲ ಶಿಕ್ಷಣ ಪದ್ಧತಿ ಕೇವಲ ಮೇಲುಸ್ತರದ ವರ್ಗಕ್ಕಷ್ಟೇ ಸೀಮಿತವಾಗಿದ್ದು ಪಾರಂಪರಿಕಜ್ಞಾನ ಮೌಖಿಕ ರೂಪದಲ್ಲಿ ತಿಳಿಸಲಾಗುತ್ತಿತ್ತು. ಆದರೆ ಮೌಲ್ಯಾಧಾರಿತ ಮಾನವೀಯ ಅಂದರೆ ಜಾತಿಗಳ, ಆರ್ಥಿಕ ಪರಿಸ್ಥಿತಿ, ಧರ್ಮ, ಲಿಂಗಭೇಧವಿಲ್ಲದೆ ಶಿಕ್ಷಣದ ಪ್ರಾರಂಭ ಬ್ರಿಟಿಷ್ ಆಳ್ವಿಕೆಯಲ್ಲಿ ಕಂಡು ಬರುತ್ತದೆ ಎಂಬುವುದು ಇವರ ಅಭಿಪ್ರಾಯ. ಹೀಗೆ ಪಾಶ್ಚಾತ್ತೀಕರಣದ ವಿವಿಧ ಮಜಲುಗಳನ್ನು ತೆರೆದಿಡುತ್ತಾರೆ.[೨೨]

ಆಧುನಿಕತೆ ಅಥವಾ ಆಧುನಿಕ ದೃಷ್ಟಿಕೋನವೆಂಬುವುದು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ೧೯ನೆಯ ಶತಮಾನದಿಂದ ಪ್ರಾರಂಭವಾದ ನಗರೀಕರಣ, ಔದ್ಯೋಗೀಕರಣ, ವಿಜ್ಞಾನ ಹಾಗೂ ತಂತ್ರಜ್ಞಾನ ಕ್ಷೇತ್ರದಲ್ಲಾದ ಅಸಾಧಾರಣ ಪ್ರಗತಿ ಇವುಗಳು ರೂಪಿಸಿದ ದೃಷ್ಟಿಕೋನ.[೨೩] ಪ್ರಸ್ತುತ ಸಂಶೋಧನಾ ಅಧ್ಯಯನದಲ್ಲಿ 'ಆಧುನಿಕತೆ' ಎಂಬ ಪದವನ್ನು ಇಂಗ್ಲಿಷಿನ 'ಮಾಡರ್ನಿಟಿ' ಎಂಬ ಪದಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. ಇಂಗ್ಲಿಷಿನಲ್ಲಿ ಸಾಮಾನ್ಯವಾಗಿ ಮಾಡರ್ನಿಟಿಯನ್ನು ಸಂಪ್ರದಾಯಕ್ಕೆ (ಟ್ರೆಡಿಶನ್) ವಿರೋಧದ ನೆಲೆಯಲ್ಲಿ ಕಲ್ಪಿಸಿಕೊಂಡು ಚರ್ಚಿಸುವುದನ್ನು ಕಾಣುತ್ತೇವೆ. ಟ್ರೆಡಿಶನ್ ಎಂಬುವುದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಸಂಪ್ರದಾಯ' ಮತ್ತು 'ಪರಂಪರೆ' ಎಂಬ ಎರಡು ಪದಗಳಲ್ಲಿ ಒಂದನ್ನು ಸಾಮಾನ್ಯವಾಗಿ ಬಳಸಿದುದು ಕಂಡುಬರುತ್ತದೆ. ಭಾರತದ ಇತಿಹಾಸದಲ್ಲಿ 'ಆಧುನಿಕ'ಎಂಬುವುದು ವಸಾಹತುಶಾಹಿ ಆಡಳಿತಕ್ಕೆ ಸಂಬಂಧಿಸಿದ್ದಾಗಿದೆ. ಇದು ಕೇವಲ ಕಹಳೆ ಊದಿದ ರೀತಿಯ ಗೆಲುವಾಗಿರದೆ, ಶಕ್ತಿಯುತವಾದ ಕಾರ್ಯವಿಧಾನದ ಹಿಡಿತವಾಗಿದೆ. ಇದು ಕಾಲಕಾಲಕ್ಕೆ ಹೊರಬಂದ ಬ್ರಿಟಿಷ್ ಯುದ್ಧ ನೀತಿ, ದುರ್ಬಲ ಹಾಗೂ ಪ್ರಕ್ಷುಬ್ಧ ಉಳಿಗಮಾನ್ಯದ ಜಗತ್ತಿನ ವಿರುದ್ಧವಾಗಿದೆ.[೨೪] ವಸಾಹತುಶಾಹಿ ಆಳ್ವಿಕೆಯಲ್ಲಿ ಬಂಡವಾಳಶಾಹಿ ತನ್ನ ಅಗತ್ಯಗಳಿಗೆ ಅನುಗುಣವಾಗಿ ವ್ಯಕ್ತಿಗಳನ್ನು ಧರ್ಮ ಮತ್ತು ಉಳಿಗಮಾನ್ಯ ವ್ಯವಸ್ಥೆಯ ಬಂಧನದಿಂದ ಜೀವನವನ್ನು

ರೂಪಿಸಿಕೊಳ್ಳಬೇಕೆನ್ನುವ ಇಂಡಿವಿಜುವಲ್ ಗಳನ್ನು ಸೃಷ್ಟಿಸುವ ಕ್ರಿಯೆಯಲ್ಲಿ ತೊಡಗಬೇಕಾಯಿತು. ಈ ಕ್ರಿಯೆಯನ್ನೇ ನಾವು 'ಆಧುನಿಕತೆ' ಎನ್ನುತ್ತೇವೆ. ಅದರಂತೆ ಮನುಷ್ಯರು ವಿಚಾರವಂತರಾಗಿದ್ದು ಹಾಗೂ ಅವರ ಲಾಭ ನಷ್ಟವನ್ನು ನೋಡಿ ಜೀವನವನ್ನು ಅವರೇ ರೂಪಿಸಿಕೊಳ್ಳುವುದರಿಂದ ಅವರ ಮೇಲೆ ಯಾವುದೇ ಕಟ್ಟುಪಾಡುಗಳಿರಬಾರದು ಮತ್ತು ಸಂಪೂರ್ಣವಾಗಿ, ವ್ಯಕ್ತಿಗತವಾಗಿ, ಸ್ವತಂತ್ರವಾಗಿ ನಿರ್ಧಾರ ಕೈಗೊಳ್ಳಬೇಕು ಎಂಬಂತಹ ವಿಚಾರ ರೂಪುಗೊಂಡಿತು. ಈ ಆಧುನಿಕತೆಯು ಎಲ್ಲೆಡೆಯೂ ಹಬ್ಬಿತು. ಮೊದಲು ಯುರೋಪಿನಲ್ಲಿ ಹಾಗೂ ನಂತರ ವಸಾಹತುಶಾಹಿಯ ಬೆನ್ನಲ್ಲಿ ಭಾರತದಲ್ಲೂ ಕಂಡು ಬಂದಿತು.

ಡೇನಿಯಲ್ ಲರ್ನರ್ ಎಂಬ ಮಾನವಶಾಸಜ್ಞರು ತಮ್ಮ 'ಪಾಸಿಂಗ್ ಥ್ರೂ ದ ಟ್ರೆಡೀಶನಲ್ ಸೊಸೈಟಿ'[39] ಎಂಬ ಕೃತಿಯಲ್ಲಿ ಮಧ್ಯಪ್ರಾಚ್ಯ ಸಮಾಜಗಳ ಅಧ್ಯಯನವೊಂದರಲ್ಲಿ 'ಆಧುನೀಕರಣ' ಎಂಬ ಕಲ್ಪನೆಯನ್ನು ಬಳಸಿದ್ದಾರೆ. ಲರ್ನರ್ ಪ್ರಕಾರ ಆಧುನೀಕರಣವು ವಿವೇಕತೆ, ವೈಚಾರಿಕತೆ, ವೈಜ್ಞಾನಿಕತೆ, ಮಾನವ ಹಿತಸಾಧನೆ ಮತ್ತು ವಸ್ತುಪ್ರಾಧಾನ್ಯ ದೃಷ್ಟಿಯನ್ನೊಳಗೊಂಡ ಜೀವನಕ್ರಮವನ್ನು ಪ್ರತಿಬಿಂಬಿಸುವುದಾಗಿದೆ. ಆಧುನೀಕರಣ ಪ್ರಕ್ರಿಯೆಯು ನಾಗರಿಕತೆಯ ಏಳಿಗೆಗೆ ಅವಕಾಶ ನೀಡುವುದರೊಂದಿಗೆ ಅಕ್ಷರಜ್ಞಾನ, ಸುಸಂಸ್ಕೃತ ಬದುಕು ಮೊದಲಾದುವುಗಳಿಗೆ ಅನುವು ಮಾಡಿಕೊಡುವುದು. ಆಧುನೀಕರಣ ಪ್ರಕ್ರಿಯೆಗೆ ಒಳಪಟ್ಟ ವ್ಯಕ್ತಿ ಮೂಢನಂಬಿಕೆಗಳನ್ನು ಬದಿಗೊತ್ತಿ, ಘಟನೆಗಳ ಕಾರಣ, ಪರಿಣಾಮಗಳನ್ನು ವಿವೇಚಿಸಿ, ಸಾಧಕ ಬಾಧಕಗಳನ್ನು ವಿಮರ್ಶಿಸಿ ತೀರ್ಮಾನ ಕೈಗೊಳ್ಳುವನು ಹಾಗೂ ತನ್ನ ಸ್ವಂತ ಸಾಮರ್ಥ್ಯದ ಮೇಲೆ, ಸ್ವಾವಲಂಬನೆಯ ಬದುಕು ನಿರ್ಮಿಸಲು ಶ್ರಮಿಸುವನು. ಪಶ್ಚಿಮ ದೇಶವೊಂದರ ಪ್ರಭಾವದ ಪರಿಣಾಮವಾಗಿ ಪೌರಾತ್ಯ ದೇಶಗಳಲ್ಲಿ ಸಂಭವಿಸಬಹುದಾದ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿವರ್ತನೆಗಳನ್ನು ವಿಶ್ಲೇಷಿಸಲು ಆಧುನೀಕರಣ ಮತ್ತು ಪಾಶ್ಚಾತ್ಯೀಕರಣ ಎಂಬ ಕಲ್ಪನೆಗಳನ್ನು ಬಳಸುವುದಾದರೂ, ಇವುಗಳಲ್ಲಿ 'ಆಧುನೀಕರಣ'ದ ಕಲ್ಪನೆಯೇ ಸೂಕ್ತವಾದುದು. ಆಧುನೀಕರಣದ ಪರಿಕಲ್ಪನೆಯ ವ್ಯಾಪ್ತಿ ವಿಶಾಲವಾದುದು ಎಂಬುವುದು ಸಮಾಜಶಾಸ್ತ್ರಜ್ಞರು ಮತ್ತು ಮಾನವಶಾಸ್ತ್ರಜ್ಞರ ಅಭಿಪ್ರಾಯ.

ಆಧುನೀಕರಣವು ಪಾಶ್ಚಾತ್ಯೀಕರಣ ಹಾಗೂ ಸಂಸ್ಕೃತೀಕರಣಗಳಿಗಿಂತಲೂ ವಿಸ್ತಾರವಾದ ಅರ್ಥವ್ಯಾಪ್ತಿಯುಳ್ಳ ಕಲ್ಪನೆಯಾಗಿದೆ. ಆಧುನೀಕರಣವು ಸಾಮಾಜಿಕ ಸಂರಚನೆಯಲ್ಲಿ ಬದಲಾವಣೆಗಳನ್ನು ತರುವುದಲ್ಲದೆ ಸಾರ್ವಜನಿಕವಾಗಿ ಮಾತ್ರವಲ್ಲದೆ ವೈಯಕ್ತಿಕ ಆಕಾಂಕ್ಷೆಗಳ ಮೇಲೆ ಸಮಾಜವನ್ನು ದೃಷ್ಟಿಸುವ ಮನಪ್ರವೃತ್ತಿಯನ್ನು ಹೊಂದಿದೆ. ಸಮಕಾಲೀನ ಸಾಮಾಜಿಕ ಸಮಸ್ಯೆಗಳ ಹಾಗೂ ಬೆಳವಣಿಗೆಗಳ ಬಗೆಗಿನ ದೃಷ್ಟಿಕೋನವು ವೈಜ್ಞಾನಿಕ ಸ್ವರೂಪದ್ದೇ ಆಗಿರುವುದು. ಆಧುನಿಕತೆಯ ಕಾಲಘಟ್ಟದಲ್ಲಿ ಹಲವು ಜ್ಞಾನವಲಯ ಮತ್ತು ಕ್ರಿಯಾ ವಿಧಾನಗಳಲ್ಲಿ ಪ್ರವೇಶ ಪಡೆದ ಮಹಿಳೆಗೆ

ಪರಂಪರೆ ಇಲ್ಲದ ಅತಂತ್ರ ಮತ್ತು ಮುಜುಗರದ ಸ್ಥಿತಿ ನಿರ್ಮಾಣವಾಗಿತ್ತು. ಇದು ಸಾಹಿತ್ಯದ ಸಂದರ್ಭಕ್ಕೆ ಮಾತ್ರ ಸಂಬಂಧಿಸಿದ್ದಾಗಿರದೆ ಶಿಕ್ಷಣ, ವಿಜ್ಞಾನ, ಕಲೆ, ಉದ್ಯೋಗ, ತಂತ್ರಜ್ಞಾನ ಹೀಗೆ ಎಲ್ಲ ವಲಯಗಳಿಗೂ ಸಂಬಂಧಿಸಿದ್ದಾಗಿತ್ತು.[೨೬] ಹತ್ತೊಂಭತ್ತನೆಯ ಶತಮಾನದ ಆದಿಭಾಗದಲ್ಲಿ ಜೀವನದ ನೆನಪುಗಳನ್ನು ಬರೆದಿಟ್ಟ ಬಹುಮಟ್ಟಿನ ಹೆಂಗಸರು ಓದು ಕಲಿಯಲು ತಮಗಿದ್ದ ತೀವ್ರ ಆಸೆಯ ಬಗ್ಗೆ ಹೇಳಿಕೊಂಡಿದ್ದಾರೆ. ಉದಾಹರಣೆಗೆ ತನ್ನ ಬಾಲ್ಯದ ನೆನಪುಗಳನ್ನು ಬರೆದಿಟ್ಟ ಹೈಮಾವತಿ ಸೆನ್ (೧೮೬೬-೧೯೩೩) ಪೂರ್ವ ಬಂಗಾಲದ ಖುಲ್ನ ಜಿಲ್ಲೆಯಲ್ಲಿ ಬೆಳೆದಳು. ಸದಾ ಶಾಲೆಯ ಆವರಣದಲ್ಲಿ ಬೀಡು ಬಿಡುತ್ತಿದ್ದ ಇವಳು ಹೇಳುವಂತೆ 'ಆಫೀಸು ಆರಂಭವಾಗುವಾಗ ಶಾಲೆಯ ಕೋಣೆಗಳಿಗೆ ಹೋಗಿ ಕುಳಿತುಕೊಂಡರೂ ಶಿಕ್ಷಣ ಪಡೆಯುವ ಹಕ್ಕು ಮಾತ್ರ ನನಗಿರಲಿಲ್ಲ, ಆದರೆ ಪಾಠಗಳನ್ನು ಕೇಳುತ್ತಾ ಕುಳಿತು ಆನಂದಪಡುತ್ತಿದ್ದ ನನ್ನನ್ನು ಕಂಡರೆ ಗುರುಗಳಿಗೆ ಪ್ರೀತಿ ಇತ್ತು. ಎಲ್ಲ ವಿಷಯಗಳಲ್ಲಿ ಓರಗೆಯ ಹುಡುಗರಂತೆಯೇ ಇದ್ದೇನಾದರೂ, ಶಿಕ್ಷಣದ ಮಾತಿಗೆ ಎಷ್ಟೇ ಆದರೂ ಹೆಂಗಸು ಎನಿಸಿಕೊಂಡೆ, ಓದಿದ ಹೆಂಗಸು ವಿಧವೆಯಾಗುವುದು ಖಂಡಿತ ಎಂಬ ಮೂಢನಂಬಿಕೆ ಹೇಗೋ ಬೇರೂರಿರುವುದರಿಂದ ನನ್ನಂತಹ ಹೆಣ್ಣು ಮಕ್ಕಳೆಲ್ಲರ ಪಾಲಿಗೂ ಶಿಕ್ಷಣದ ಬಾಗಿಲು ಮುಚ್ಚಿ ಹೋದದ್ದು ಸಹಜವೇ' ಎನ್ನುತ್ತಾಳೆ.[೨೭]

ಮಹಿಳೆಯೊಬ್ಬಳು ಲೇಖಕಿಯಾಗಿ ತನ್ನ ಪ್ರತಿಭೆಯನ್ನು ಉರ್ಜಿತಗೊಳಿಸುವ ಸಂದರ್ಭದಲ್ಲಿ ಹಲವು ಸಾಮಾಜಿಕ ಸಂಗತಿಗಳು ಮುಖ್ಯವಾಗುತ್ತದೆ. ಸಮಾಜದಿಂದ ದೊರೆಯುವ ಪ್ರೋತ್ಸಾಹ, ಅವಕಾಶಗಳು, ಒಡ್ಡುವ ಪ್ರತಿಬಂಧಕ - ನಿಯಂತ್ರಣಗಳು ಅವಳ ಸಾಹಿತ್ಯ ರಚನೆಯ ಮೇಲೆ ನಿಶ್ಚಿತ ಪರಿಣಾಮವನ್ನು ಬೀರುವುದಾಗಿರುತ್ತದೆ ಎಂಬುವುದನ್ನು ಬದುಕು ಬರಹದ ವೈಜ್ಞಾನಿಕತೆಯ ಮೂಲಕ ಸ್ತ್ರೀವಾದಿ ಚಿಂತನೆಯು ಗುರುತಿಸುತ್ತಾ ಪ್ರಧಾನಧಾರೆಯ ಲಿಂಗರಾಜಕಾರಣದ ಧೋರಣೆ ಹಾಗೂ ಮಹಿಳೆಯರ ಸಾಹಿತ್ಯಿಕ ಸನ್ನಿವೇಶಗಳೆರಡನ್ನು ಮುಖಾಮುಖಿಯಾಗಿಸಿ ವಿವರಿಸಲು ಯತ್ನಿಸುತ್ತದೆ.[೨೮] ೧೮೦೯ರಲ್ಲಿ ಬಂಗಾಳದಲ್ಲಿ ಜನಿಸಿದ ರಾಸ್ಸುಂದರಿ ದೇವಿಯು ಕೊನೆಯಿಲ್ಲದ ಮನೆಗೆಲಸಗಳು, ಹನ್ನೆರಡು ಮಕ್ಕಳನ್ನು ಸುಧಾರಿಸುವ ಅವಿರತ ಹೊಣೆಗಳ ನಡುವೆಯೂ, ತನ್ನ ಓದಿನ ಆಸೆಗೆ ಹೇಗೋ ಮಾಡಿ ಸ್ವಲ್ಪ ಸಮಯವನ್ನು ಹೊಂದಿಸಿಕೊಳ್ಳುತ್ತಿದ್ದ ತನ್ನ ಹುಚ್ಚನ್ನು ನೆನೆಪಿನ ಚಿತ್ರಣಗಳಲ್ಲಿ ಹಿಡಿದಿಟ್ಟಿದ್ದಾಳೆ. ಅವಳ ಮಾತಿನಲ್ಲಿ ಹೇಳುವುದಾದರೆ 'ಮನೆಗೆಲಸದ ಸಾಗರದಲ್ಲಿ ನಾನು ಮುಳುಗಿ ಹಗಲು ರಾತ್ರಿಗಳ ಪರಿವೆಯೇ ಇಲ್ಲದೆ ದುಡಿಯುತ್ತಿದ್ದೆ. ಕ್ರಮೇಣ ಓದುವುದನ್ನು ಕಲಿಯಬೇಕೆಂಬ ಆಸೆ ನನ್ನೊಳಗೆ ತೀವ್ರವಾಯಿತು. ಅಸಹಾಯಕತೆಯಲ್ಲಿದ್ದಾಗ, ಈ ಓದುವ ಹುಚ್ಚು ನನಗೆ ಅಂಟಿತಾದರೂ ಏಕೆ? ಎಂದು ನನ್ನ ಮೇಲೆ ನನಗೆ ಕೋಪವೂ ಬರುತಿತ್ತು. ಯಾಕೆಂದರೆ ಹುಡುಗಿಯರು ಓದುವುದು ಕೆಟ್ಟದೆಂಬ ಅಭಿಪ್ರಾಯವಿದ್ದು ಹೆಂಗಸರು ಕಲಿಯುವುದನ್ನು ಜನ ಒಪ್ಪುತ್ತಿರಲಿಲ್ಲ.' ಸಂಪ್ರದಾಯ ಮತ್ತು

ಮೂಢನಂಬಿಕೆಗಳು, ಹೇಗೆ ಹೆಣ್ಣನ್ನು ಸಂಕೋಲೆಗಳಿಲ್ಲದೆ ಬಂಧಿಯಾಗಿರಿಸಿದವು ಎಂಬುವುದಕ್ಕೆ ಇದೊಂದು ಉತ್ತಮ ನಿದರ್ಶನವಾಗಿದೆ.[೨೯] ಮಹಿಳೆಯರ ಶೈಕ್ಷಣಿಕ ಪ್ರಗತಿಗೆ ಸಂಪ್ರದಾಯಗಳು ಮತ್ತು ಭಾರತೀಯರ ಆಚರಣೆಗಳು ವಿರೋಧ ವ್ಯಕ್ತಪಡಿಸಿದರೂ ೧೯೧೩ರ ಭಾರತೀಯ ಶೈಕ್ಷಣಿಕ ನೀತಿಯು ಕೆಲವೊಂದು ಸಾಮಾನ್ಯ ನಿಯಮಗಳನ್ನು ಪರಿಶೀಲನೆಗೆ ಒಳಪಡಿಸಿತು. ಅದರಂತೆ ಭಾರತದಲ್ಲಿ ಹೆಣ್ಣುಮಕ್ಕಳ ಶಿಕ್ಷಣ ಕಾರ್ಯರೂಪಕ್ಕೆ ತರುವುದರೊಂದಿಗೆ ಅವರ ಸ್ಥಾನಮಾನ ಹೆಚ್ಚಿಸುವುದು, ಶಾಲೆಗಳಲ್ಲಿ ಸ್ವಚ್ಛತೆಗೆ ಗಮನಹರಿಸುವುದು, ಮಹಿಳೆಯರನ್ನು ಶಿಕ್ಷಕಿಯರಾಗಿ ಮತ್ತು ತಪಾಸಣಾಧಿಕಾರಿಗಳಾಗಿ ನೇಮಿಸಲು ಸಲಹೆ ನೀಡಲಾಯಿತು. ಮಹಿಳಾ ಅಧ್ಯಾಪಿಕೆಯರ ಕೊರತೆ ಉಂಟಾದಾಗ ಪ್ರಾದೇಶಿಕ ಭಾಷೆಗಳನ್ನರಿತ ಮಹಿಳೆಯರಿಗೆ ವಿಶೇಷ ತರಬೇತಿ ನೀಡಿ ಶಿಕ್ಷಕಿಯರಾಗಿ ನೇಮಿಸಲು ಸೂಚಿಸಲಾಯಿತು.[೩೦]

ಮಹಿಳೆಯರು ಎಷ್ಟರ ಮಟ್ಟಿಗೆ ಆಸ್ತಿ ಹಕ್ಕನ್ನು ಪಡೆದಿದ್ದರು ಎಂಬುದು ಸರಿಯಾಗಿ ತಿಳಿದು ಬರದಿದ್ದರೂ, ಸ್ವಲ್ಪ ಮಟ್ಟಿಗೆ ಮಹಿಳೆಯರು ಕುಟುಂಬದ ಆಸ್ತಿಯ ಹೊಣೆಗಾರಿಕೆ ನಿರ್ವಹಿಸುತ್ತಿದ್ದುದು ಕಂಡು ಬರುತ್ತದೆ.[೩೧] ಭಾರತೀಯ ಸಂಸ್ಕೃತಿಯು ಆರ್ಯ ದ್ರಾವಿಡ ಸಂಸ್ಕೃತಿಯ ಸಮ್ಮಿಲನವಾಗಿದ್ದು, ಆರ್ಯರ ಕೆಲವು ಸಂಪ್ರದಾಯಗಳು ಮತ್ತು ಕಟ್ಟುಕಟ್ಟಳೆಗಳು ದ್ರಾವಿಡ ಜನರ ಜೀವನದಲ್ಲೂ, ಹಾಗೆಯೇ ದ್ರಾವಿಡ ಸಂಪ್ರದಾಯಗಳು ಆರ್ಯರಲ್ಲಿಯೂ ಬೆರೆತುಕೊಂಡಿವೆ. ಆರ್ಯ ಸಂಸ್ಕೃತಿಯ ಪ್ರಕಾರ ಪುರುಷನು ಶ್ರೇಷ್ಠನಾಗಿದ್ದು, ಇವರ ಕುಟುಂಬ ಪದ್ಧತಿ ಪಿತೃ ಪ್ರಧಾನವಾಗಿದ್ದು ಪುರುಷನೇ ಮೊದಲ ಅಧಿಕಾರವುಳ್ಳವನಾಗಿರುವನು. ದ್ರಾವಿಡ ಸಂಸ್ಕೃತಿಯ ಪ್ರಕಾರ ಹೆಣ್ಣು ಶ್ರೇಷ್ಠ ಎಂದಾಗಿದ್ದು, ಇವರು ಮಾತೃಪ್ರಧಾನ ಕುಟುಂಬ ಪದ್ಧತಿಯವರಾಗಿರುವರು. ಕ್ರಮೇಣ ಆರ್ಯ-ದ್ರಾವಿಡ ಸಂಸ್ಕೃತಿಯ ಸಮ್ಮಿಲನವಾಗಿ ಆರ್ಯರಲ್ಲಿ ಪಿತೃಪ್ರಧಾನ ಕುಟುಂಬಸ್ಥರಲ್ಲದೆ, ಮಾತೃಪ್ರಧಾನ ಕುಟುಂಬದವರೂ, ದ್ರಾವಿಡರಲ್ಲಿ ಮಾತೃಪ್ರಧಾನ ಕುಟುಂಬಸ್ಥರಲ್ಲದೆ, ಪಿತೃಪ್ರಧಾನ ಕುಟುಂಬಸ್ಥರೂ ಇರುವವರು.

ದಕ್ಷಿಣ ಕನ್ನಡ ಜಿಲ್ಲೆಯ ಸಂಸ್ಕೃತಿಯನ್ನು ಅವಲೋಕಿಸುವಾಗ ಆರ್ಯ ದ್ರಾವಿಡ ಸಂಸ್ಕೃತಿಯ ಸಂಗಮವು ಕಂಡುಬರುತ್ತದೆ. ಇಲ್ಲಿ ಶೇಕಡಾ ೬೦ರಷ್ಟು ಜನರು ಮಾತೃಪ್ರಧಾನವಾಗಿರುವ 'ಅಳಿಯಸಂತಾನ' ಕಟ್ಟುಕಟ್ಟಳೆಗಳನ್ನು ಪಾಲಿಸುವುದರ ಜೊತೆಗೆ ಪಿತೃಪ್ರಧಾನವಾದ ಮಕ್ಕಳಸಂತಾನದ ಕಟ್ಟನ್ನು ಪಾಲಿಸಿಕೊಂಡಿರುವವರೂ ಇದ್ದಾರೆ. ಅಳಿಯಸಂತಾನ ಕಟ್ಟುಕಟ್ಟಳೆಗಳ ಪ್ರಾಚೀನತೆಯನ್ನು ಅವಲೋಕಿಸುವಾಗ ಅದರ ಇರುವಿಕೆ ಬಹಳ ಪುರಾತನವಾಗಿದ್ದು, ಭೂತಾಳಪಾಂಡ್ಯನ ದಂತ ಕಥೆಯ ಪ್ರಕಾರ, ಕ್ರಿ.ಶ ೭೮ನೇ ಇಸವಿಯಲ್ಲಿ ತುಳುನಾಡನ್ನು ಆಳಿಕೊಂಡಿದ್ದ ಆತನಿಂದಲೇ ಈ ಕಟ್ಟು ಉಂಟಾಯಿಯತೆಂದು ಹೇಳುವುದಕ್ಕೆ ಚರಿತ್ರೆಯಲ್ಲಿ ಯಾವ ಆಧಾರಗಳೂ ದೊರೆಯುವುದಿಲ್ಲ. ಅಳಿಯಸಂತಾನ ಕಟ್ಟು ದಕ್ಷಿಣ ಕನ್ನಡ ಜಿಲ್ಲೆಗೆ ಮೀಸಲಾಗಿರದೆ ದೇಶದ ಇತರ ಕಡೆಗಳಲ್ಲೂ

ಆಚರಣೆಯಲ್ಲಿದ್ದುದರಿಂದ ಭೂತಾಳಪಾಂಡ್ಯನಿಂದಲೇ ಈ ಕಟ್ಟು ಉಂಟಾದುದು ಎಂದು ನಂಬಲಸಾಧ್ಯವಾದುದು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಳಿಯಸಂತಾನ ಕಟ್ಟು ಪಾಲಿಸಿಕೊಂಡು ಬಂದಿರುವ ಜನರಲ್ಲಿ ಮುಖ್ಯವಾಗಿ ಜೈನರು, ಬಂಟರು ಮತ್ತು ನಾಡವರು, ಬಿಲ್ಲವರು, ಮೊಗೇರರು, ಮೊಗವೀರರು, ಆಗಸರು, ಅಂಡೆಕೊರಗರು, ಹಳೇಪೈಕರು, ಕರಿಂಜಾರ, ಕುಂಬಾರರು, ಕ್ಷೌರಿಕರು, ದೇವಾಡಿಗರು, ಕೋಮಟಿಗಳು (ಹರಿಶೆಟ್ಟಿಯವರು), ಮಲವರು, ಮಾಸಾಧಿಕರು, ನಾಯರರು, ಪಾಂಚಾಲದವರು, ನೇಯ್ಗೆಯವರು, ಹೊಲೆಯರು, ಬಾಕುಡರು, ಮುಂಡಾಲರು, ಪಂಬದರು, ಸಾಲಿಯ ಮುಂತಾದವರು ಇರುವರು.

ಡಾ. ಬಿ.ಎ ಸಾಲೆತ್ತೂರವರು ತಿಳಿಸುವಂತೆ ಕ್ರಿ.ಶ ೧೪೪೧ ರಿಂದ ಕ್ರಿ.ಶ ೧೪೪೪ರ ವರೆಗೆ ತುಳುನಾಡನ್ನು ಆಳಿಕೊಂಡಿದ್ದ ಅಳೂಪ ವಂಶದ ಕುಲಶೇಖರ ಎಂಬ ರಾಜನು, ಕ್ರಿ.ಶ ೧೪೪೪ರಲ್ಲಿ ತನ್ನ ರಾಜ್ಯವನ್ನು ಸೋದರಳಿಯನಿಗೆ ಬಿಟ್ಟು ಕೊಟ್ಟು ತನ್ನ ವಂಶದಲ್ಲಿ ಅಳಿಯಸಂತಾನ ಕಟ್ಟುಕಟ್ಟಳೆಗಳನ್ನು ಜಾರಿಗೆ ತಂದನು. ಕ್ರಿ.ಶ ೧೫೦೭ರಲ್ಲಿ ಕೆಳದಿ ಸಂಸ್ಥಾನದ ರಾಜ ಚೌಡಪ್ಪ ನಾಯಕನು, ಇದಕ್ಕೆ ಶಿಲಾಶಾಸನದ ಮುಖಾಂತರ ಕಾನೂನಿನ ಮುದ್ರೆಯೊತ್ತಿದನು. ಹೀಗೆ ಸುಮಾರು ೧೩ನೇ ಶತಮಾನದವರೆಗೆ ಕೇವಲ ಪದ್ಧತಿಯಾಗಿ ಉಳಿದಿದ್ದ ಅಳಿಯಸಂತಾನಕಟ್ಟು ಕ್ರಮೇಣ ರಾಜರುಗಳ ಮನ್ನಣೆಗೆ ಪಾತ್ರವಾಗಿ ೧೯ನೇ ಶತಮಾನದ ಆದಿಯಿಂದ ಈ ಪದ್ಧತಿಯು ಕಾನೂನಾಗಿ ಮಾರ್ಪಟ್ಟಿತು.[೨೧] ತುಳುಭಾಷೆಯು ಬಳಕೆಯಲ್ಲಿರುವ ದಕ್ಷಿಣ ಕನ್ನಡ ಜಿಲ್ಲೆಯು ಅಶೋಕನ ಕಾಲದ ಸತಿಯಪುತ್ರವೆಂಬ ಸಲಹೆಯನ್ನಿತ್ತಿರುವರಲ್ಲಿ ಪ್ರಖ್ಯಾತ ಇತಿಹಾಸಕಾರ ವಿನ್ಸೆಂಟ್ ಸ್ಮಿತ್ ಮೊದಲಿಗನು. ವಿದ್ವಾಂಸರಾದ ಡಾ. ಕೆ. ವಿ. ರಮೇಶ್ ಕೂಡಾ ತಮ್ಮ 'ತುಳುನಾಡಿನ ಇತಿಹಾಸ' ಎಂಬ ಕೃತಿಯಲ್ಲಿ ಮೇಲಿನ ಹೇಳಿಕೆಯನ್ನು ಸಮರ್ಥಿಸಿದ್ದಾರೆ. ಕ್ರಿ.ಶ ಮೂರನೆಯ ಶತಮಾನದಲ್ಲಿ ಗ್ರೀಸ್ ದೇಶದ ಭೂಗೋಳ ಶಾಸ್ತ್ರಜ್ಞನಾದ ಟಾಲೆಮಿಯು ಭಾರತದ ಒಲೋಖೊಯ್ರವು ಕಡಲುಗಳ್ಳರ ಕೇಂದ್ರವಾಗಿತ್ತು ಎಂದಿದ್ದಾನೆ. ಈ ಒಲೊಖೊಯ್ರವು ಆಳುವ ಖೇಡ ಎಂದರೆ ತುಳುನಾಡು ಇರಬೇಕೆಂದು ಇತಿಹಾಸಗಾರರು ಅಭಿಪ್ರಾಯ ಪಡುತ್ತಾರೆ.[೨೨]

ಧಾರ್ಮಿಕ ಮತ್ತು ಸಾಂಸ್ಕೃತಿಕ ನೆಲೆಯಲ್ಲಿ ಮಾತ್ರವಲ್ಲ, ರಾಜಕೀಯ ನೆಲೆಯಲ್ಲೂ ಅನನ್ಯತೆಯನ್ನು ಹೊಂದಿರುವ ನಾಡು ತುಳುನಾಡು. ಮಾತೃವಂಶೀಯ ಸಂಸ್ಕೃತಿಯನ್ನು ಹೊಂದಿದ್ದು, ಸಾಮಾಜಿಕವಾಗಿ ಆಕೆಗೆ ರಕ್ಷಣೆ ನೀಡಿದ್ದರೂ, ತುಳುನಾಡಿನ ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯಲ್ಲಿ ಮಹಿಳೆ ರಾಜಕೀಯಾತ್ಮಕ ಚಟುವಟಿಕೆಗಳಲ್ಲಿ ಶೂನ್ಯವಾಗಿದ್ದಾಳೆ. ಸಣ್ಣಪುಟ್ಟ ಗ್ರಾಮ ಪಂಚಾಯತಿಗಳಂತಹ ಸಭೆಗಳಲ್ಲಿ ಕೂಡಾ ಆಕೆಗೆ ನಿಷೇಧವಿತ್ತು. ತುಳುನಾಡ ಸಿರಿಪಾಡ್ದನದಲ್ಲಿ ಹೆಣ್ಣಿಗೆ ಪಟ್ಟವೇ? ಎಂದು ಕೇಳಿದ ಪ್ರಸಂಗ ಇದೆ. ಆದರೆ ತುಳುನಾಡಿನ ಇತಿಹಾಸದಲ್ಲಿ ಮಹಿಳೆ

ಒಡ್ಡೋಲಗಕೊಟ್ಟು ರಾಜ್ಯಭಾರ ಮಾಡಿದ ಮಾಹಿತಿಗಳು ದೊರಕುತ್ತದೆ.[೩೪] ಗಣಪತಿರಾವ್ ಐಗಳ್ ಇವರು ಶಾಸನಾಧಾರಿತ ಅಧ್ಯಯನದಿಂದ ತಿಳಿಸುವಂತೆ, ವಾಸ್ತವದಲ್ಲಿ ತುಳುನಾಡಿನ ಮಹಿಳೆಯರಿಗೆ ವಿಧಿವತ್ತಾಗಿ ಪಟ್ಟಾಭಿಷೇಕ ಆಗಿತ್ತು ಎಂಬುವುದು ಸಂದೇಹನೀಯವಾಗಿದೆ. 'ಬಲ್ಲಾಳ ಮನೆತನಗಳಲ್ಲಿ ಪಟ್ಟ ಆಗುವಾಗ ಸ್ತ್ರೀ ಪುರುಷರಿಬ್ಬರಿಗೂ ಪಟ್ಟ ಆಗುವ ಸಂಪ್ರದಾಯ ರೂಢಿಯಲ್ಲಿತ್ತು. ಆದರೆ ಭಾವ, ಬಾಳಿಕೆ, ಐರಾಡಿ ಮುಂತಾದ ಮನೆಗಳ 'ಗಡಿ' ಮಹಿಳೆಯರಿಗೆ ಆಗುವಂತಿರಲಿಲ್ಲ'.[೩೫]

ತುಳುವರೆಂದು ಕರೆಯಲ್ಪಡುವ ಹಿಂದೂಗಳು ದಕ್ಷಿಣ ಕನ್ನಡ ಜಿಲ್ಲೆಯ ಮೂಲ ನಿವಾಸಿಗಳು. ಹೊಯ್ಸಳರ ಕಾಲದಿಂದ ಕಾರ್ಕಳ ಮತ್ತು ಮೂಡಬಿದ್ರೆಗಳಲ್ಲಿ ಜೈನಸಮಾಜ ಪ್ರಮುಖ ಸಮುದಾಯವಾಗಿತ್ತು.[೩೬] ಕ್ರಿ.ಶ ೭ನೇ ಶತಮಾನದಲ್ಲಿ ಪರ್ಷಿಯನ್ನರು ಮತ್ತು ಅರಬ್ ವ್ಯಾಪಾರಿಗಳು ಇಲ್ಲಿನ ಮಹಿಳೆಯರನ್ನು ವಿವಾಹವಾಗಿ ಪಶ್ಚಿಮ ಕರಾವಳಿಯಲ್ಲಿ ವ್ಯಾಪಾರ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡರು. ಮಾಪ್ಲಾಗಳು ಇಲ್ಲಿನ ತುಳು ಭಾಷಿಗರೊಂದಿಗೆ ಸಂಬಂಧ ಬೆಳೆಸಿ, ಇಲ್ಲಿನ ಅನುವಂಶೀಯತೆಯ ನಿಯಮವನ್ನು ಪಾಲಿಸಿದರು. ಉತ್ತರ ಕರ್ನಾಟಕದ ಭಟ್ಕಳದಲ್ಲಿ ವ್ಯಾಪಾರದಲ್ಲಿ ತೊಡಗಿದ್ದ ಅರಬ್ಬರ ಸಂಪರ್ಕದಿಂದ ಮತಾಂತರಗೊಂಡವರು. ಅವರ ಸಂತತಿಯವರನ್ನು ಮಾಪ್ಲಾ ಅಥವಾ ನಾಯಾವತರೆಂದು ಕರೆಯುತ್ತಾರೆ.[೩೭]

ಕ್ರೈಸ್ತರಲ್ಲಿ ಪ್ರಮುಖವಾಗಿ ಕ್ಯಾಥೋಲಿಕ್ ಕ್ರೈಸ್ತರು, ಇಲ್ಲಿಯ ಸ್ಥಳೀಯರಾಗಿದ್ದರೂ ಅವರ ಸಂಖ್ಯೆ ತುಂಬಾ ವಿರಳವಾಗಿದ್ದು ಇವರಲ್ಲಿ ಗೋವಾದ ವಲಸಿಗರೂ ಸೇರಿದ್ದಾರೆ. ನಂತರದಲ್ಲಿ ಬಾಸೆಲ್ ಮಿಷನರಿಗಳಿಂದ ಮತಾಂತರಗೊಂಡ ಪ್ರೊಟೆಸ್ಟಂಟರೂ ಇದ್ದರು. ಗೋವಾದ ಕ್ಯಾಥೋಲಿಕ್ ಕ್ರೈಸ್ತರು ಕೊಂಕಣಿ ಮಾತನಾಡುವವರಾಗಿದ್ದು, ಸ್ಥಳೀಯ ಕ್ರೈಸ್ತರು ತುಳು ಮತ್ತು ಕನ್ನಡ ಭಾಷೆಯನ್ನು ಮಾತನಾಡುತ್ತಿದ್ದರು. ಮತಾಂತರಗೊಂಡವರು ಉಳ್ಳಾಲ ಮತ್ತು ಸುರತ್ಕಲ್ ಪ್ರದೇಶಗಳ ಮೀನುಗಾರ ವರ್ಗದವರಾಗಿದ್ದು ತದನಂತರ ಇತರ ಜಾತಿಯವರೂ ಸೇರಲು ಪ್ರಾರಂಭಿಸಿದರು.

ಗೋವಾದ ಕ್ರೈಸ್ತರು ಪ್ರಭಾವಶಾಲಿ ಜನಾಂಗೀಯ ಹಿನ್ನೆಲೆಯನ್ನು ಹೊಂದಿದ್ದು, ಹೆಚ್ಚಿನವರು ಅಲ್ಲಿನ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರ ವರ್ಗಗಳಿಗೆ ಸೇರಿದವರಾಗಿದ್ದರು. ಕ್ರೈಸ್ತಧರ್ಮಕ್ಕೆ ಪರಿವರಿವರ್ತನೆಗೊಂಡವರಲ್ಲಿ ಕೆಲವು ಸ್ಥಳೀಯರು ಜೈನ ಧರ್ಮೀಯರಾಗಿದ್ದು, ಬಾಸೆಲ್ ಮಿಷನ್ ಪ್ರಭಾವದಿಂದ ಪರಿವರ್ತನೆಗೊಂಡವರಲ್ಲಿ ಹೆಚ್ಚಿನವರು ಬಿಲ್ಲವ ಮತ್ತು ಬಂಟ ಸಮುದಾಯಕ್ಕೆ (ಬ್ರಾಹ್ಮಣೇತರ ವರ್ಗ) ಸೇರಿದವರಾಗಿದ್ದರು. ಐತಿಹ್ಯಗಳ ಪ್ರಕಾರ ಭಾರತದ ಪಶ್ಚಿಮ ಕರಾವಳಿಯಲ್ಲಿ ಕ್ರಿ.ಶ ೩ ನೇ ಶತಮಾನದಲ್ಲಿ ಕ್ರೈಸ್ತಧರ್ಮವು ಪ್ರವೇಶವಾಯಿತು ಎನ್ನಲಾಗಿದೆ. ಪೋರ್ಚುಗೀಸರು ತಾವು ಭೇಟಿ ನೀಡಿದ ಪ್ರದೇಶಗಳಲ್ಲಿ ಕ್ರೈಸ್ತಧರ್ಮ ಪ್ರಚಾರಕ್ಕೆ ಅನುದಾನ ನೀಡಿ, ದೇಶೀಯ ರಾಜರೊಡನೆ ಮಾಡಿದ ಒಪ್ಪಂದಗಳಲ್ಲಿ ಮೊದಲನೇ ಪ್ರಾಶಸ್ತ್ಯ ಕ್ರೈಸ್ತಧರ್ಮದ ಪ್ರಚಾರವೇ ಆಗಿತ್ತು. ಹೀಗಾಗಿ

ಪೋರ್ಚುಗೀಸರ ಪ್ರಭಾವ ಪಶ್ಚಿಮ ಕರಾವಳಿಯಲ್ಲಿ ತೀವ್ರವಾಗಿ ಫ್ರಾನ್ಸಿಸ್ ಫ್ರಿಯರ್ಸ್ (Franciscan Friars) ಇವರ ಭೋಧನೆಯೊಂದಿಗೆ ಮಿಷನ್ ಸ್ಥಾಪನೆಯಾಯಿತೆಂದು, ಕ್ರಿ.ಶ ೧೬೦೦ರಲ್ಲಿ ಪೋಪ್ ರಿಂದ ಕಳುಹಿಸಲ್ಪಟ್ಟ ಗೋವಾದ ಆರ್ಚ್ ಬಿಷಪ್ ಆಲೆಕ್ಸೀಸ್ ಮಿನೇಜಸ್ (Alexis Menezes) ತಿಳಿಸುತ್ತಾನೆ.[೩೮] ಕ್ರಿ.ಶ ೧೬೨೩ರಲ್ಲಿ ಮಂಗಳೂರಿಗೆ ಭೇಟಿ ನೀಡಿದ ಡೆಲ್ಲಾವೆಲ್ಲಿಯು ಪೋರ್ಚುಗೀಸ್ ಕೋಟೆಯಲ್ಲಿ ಒಂದು ಚರ್ಚು ಮತ್ತು ಅದರ ಹೊರಾಂಗಣದ ಎರಡು ಚರ್ಚುಗಳ ಮಾಹಿತಿಯನ್ನು ನೀಡುತ್ತಾನೆ. ಮರಾಠರ ಧಾಳಿಯಿಂದ ತಪ್ಪಿಸಿಕೊಳ್ಳಲು ಗೋವಾದಿಂದ ಬಂದ ವಲಸಿಗರು ಕೆನರಾದಲ್ಲಿದ್ದ ವಿಪುಲವಾದ ಮಳೆ ಮತ್ತು ತುಲನಾತ್ಮಕ ನೆಲೆಯಲ್ಲಿ ತಾವು ಕಂಡುಕೊಂಡ ಭದ್ರ ಸರಕಾರ, ಅವರನ್ನು ಇಲ್ಲಿಯೇ ಉಳಿಯುವಂತೆ ಮಾಡಿದ್ದರಿಂದ ಕ್ರೈಸ್ತರ ಸಂಖ್ಯೆ ಹೆಚ್ಚಿತು.[೩೯] ೧೮೪೫ರಲ್ಲಿ ಪ್ರತ್ಯೇಕ ಅಪೊಸ್ತೋಲಿಕ್ ಕಾರ್ಮೆಲ್ ಪಾದ್ರಿಗಳನ್ನು ಮಂಗಳೂರಿಗೆ ನೇಮಿಸಲಾಯಿತು ಮತ್ತು ೧೮೭೮ರಲ್ಲಿ ಜೆಸ್ವೀಟರು ಕಾರ್ಮೆಲೈಟರ ಸ್ಥಾನವನ್ನು ಪಡೆದುಕೊಂಡರು.

ರೋಮನ್ ಕ್ಯಾಥೋಲಿಕರಾಗಿ ಮತಾಂತರಗೊಂಡರೂ ಸಂಪೂರ್ಣವಾಗಿ ಜಾತಿಯ ಬಲೆಯಿಂದ ಹೊರಬರದೆ ಬಮ್ಮಣರು ಅಥವಾ ಬ್ರಾಹ್ಮಣರು (Bammans or Brahmins), ಚರೋಡಾರು ಅಥವಾ ಕ್ಷತ್ರಿಯರು (charodas or Kshatriyas), ಶೂದ್ರಿ ಅಥವಾ ಶೂದ್ರರು (Sudirs or Sudras), ಮಡಿವಾಳರು ಮತ್ತು ಉಪ್ಪು ತಯಾರಕರು (Washermen and salt-makers) ಹಿಂದೂಗಳಂತೆ ಉಡುಪು ಧರಿಸಿ, ಚರ್ಚುಗಳಿಗೆ ಹೋಗುವ ಸಂದರ್ಭದಲ್ಲಿ ತಲೆಯಿಂದ ಭುಜದವರೆಗೆ ನಿಲುವಂಗಿ ಹಾಗೂ ಒಳಉಡುಪಿನ ರೀತಿಯಲ್ಲಿ ಪಾದದವರೆಗೆ ಉದ್ದನೆಯ ನಿಲುವಂಗಿಯನ್ನು ಧರಿಸುತ್ತಿದ್ದರು. ವಿವಾಹಿತ ಮಹಿಳೆಯರು ಹಿಂದೂ ಮಹಿಳೆಯರು ಧರಿಸುವಂತೆ ಬಾಲಯೇಸುವಿನ ಚಿತ್ರವಿರುವ ತಾಳಿಯನ್ನು ಧರಿಸುವ ಕ್ರಮವಿತ್ತು. ಮತ ಪರಿವರ್ತನೆಯಾದರೂ ರೋಮನ್ ಕ್ಯಾಥೋಲಿಕರು ಈ ಪ್ರದೇಶದ ಸಾಂಸ್ಕೃತಿಕ ಆಚರಣೆಗಳಿಗೆ ತಮ್ಮನ್ನು ತೊಡಗಿಸಿಕೊಂಡರು ಎಂಬುವುದು ಗಮನಿಸಬೇಕಾದ ಅಂಶವಾಗಿದೆ.[೪೦]

ಕೆನರಾ ಮತ್ತು ಮಲಬಾರ್ ಪ್ರದೇಶಗಳು ವಸಾಹತು ಆಳ್ವಿಕೆಗೆ ಒಳಪಟ್ಟ ನಂತರ ೧೮೦೦ರ ಫೆಬ್ರವರಿ ೧ರಂದು ಕ್ಯಾಪ್ಟನ್ ಮುನ್ರೋರವರನ್ನು (ಆನಂತರ ಸರ್. ಥಾಮಸ್ ಮುನ್ರೊ) ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ ಇದರ ಅಧೀನದಲ್ಲಿ ಕೆನರಾದ ಮೊದಲ ಕಲೆಕ್ಟರನಾಗಿ ನೇಮಿಸಲಾಯಿತು. ಮೊದಲು 'ವ್ಯಾಪಾರದಿಂದಾಗಿ ಆಡಳಿತ' ಎಂಬಂತಿದ್ದ ಕಂಪೆನಿ ಸರಕಾರದ ನೀತಿಯು ನಂತರದಲ್ಲಿ 'ಆಡಳಿತ ಆದಾಯದ ಮೂಲವಾಗಿ ವ್ಯಾಪಾರ' ಎಂಬಂತಾಗಿ ವ್ಯಾಪಾರಕೇಂದ್ರವೇ ಆಡಳಿತ ಕೇಂದ್ರವಾಯಿತು. ಹೀಗಾಗಿ ಶತಮಾನಗಳಿಂದ ವ್ಯಾಪಾರ ಕೇಂದ್ರವಾಗಿದ್ದ ಮಂಗಳೂರು, ನಂತರದಲ್ಲಿ

ವಸಾಹತುಶಾಹಿ ಸರಕಾರದ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಆಡಳಿತ ಕೇಂದ್ರವಾಗಿ ಮಹತ್ವವನ್ನು ಪಡೆಯಿತು.[೪೧] ಸಾಮಾನ್ಯ ವರ್ಗೀಕರಣದಂತೆ ದಕ್ಷಿಣ ಕನ್ನಡ ಜಿಲ್ಲೆಯ ಜನಸಂಖ್ಯೆಯನ್ನು ಹಿಂದೂಗಳು, ಮುಸಲ್ಮಾನರು, ಕ್ರೈಸ್ತರು ಮತ್ತು ಜೈನರೆಂದು ವರ್ಗೀಕರಿಸಲಾಗಿದೆ. ಅವರ ಶೇಕಡಾವಾರು ಅನುಪಾತಗಳು ಇಂತಿವೆ.[೪೨]

| | | |
|---|---|---|
| ಹಿಂದೂಗಳು | - | ೮೧.೬೮ |
| ಮುಸಲ್ಮಾನರು | - | ೧೦.೬೦ |
| ಕ್ರೈಸ್ತರು | - | ೬.೭೫ |
| ಜೈನರು | - | ೦.೯೭ |
| ಒಟ್ಟು | - | ೧೦೦.೦೦ |

ಒಂದು ನಾಡನ್ನಾಗಲಿ, ಒಂದು ಸಂಸ್ಕೃತಿಯನ್ನಾಗಲಿ ಕಟ್ಟಬೇಕಾದರೆ ಆ ಸಮಾಜದ ಕೆಳವರ್ಗದವರ ಕಾಣಿಕೆ ಹೆಚ್ಚು ಮಹತ್ವದ್ದು, ಆದರೆ ಅದು ಎಲ್ಲರಿಗೂ ಪ್ರತ್ಯಕ್ಷವಾಗಿ ಕಾಣದೆ ಇರುವುದರಿಂದ ಶ್ರಮಿಕ ವರ್ಗದವರು ನಿರ್ಲಕ್ಷಿತರಾಗುತ್ತಾರೆ. ಪರೋಕ್ಷವಾಗಿ ಆ ನಾಡಿನ ವ್ಯಾಪಾರ, ಕೃಷಿ, ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಎಲ್ಲಾ ನಿರ್ಲಕ್ಷಿತ ಸಮುದಾಯಗಳ ಪಾತ್ರವೇ ದೊಡ್ಡದಾಗಿದ್ದರೂ, ಬೆಳಕಿಗೆ ಬರುವಂಥವವರು ಮತ್ತು ಫಲಭೋಗಿಗಳು ಸಾಮಾನ್ಯವಾಗಿ ಶ್ರೀಮಂತಿಕೆ, ಬಲ ಅಧಿಕಾರ ಹೊಂದಿರುವ ಮೇಲ್ವರ್ಗದರೇ ಆಗಿರುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯು ಇಷ್ಟೊಂದು ಸಮೃದ್ಧಿ, ಅಭಿವೃದ್ಧಿ ಕಾಣಲು ಇಂತಹ ಕೆಳವರ್ಗದವರ ಕೊಡುಗೆಯೇ ಕಾರಣ ಎಂಬುವುದನ್ನು ಕ್ರಿ.ಶ ೧೮ನೇ ಶತಮಾನದ ಕೊನೆಯ ಹೊತ್ತಿಗೆ ಬ್ರಿಟಿಷ್ ಆಳ್ವಿಕೆಯ ಎಲ್ಲಾ ಪ್ರದೇಶಗಳನ್ನು ಸರ್ವೇಕ್ಷಣೆ ಮಾಡಲು ಬಂದ ಫ್ರಾನ್ಸಿಸ್ ಬುಕಾನನ್ ಬಹಳ ಸ್ಪಷ್ಟವಾಗಿ ದಾಖಲಿಸಿದ್ದಾನೆ. ಅಲ್ಲಿಯ ಜಾತಿ, ಜನಾಂಗಗಳ ಸ್ಥಾನಮಾನಗಳ, ಅವರ ವೃತ್ತಿಗಳ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಬದುಕಿನ ಚಿತ್ರಣವನ್ನು ಬಹಳ ಚೆನ್ನಾಗಿ ಸೂಕ್ಷ್ಮವಾಗಿ ನೀಡಿದ್ದಾನೆ.

ಹತ್ತೊಂಭತ್ತನೆಯ ಶತಮಾನದಲ್ಲಿ ಪಾಶ್ಚಿಮಾತ್ಯ ಪ್ರಭಾವದಿಂದಾಗಿ ಬದುಕನ್ನು ಅರಿಯುವ, ಪ್ರಪಂಚವನ್ನು ನೋಡುವ, ವರ್ಗೀಕರಿಸುವ, ತಿಳಿಯುವ, ಪರಿಭಾಷೆ, ನುಡಿಗಟ್ಟುಗಳು ಬದಲಾದವು.[೪೩] ಬ್ರಿಟಿಷ್ ಆಳ್ವಿಕೆ ಸಮಾಜದಲ್ಲಿ ಒಂದು ರೀತಿಯ ಸಂಕೀರ್ಣತೆಯನ್ನು ಹುಟ್ಟು ಹಾಕಿದರೂ ಅಲ್ಲಿ ಬದಲಾವಣೆಗೆ ಅವಕಾಶವಿತ್ತು. ಅನೇಕ ನಗರ ಸಮುದಾಯಗಳು ತಮ್ಮ ತಮ್ಮ ಸಮುದಾಯಗಳ ಏಳಿಗೆಯ ಕುರಿತು ಆಲೋಚಿಸುವ ಹಾಗೂ ಅದಕ್ಕೆ ಸಂಬಂಧಿಸಿದ ಸಂಘ ಸಂಸ್ಥೆಗಳನ್ನು ಹುಟ್ಟು ಹಾಕುವ ಕೆಲಸದಲ್ಲಿ ತೊಡಗಿದವು.[೪೪] ಬ್ರಿಟಿಷ್ ಆಡಳಿತವು ವಿದೇಶಿ ಆಡಳಿತದ ಇತರ ನಿದರ್ಶನಗಳಿಗಿಂತ ಬಲುಮಟ್ಟಿಗೆ ಸೂಕ್ಷ್ಮವಾಗಿ ಒಳನುಗ್ಗಿ ತೀವ್ರವಾಗಿ ಮತ್ತು ಭಿನ್ನವಾಗಿ ಪ್ರವಿಸಿತು ಮತ್ತು ವ್ಯಕ್ತಗೊಳಿಸಿತು.[೪೫]

ವಸಾಹತುಶಾಹಿ ಆಳ್ವಿಕೆ ಭದ್ರಗೊಂಡಂತೆ ಅವರು ತರಬಯಸಿದ ಬದಲಾವಣೆಗಳು ಚಾಲನೆಗೊಂಡವು. ನೂತನ ಶಿಕ್ಷಣಕ್ರಮ ನಂತರದಲ್ಲಿ ಮಹಿಳೆ ಕ್ರೀಯಾಶೀಲಳಾಗಬಹುದಾದ ಕ್ಷೇತ್ರಗಳನ್ನು ವಿಸ್ತರಿಸಿತು. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖ ಬಂದರು ಪ್ರದೇಶವಾದ ಮಂಗಳೂರಿನಲ್ಲಿ ಹುಟ್ಟಿ ಬೆಳೆದು, ತನ್ನ ತಾಯ್ನಾಡಿನ ನೆನಪುಗಳನ್ನು ಸಮಾಜ ಸುಧಾರಕಿ ಹಾಗೂ ರಾಷ್ಟ್ರೀಯ ಹೋರಾಟಗಾರ್ತಿಯಾದ ಕಮಲಾದೇವಿ ಚಟ್ಟೋಪಾಧ್ಯಾಯರು ಅವಲೋಕಿಸುವಂತೆ 'ಪಶ್ಚಿಮ ಘಟ್ಟದ ಕಣಿವೆಯಲ್ಲಿಯ ಹರಿದ್ವರ್ಣದ ತಮಾಲ ವೃಕ್ಷಗಳ ಸಮೂಹದಿಂದ ಶೋಭಿಸುವ ಸಮುದ್ರ, ಸರೋವರಗಳ ಮಧುರ ಕ್ಷಾರ ಪ್ರವಾಹದಿಂದ ಹರಿಯುವ ನೇತ್ರಾವತಿ ಮತ್ತು ಗುರುಪುರ ನದಿಗಳು; ಒಂದೆಡೆ ಪರ್ವತದ ಎತ್ತರವಾದ ಅಭೇಧ್ಯವಾದ ಗೋಡೆ, ಇನ್ನೊಂದೆಡೆ ಅಪರಿಮಿತ ವಿಸ್ತಾರವಾದ ಸಮುದ್ರ, ಇವೆರಡರ ಮಧ್ಯೆ ಬಂಧಿಯಾಗಿರುವ ಈ ನಗರ ಹೆದರಿ ನಿಂತ ಒಬ್ಬ ಸುಂದರಿಯಂತೆ ಕಾಣುತ್ತಾಳೆ. ದೂರದಿಂದ ನೋಡುವವರಿಗೆ ಈ ನಗರ ವಿಸ್ತಾರವಾದ ಹಸಿರು ಹಾಸಿಗೆಯಂತೆನಿಸುತ್ತದೆ. ಇಲ್ಲಿಯ ಸತ್ವಯುತ ಕೆಂಪು ಮಣ್ಣು ತನ್ನ ಮಕ್ಕಳಿಗೆ ಹೆಚ್ಚಿನ ಕಷ್ಟವಿಲ್ಲದೆ ಬೇಡಿದ್ದೆಲ್ಲವನ್ನು ಕೊಡುತ್ತಿದೆ' ಎಂದಿದ್ದಾರೆ.[೪೬] ಸಾಂಪ್ರದಾಯಿಕ ವ್ಯವಸ್ಥೆಯ ಬಲಿಪಶುವಾಗಿ, ನಂತರ ಬದುಕಿನಲ್ಲಿ ಸವಾಲುಗಳನ್ನೆದುರಿಸಿ, ದಿಟ್ಟತೆಯನ್ನು ತೋರಿಸಿದ ಕಮಲಾದೇವಿಯವರು ಇತರರಿಗೂ ಮಾದರಿಯಾಗಿದ್ದಾರೆ.

## ೧.೨ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಪ್ರಸ್ತುತ ಸಂಶೋಧನಾ ಅಧ್ಯಯನದ ಶೀರ್ಷಿಕೆಯು ವಸಾಹತುಶಾಹಿ ಆಧುನಿಕತೆ ಮತ್ತು ಮಹಿಳೆ (ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬುವುದಾಗಿದ್ದು, ಈ ಕೆಳಗಿನ ಉದ್ದೇಶಗಳನ್ನು ಹೊಂದಿದೆ.

- ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯನ್ನು ಆಳಿದ ಬ್ರಿಟಿಷರ ಆಳ್ವಿಕೆಯಲ್ಲಿ ಉಂಟಾದ ಸಾಮಾಜಿಕ ಸ್ಥಿತ್ಯಂತರಗಳಲ್ಲಿ ಮಹಿಳೆಯರನ್ನು ದೃಷ್ಟಿಕೋನದಲ್ಲಿಟ್ಟು ಪರಾಮರ್ಶಿಸುವುದಾಗಿದೆ.
- ವಸಾಹತು ಕಾಲಘಟ್ಟದ ದಕ್ಷಿಣ ಕನ್ನಡ ಜಿಲ್ಲೆಗೆ ಆಗಮಿಸಿದ ಮಿಷನರಿಗಳ ಚಟುವಟಿಕೆಗಳು, ಅವರು ಸ್ಥಾಪಿಸಿದ ಶೈಕ್ಷಣಿಕ ಸಂಸ್ಥೆಗಳ ಧನಾತ್ಮಕ ಮತ್ತು ಋಣಾತ್ಮಕ ಪ್ರಭಾವವನ್ನು ಅವಲೋಕಿಸಲಾಗುವುದು.
- ವಸಾಹತುಶಾಹಿ ಪ್ರಭುತ್ವದ ಕಾಲದಲ್ಲಾದ ಶೈಕ್ಷಣಿಕ ಸ್ಥಿತ್ಯಂತರಗಳು ಮಹಿಳೆಗೆ ಧ್ವನಿ ನೀಡಿತೇ? ಎಂಬುವುದನ್ನು ಚರ್ಚಿಸುವುದಾಗಿದೆ.

- ರಾಷ್ಟ್ರೀಯ ಹೋರಾಟಗಳಲ್ಲಿ ಪುರುಷರಿಗೆ ಹೆಗಲುಕೊಟ್ಟು ಭಾಗವಹಿಸಿದರೂ, ಗುರುತಿಸಲ್ಪಡದ ಮಹಿಳೆಯರ ಪಾತ್ರವನ್ನು ಬಿಂಬಿಸುವುದಾಗಿದೆ.
- ಅಸ್ಮಿತೆಯೇ ದೊರಕದ ಸಮಾಜದ ಕೆಳವರ್ಗದ ಮಹಿಳೆಯರ ಸ್ಥಿತಿಗತಿಗಳನ್ನು ಸಂದರ್ಶನದ ಮೂಲಕ ವಿಶ್ಲೇಷಿಸುವುದು.
- ಸಾಮಾಜಿಕ ಮತ್ತು ಆರ್ಥಿಕವಾಗಿ ವಸಾಹತುಶಾಹಿ ಪ್ರಭುತ್ವವನ್ನು ಸ್ತ್ರೀಪರ ಹಿನ್ನೆಲೆಯಲ್ಲಿ ಪರಾಮರ್ಶಿಸುವುದು.

ನನ್ನ ಸಂಶೋಧನಾ ಅಧ್ಯಯನದಲ್ಲಿ ಮಹಿಳೆಯನ್ನು ಯಾವುದೇ ವರ್ಗ, ಜಾತಿ, ಮತ ಅಥವಾ ಧರ್ಮಕ್ಕೆ ಸೀಮಿತಗೊಳಿಸದೆ ಸಾಮಾನ್ಯವಾಗಿ ಮಹಿಳಾ ಸಮುದಾಯವನ್ನು ಪರಿಗಣಿಸಲಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಮಹಿಳೆಯ ಸ್ಥಾನಮಾನ, ಸ್ಥಿತಿಗತಿಗಳನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸಲಾಗಿದೆ. 'ಮಹಿಳೆಯರು' ಎನ್ನುವಾಗ ಐತಿಹಾಸಿಕವಾಗಿ ಕೆಳವರ್ಗದ, ಮೇಲ್ವರ್ಗದ, ರಾಜಮನೆತನಗಳ, ಆಡಳಿತರೂಢ ಕುಟುಂಬಗಳ ಮಹಿಳೆಯರು ಹಾಗೂ ವಸಾಹತುಶಾಹಿ ಕಾಲದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟಗಳಲ್ಲಿ ಭಾಗವಹಿಸಿದ ಮಹಿಳೆಯರು, ಸಮಾಜ ಸುಧಾರಣಾ ಚಳವಳಿಗಳಲ್ಲಿ ಭಾಗವಹಿಸಿದ ಸ್ತ್ರೀವರ್ಗ, ಅವರ ನಾಯಕರು ಮಾತ್ರವಲ್ಲದೆ, ಸ್ವಾತಂತ್ರ್ಯಪೂರ್ವ ದಕ್ಷಿಣ ಕನ್ನಡದಲ್ಲಿ ಆಳ್ವಿಕೆ ನಡೆಸಿದ ಮಹಿಳೆಯರ ಕುರಿತು ಚರ್ಚಿಸಲಾಗಿದೆ. ವಸಾಹತುಶಾಹಿ ಆಧುನಿಕತೆ ಮತ್ತು ಮಹಿಳೆಗೆ ಸಂಬಂಧಿಸಿದ ವಿಷಯಗಳನ್ನು ಪ್ರಸಕ್ತ ಭಾರತದ ಚರಿತ್ರಲೇಖನಶಾಸ್ತ್ರದ ಚೌಕಟ್ಟಿನೊಳಗೆ ಚರ್ಚಿಸಲಾಗಿದೆ. ಅಧ್ಯಯನ ಕ್ಷೇತ್ರವು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಭಾಗಗಳಾದ ಉಡುಪಿ ಜಿಲ್ಲೆ ಹಾಗೂ ಕೇರಳ ರಾಜ್ಯದ ಕಾಸರಗೋಡು ಜಿಲ್ಲೆಯಲ್ಲಿನ ಭಾಗಗಳನ್ನು ಒಳಗೊಂಡಿರುತ್ತದೆ.

## ೧.೩ ಅಧ್ಯಯನದ ವಿಧಾನ :

ನನ್ನ ಸಂಶೋಧನಾ ಅಧ್ಯಯನದ ಶೀರ್ಷಿಕೆಯಾದ ವಸಾಹತುಶಾಹಿ ಆಧುನಿಕತೆ ಮತ್ತು ಮಹಿಳೆ (ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಅಧ್ಯಯನ ನಡೆಸಲು ಸಮಾಜವಿಜ್ಞಾನಗಳ ವಿಷಯದಲ್ಲಿ ಸಂಶೋಧನೆ ನಡೆಸುವಾಗ ಬಳಸಲ್ಪಡುವ ವಿಧಾನಗಳನ್ನು ಬಳಸಲಾಗುತ್ತದೆ. ವಿಶ್ಲೇಷಣೆ, ಸಂದರ್ಶನ, ವಿಮರ್ಶೆ ಮತ್ತು ಪತ್ರಾಗಾರ ವಿಧಾನಗಳನ್ನು ಅಳವಡಿಸಿಕೊಂಡು ಮಾಹಿತಿಗಳನ್ನು ಸಂಗ್ರಹಿಸಿ ಚರ್ಚಿಸಲಾಗಿದೆ. ಉದ್ದೇಶಿತ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ದತ್ತಾಂಶಗಳನ್ನು, ಮಾಹಿತಿಗಳನ್ನು ಪ್ರಾಥಮಿಕ ಮೂಲವಾದ ವಿಷಯಗಳನ್ನು ಹಾಗೂ ದಾಖಲೆಗಳನ್ನು ಪರಾಮರ್ಶಿಸಿ, ವಸಾಹತುಶಾಹಿ ಆಧುನಿಕತೆ ಮತ್ತು ಮಹಿಳೆ ವಿಷಯದ

ಕುರಿತ ಮಾಹಿತಿಗಳನ್ನು ಅವಲೋಕಿಸುವ ಪ್ರಯತ್ನ ಮಾಡಲಾಗಿದೆ. ಪ್ರಸ್ತುತ ಅಧ್ಯಯನವು ಪ್ರಾಥಮಿಕ ಹಾಗೂ ದ್ವಿತೀಯ ಆಕರಗಳನ್ನು ಅವಲಂಬಿತವಾಗಿದೆ. ಸಂಶೋಧನಾ ಅಧ್ಯಯನದ ಮೂಲ ಆಕರವಾಗಿ ತಮಿಳುನಾಡು, ಮೈಸೂರು, ಗೋವಾ, ಮಂಗಳೂರು ಪತ್ರಾಗಾರಗಳಿಂದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ವಸಾಹತುಶಾಹಿ ಕಾಲಘಟ್ಟದಲ್ಲಿ ತುಳುನಾಡಿನಲ್ಲಿ ಮಿಷನರಿ ಚಟುವಟಿಕೆಗಳನ್ನು ಶೋಧಿಸಲು ೧೮೩೪ರಿಂದ ೧೯೧೪ರ ವರೆಗಿನ ಬಾಸೆಲ್ ಮಿಷನ್ ಇದರ ವಾರ್ಷಿಕ ವರದಿಗಳು ಸಹಕಾರಿಯಾಗಿದೆ. ಈ ವರದಿಗಳು ರಕ್ಷಣಾ ಸ್ವರೂಪದಲ್ಲಿದ್ದು ಮಿಷನರಿ ಅಧಿಕಾರಿವರ್ಗ ಮತ್ತು ದಾನಿಗಳಿಗೆ ಮಾಹಿತಿ ನೀಡುವ ಉದ್ದೇಶವನ್ನು ಹೊಂದಿತ್ತು. ಮಿಷನರಿಗಳು ನಿರಂತರವಾಗಿ ಪ್ರಕಟಿಸುತ್ತಿದ್ದ ಗ್ರಂಥಗಳು, ವ್ಯಾಕರಣ ಮತ್ತು ಶಬ್ದ ಕೋಶಗಳಿಂದಲೂ ಮಾಹಿತಿ ಸಂಗ್ರಹಿಸಲಾಗಿದೆ. ವಿವಿಧ ಗ್ರಂಥಾಲಯ ಮತ್ತು ಪತ್ರಾಗಾರಗಳಲ್ಲಿ ದೊರೆತ ಪತ್ರಿಕೆಗಳು, ನಿಯತಕಾಲಿಕೆಗಳು, ಸವಿಸಂಚಿಕೆಗಳು, ಕರಪತ್ರಗಳು ಹಾಗೂ ಇನ್ನಿತರ ವರದಿಗಳನ್ನು ಅಧ್ಯಯನದ ಭಾಗವಾಗಿ ಬಳಸಿಕೊಳ್ಳಲಾಗಿದೆ. ಇವುಗಳಲ್ಲಿ ಮುಖ್ಯವಾಗಿ ಮಂಗಳೂರು ಸಮಾಚಾರ, ಕ್ರೈಸ್ತ ಸಭಾ ಪತ್ರ, ವೈದಿಕ ಮಿತ್ರ, ಸತ್ಯವ್ರತ, ಕರ್ನಾಟಕ ಕ್ರೈಸ್ತ ಬಂಧು, ಸತ್ಯ ದೀಪಿಕೆ, ಭೋಧಕ ಭೋಧಿನಿ, ಕ್ರೈಸ್ತ ಹಿತವಾದಿ, ಮ್ಯಾಂಗಲೋರ್ ಮ್ಯಾಗಜೀನ್, ಕರ್ನಾಟಕ ಜೆಸ್ವಿಟ್ ಸೆಂಟಿನರಿ ಸಂಚಿಕೆ, ರಾಕ್ಣೋ ಪತ್ರಿಕೆ, ರಾಷ್ಟ್ರಮತ, ರಾಷ್ಟಬಂಧು, ನವಯುಗ, ಸ್ವದೇಶಾಭಿಮಾನಿ ಮುಂತಾದುವುಗಳು ಉಪಯುಕ್ತವಾಗಿದೆ.

## ೧.೪ ಈವರೆಗೆ ಆಗಿರುವ ಅಧ್ಯಯನಗಳ ಸಮೀಕ್ಷೆ

ವಸಾಹತುಶಾಹಿ ಆಧುನಿಕತೆ ಮತ್ತು ಮಹಿಳೆ (ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರಾಥಮಿಕ ಆಕರಗಳು, ಪ್ರಕಟಿತ ಮತ್ತು ಅಪ್ರಕಟಿತ ಆಕರಗಳನ್ನು ಅಳವಡಿಸಿಕೊಳ್ಳಲಾಗಿದೆ. ವಿದ್ವಾಂಸರಾದ ಗಣಪತಿರಾವ್ ಐಗಳ್, ಬಿ.ಎ. ಸಾಲೆತ್ತೂರು, ಕೆ.ವಿ ರಮೇಶ್, ಪಿ.ಗುರುರಾಜ ಭಟ್, ಕೆ.ಜಿ ವಸಂತ ಮಾಧವ ಮತ್ತು ಸೂರ್ಯನಾಥ್ ಯು. ಕಾಮತ್ ಇವರು ತುಳುನಾಡಿನ ಕುರಿತು ಆಳವಾದ ಅಧ್ಯಯನವನ್ನು ನಡೆಸಿದ್ದಾರೆ. ಈ ಗ್ರಂಥಗಳು ಶಾಸನಗಳ ಆಧಾರದ ಮೇರೆಗೆ ದಕ್ಷಿಣ ಕನ್ನಡ ಜಿಲ್ಲೆಯ ಕುರಿತು ಬೆಳಕು ಚೆಲ್ಲುತ್ತದೆ. ಅದಾಗ್ಯೂ ಅವರ ಬರವಣಿಗೆಗಳು ರಾಷ್ಟ್ರೀಯತೆ ಮತ್ತು ಸ್ಥಳೀಯತೆಯ ಪ್ರತಿಷ್ಠೆಯಿಂದ ಕೂಡಿದ್ದು ಮಹಿಳೆಯರ ಕುರಿತಂತೆ ಇರುವ ಮಾಹಿತಿ ಅತ್ಯಲ್ಪವಾಗಿರುತ್ತದೆ.

೧೯೮೮ರಲ್ಲಿ ಪ್ರಭಾಕರ್ ಪೀಟರ್ ವಿಲ್ಸನ್ ಇವರು ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ 'ಬಾಸೆಲ್ ಮಿಷನ್ ಇನ್ ಸೌತ್ ಕೆನರಾ' ೧೮೩೪ -೧೯೪೭ ಎಂಬ ಅಪ್ರಕಟಿತ ಸಂಶೋಧನಾ ಗ್ರಂಥವು ಬಾಸೆಲ್ ಮಿಷನ್ನಿನ ಕಾರ್ಯಾಚರಣೆ ಕುರಿತು ವಿಸ್ತಾರವಾದ ಮಾಹಿತಿಯನ್ನು ನೀಡುತ್ತದೆ. ಬಾಸೆಲ್

ಮಿಷನ್ ಶೀರ್ಷಿಕೆ ಸೂಚಿಸುವಂತೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಿಷನರಿಗಳು ಶೈಕ್ಷಣಿಕವಾಗಿ, ಕೈಗಾರಿಕೆ ಮತ್ತು ವಾಣಿಜ್ಯ ಕ್ಷೇತ್ರಗಳಲ್ಲಿ ಮಾಡಿದ ಸಾಧನೆಗಳ ದಾಖಲೆಗಳನ್ನು ಚರ್ಚಿಸಲಾಗಿದೆ. ಆದರೆ ಮಹಿಳೆ ಕುರಿತಂತೆ ಚರ್ಚೆಗಳು ಅಧ್ಯಯನದಲ್ಲಿ ಕಂಡು ಬರುವುದಿಲ್ಲ.

ಡೆನ್ನಿಸ್ ಫೆರ್ನಾಂಡಿಸ್‌ರವರು ೨೦೦೬ರಲ್ಲಿ ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ 'ತುಳು ವರ್ಲ್ಡ್ ಇನ್ ಯುರೋಪಿಯನ್ ರೈಟಿಂಗ್ಸ್' ಎಂಬ ಅಪ್ರಕಟಿತ ಪಿಎಚ್.ಡಿ ಪ್ರಬಂಧವು ವಸಾಹತು ಬರವಣಿಗೆಗಳಲ್ಲಿ ವಿಶೇಷವಾಗಿ ಮಿಷನರಿ ಬರವಣಿಗೆಗಳಲ್ಲಿ ಬಾಸೆಲ್ ಮಿಷನ್ ನೇಮಿಸಿದ ಬೈಬಲ್ ಮಹಿಳೆಯರ ಕಾರ್ಯಚಟುವಟಿಕೆಗಳ ಕುರಿತು ಮಾಹಿತಿ ನೀಡುತ್ತದೆ. ಸುವಾರ್ತೆ ಸಾರಲು ಮಿಷನರಿಗಳು ಹೇಗೆ ಮಹಿಳೆಯರ ಸಹಕಾರ ಪಡೆದರು ಎಂಬುವುದನ್ನು ಚರ್ಚಿಸಲಾಗಿದೆ.

ಸಿಲ್ವಿಯ ರೇಗೋ ಇವರು ೨೦೧೨ರಲ್ಲಿ ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ 'ಇಂಡಿಯನ್ ವಿಮೆನ್ ಆಟೋಬಯೋಗ್ರಫರ್ಸ್ ಆಫ್ ದಿ ನ್ಯಾಷನಲಿಷ್ಟ್ ಪೀರಿಯಡ್: ಎ ಜೆಂಡರ್ ಅನಾಲಿಸಿಸ್' ಎಂಬ ಅಪ್ರಕಟಿತ ಸಂಶೋಧನಾ ಗ್ರಂಥವು ಹತ್ತೊಂಭತ್ತನೆಯ ಶತಮಾನದ ಉತ್ತರ ಭಾಗ ಹಾಗೂ ಇಪ್ಪತ್ತನೆಯ ಶತಮಾನದ ಪೂರ್ವ ಕಾಲದ ಮಹಾರಾಷ್ಟ್ರದ ಮಹಿಳೆಯರ ಆತ್ಮಚರಿತ್ರೆಗಳ ಚರ್ಚೆಯಾಗಿದೆ. ಸ್ತ್ರೀ ಶಿಕ್ಷಣಕ್ಕೆ ಪ್ರಾಶಸ್ತ್ಯ ನೀಡದಿದ್ದ ಕಾಲಘಟ್ಟದಲ್ಲಿ ಮಹಿಳಾ ಸಬಲೀಕರಣಕ್ಕಾಗಿ ಹೋರಾಡಿದ ರಮಾಬಾಯಿ ರಾನಡೆ ಮತ್ತು ಪಾರ್ವತಿಬಾಯಿ ಅಠವಾಳೆಯವರ ಕಾರ್ಯಗಳನ್ನು ಅವರ ಆತ್ಮಚರಿತ್ರೆಯ ಮೂಲಕ ಅವಲೋಕಿಸಲಾಗಿದೆ. ಕ್ರೈಸ್ತ ಮಿಷನರಿಗಳು ಸ್ಥಾಪಿಸಿದ ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಣವನ್ನು ಪಡೆದ ಮಹಿಳೆಯರು ತಮಗೆ ದೊರಕಿದ ಹೊಸ ಅವಕಾಶದ ಪ್ರಯೋಜನವನ್ನು ಮಹಿಳಾ ಸಬಲೀಕರಣಕ್ಕಾಗಿ ಬಳಸಿಕೊಳ್ಳಲಾದ ಬಗೆಯನ್ನು ಕೂಡಾ ಚರ್ಚಿಸಲಾಗಿದೆ.

ಸುಜಯ ಸುವರ್ಣ ಇವರು ೨೦೧೩ರಲ್ಲಿ ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ 'ಎಡುಕೇಷನ್ ಆಂಡ್ ಡೈಮೆನ್ಶನ್ಸ್ ಆಫ್ ಸೋಷಲ್ ಚೇಂಜ್ ಇನ್ ಕೊಲೋನಿಯಲ್ ಸೌತ್ ಕೆನರಾ' (೧೮೩೪-೧೯೪೭) ಎಂಬ ಅಪ್ರಕಟಿತ ಸಂಶೋಧನಾ ಗ್ರಂಥದಲ್ಲಿ ಭಾರತದಲ್ಲಿ ಮಿಷನರಿಗಳ ಆಗಮನದ ನಂತರ ಸ್ಥಾಪಿತವಾದ ಶೈಕ್ಷಣಿಕ ಸಂಸ್ಥೆಗಳು ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಮಹಿಳೆಯರ ಸಾಮಾಜಿಕ ಬದಲಾವಣೆಯಲ್ಲಿ ಶಿಕ್ಷಣದ ಪಾತ್ರವನ್ನು ಚರ್ಚಿಸಲಾಗಿದೆ.

ವೀಣಾ ಮ್ಯಾಬೆನ್ ಇವರು ೨೦೧೨ರಲ್ಲಿ ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ 'ಮಿಷನರಿ ನರೇಟಿವ್ಸ್' ಎಂಬ ಸಂಶೋಧನಾ ಗ್ರಂಥದಲ್ಲಿ ಬಾಸೆಲ್ ಮಿಷನ್ ಕೈಗೊಂಡ ಅಭಿವೃದ್ಧಿಪರ ಕಾರ್ಯಗಳ ಬಗ್ಗೆ ಚರ್ಚಿಸುತ್ತಾರೆ. ಮಿಷನರಿಗಳಿಗೆ ಸಹಾಯಕರಾಗಿದ್ದ ಅವರ ಮಡದಿಯರು ನೀಡಿದ ಕೊಡುಗೆಗಳು,

ಹೆಣ್ಣುಮಕ್ಕಳ ಶಾಲೆಗಳ ಸ್ಥಾಪನೆ, ಕ್ರಿಸ್ತನ ಸುವಾರ್ತೆಯನ್ನು ಬೈಬಲ್ ಮಹಿಳೆಯರು ತೀವ್ರಗತಿಯಲ್ಲಿ ಪ್ರಚಾರ ಪಡಿಸಿದ ಬಗೆ ಹಾಗೂ ಬೈಬಲ್ ಮಹಿಳೆಯರ ಪಾತ್ರವನ್ನು ಅವಲೋಕಿಸಲಾಗಿದೆ. ಪರ್ನೀತ್ ಹೇಯರ್ ಇವರು ೨೦೧೧ರಲ್ಲಿ ಪಂಜಾಬಿ ಯುನಿವರ್ಸಿಟಿ, ಪಟಿಯಾಲ ಇಲ್ಲಿಗೆ ಸಲ್ಲಿಸಿದ 'ವಿಮೆನ್ ಇನ್ ಕೊಲೋನಿಯಲ್ ಪಂಜಾಬ್' (೧೯೦೧ -೧೯೪೭) ಎಂಬ ಸಂಶೋಧನಾ ಗ್ರಂಥವು ಪಂಜಾಬಿನಲ್ಲಿ ವಸಾಹತುಶಾಹಿ ಆಡಳಿತದ ಪ್ರಭಾವ ಮತ್ತು ಸಮಾಜ ಸುಧಾರಣಾ ಸಂಸ್ಥೆಗಳ ಕಾರ್ಯಗಳು, ವಸಾಹತು ಕಾಲಘಟ್ಟದ ಶಿಕ್ಷಣಕ್ಕೆ ಸ್ಥಳೀಯರು ತೆರೆದುಕೊಂಡ ರೀತಿ, ರಾಷ್ಟ್ರೀಯ ಹೋರಾಟದ ವಿವಿಧ ಮಜಲುಗಳ ಕುರಿತು ಚರ್ಚಿಸುತ್ತದೆ. ಮಹಿಳೆಯರ ಕುರಿತಂತೆ ಪ್ರಕಟಿಸಲ್ಪಟ್ಟಿರುವ ಕೃತಿಗಳ ಗ್ರಂಥವಿಮರ್ಶೆಯನ್ನು ಮಾಡಲಾಗಿದೆ.

ಜಾನಕಿ ನಾಯರ್ ಇವರ 'ವಿಮೆನ್ ಆಂಡ್ ಲಾ ಇನ್ ಕೊಲೋನಿಯಲ್ ಇಂಡಿಯಾ' ಎಂಬ ಕೃತಿಯಲ್ಲಿ ವಸಾಹತುಶಾಹಿ ಕಾಲಘಟ್ಟದಲ್ಲಿ ಕಾನೂನುಗಳ ಮುಖಾಂತರ ನಡೆದ ಬದಲಾವಣೆಗಳನ್ನು ವಿಶ್ಲೇಷಿಸಲಾಗಿದೆ. ವಸಾಹತು ಆಡಳಿತ ಮತ್ತು ಆಧುನಿಕ ವಿದ್ಯಾವಂತ ವರ್ಗಗಳ ಆಸಕ್ತಿಯ ಮೇರೆಗೆ ಬಂದ ಶಾಸನಾತ್ಮಕ ಸುಧಾರಣೆಗಳನ್ನು ಈ ಕೃತಿಯು ಚರ್ಚಿಸುತ್ತದೆ. ಶಕುಂತಲಾದೇವಿಯವರ 'ಟ್ರೆಡೀಷನ್ ಆಂಡ್ ಮೋಡರ್ನಿಟಿ ಎಮಾಂಗ್ ಇಂಡಿಯನ್ ವಿಮೆನ್' ಎಂಬ ಕೃತಿಯು ಪ್ರಾಚೀನ ಭಾರತದಲ್ಲಿ ಮಹಿಳೆಯ ಸ್ಥಾನಮಾನ, ತದನಂತರದ ಮಧ್ಯಯುಗೀನ ಭಾರತದಲ್ಲಿ ಬದಲಾದ ಸನ್ನಿವೇಶಗಳು, ಮಹಿಳಾ ಸಂಬಂಧಿ ಸಾಮಾಜಿಕ ಪಿಡುಗುಗಳೆಂಬ ಸಂದಿಗ್ಧಗಳ ಅಧೀನತೆಗಳ ಕುರಿತಾಗಿದೆ. ಆಧುನಿಕತೆಗೆ ಸ್ಪಂದಿಸಿ, ರಾಜಕೀಯ, ಶಿಕ್ಷಣ ಮತ್ತು ವಿವಿಧ ಕ್ಷೇತ್ರಗಳಲ್ಲಿ ಮಹಿಳೆ ಗುರುತಿಸಲ್ಪಟ್ಟ ಬಗೆಯನ್ನು ಚರ್ಚಿಸಲಾಗಿದೆ. ಐತಿಹಾಸಿಕ ಮತ್ತು ತುಲನಾತ್ಮಕ ದೃಷ್ಟಿಯಲ್ಲೂ ಭಾರತೀಯ ಮಹಿಳೆಯರ ಪಾತ್ರವನ್ನು ಬಿಂಬಿಸಲಾಗಿದೆ.

ಎಲಿಝಾ ಕೆಂಟ್ ಇವರ 'ಕನ್ವರ್ಟಿಂಗ್ ಜೆಂಡರ್ ಆಂಡ್ ಪ್ರೊಟೆಸ್ಟೆಂಟ್ ಕ್ರಿಸ್ಟಿಯಾನಿಟಿ ಇನ್ ಸೌತ್' ಎಂಬ ಕೃತಿಯಲ್ಲಿ ಮತಾಂತರ ಪ್ರಕ್ರಿಯೆ ಎಂಬುವುದು ಹೇಗೆ ಜನರ ಸಾಮಾಜಿಕ ಮಗ್ಗುಲುಗಳಲ್ಲಿ ಮಾತ್ರವಲ್ಲದೆ, ವ್ಯಕ್ತಿಯ ಆಂತರಿಕ ಜೀವನದಲ್ಲಿ ಇಜ್ಜೋಡಾದ, ಅನುಕ್ರಮವಾದ ಬದಲಾವಣೆಗಳಿಗೆ ಕಾರಣವಾಗುತ್ತದೆ ಎಂಬುವುದನ್ನು ಚರ್ಚಿಸಲಾಗಿದೆ. ಮಹಿಳಾ ಮತಾಂತರದ ಅನುಭವ ಹೇಗೆ ನಿರೀಕ್ಷೆಗಳ ಪರಿವರ್ತನೆಯ ಮೂಲಕ ರೂಪಾಂತರಗೊಳ್ಳುವುದು ಕುರಿತಾದ ವಿವರಣೆಯನ್ನು ಒಳಗೊಂಡಿದೆ. ಜೆರಾಲ್ಡಿನ್ ಫೋಬ್ಸ್ ರವರ 'ಆಧುನಿಕ ಭಾರತದಲ್ಲಿ ಮಹಿಳೆ' ಎಂಬ ಕೃತಿಯು ಮಹಿಳೆಯರು ನೇರವಾಗಿ ನೀಡಿದ ದಾಖಲೆಗಳಿಗೆ ಪ್ರಾಶಸ್ತ್ಯ ನೀಡಿರುವುದರೊಂದಿಗೆ, ಭಾರತೀಯ ಮಹಿಳೆಯರ ಸ್ಥಿತಿಗತಿಯನ್ನು ಕುರಿತಂತೆ ಹೆಚ್ಚು ಕೇಂದ್ರೀಕೃತವಾಗಿದೆ. ಪುರುಷ ಸುಧಾರಣಾವಾದಿಗಳ

ಚಟುವಟಿಕೆಗಳು, ಆಧುನಿಕ ಶಿಕ್ಷಣದ ಪ್ರಭಾವ ಹಾಗೂ ಅದರಿಂದ ಎಚ್ಚೆತ್ತ ಮಹಿಳೆಯರ ಕುರಿತ ಚರ್ಚೆ ಇದೆ. ಜುಡಿತ್ ಇ. ವಾಲ್ಶ್ ಎಂಬವರು ತಮ್ಮ 'ಡೊಮೆಸ್ಟಿಸಿಟಿ ಇನ್ ಕಲೋನಿಯಲ್ ಇಂಡಿಯಾ'ಎಂಬ ಕೃತಿಯಲ್ಲಿ ಹತ್ತೊಂಭತ್ತನೆಯ ಶತಮಾನದ ಮಧ್ಯಮ ವರ್ಗದ ಗೃಹಾಸಕ್ತಿಗಳು ಮತ್ತು ಕೌಟುಂಬಿಕ ಜೀವನದ ಮೇಲೆ ಯುರೋಪಿಯನ್ ಕಲ್ಪನೆಗಳ ಪ್ರಭಾವವನ್ನು ಚರ್ಚಿಸುತ್ತಾರೆ. ಗೃಹಾಸಕ್ತಿಯ ನಾಗರಿಕ ರಾಯಭಾರಿಗಳಾಗಿ ಸಾಮ್ರಾಜ್ಯಶಾಹಿ ತಂದ ಸಾಮಾಜಿಕ, ಸಾಂಸ್ಕೃತಿಕ, ಬೌದ್ಧಿಕ ಮತ್ತು ಆರ್ಥಿಕ ಹೊಂದಾಣಿಕೆಗಳ ಪರಿಣಾಮಗಳು ಮತ್ತು ಶಾಖೋಪಶಾಖೆಗಳನ್ನು ಅರ್ಥೈಸಲಾಗಿದೆ.

ಇಂದ್ರಾಣಿ ಸೇನ್ ಸಂಪಾದಿಸಿದ 'ಮೇಂಸಾಹಿಬ್ಸ್ ರೈಟಿಂಗ್ಸ್ - ಕೊಲೋನಿಯಲ್ ನರೇಟಿವ್ ಆನ್ ಇಂಡಿಯನ್ ವಿಮೆನ್' ಎಂಬ ಕೃತಿಯಲ್ಲಿ ಅಂತರ್ ಜನಾಂಗೀಯ ಲಿಂಗ ಸಂಪರ್ಕಗಳಿಂದ ಬಂಗಾಳದಲ್ಲಿ ಸೃಷ್ಟಿಯಾದ 'ಯುರೇಷಿಯಾ' ಪರಿಕಲ್ಪನೆಗಳಿಗೆ ಸಂಬಂಧಿಸಿ ರಚಿತವಾದ ವಿಷಯಗಳು ಮತ್ತು ಸಮಸ್ಯೆಗಳನ್ನು ಚರ್ಚಿಸುತ್ತದೆ. ಸುಧೀರ್ ಚಂದ್ರರವರು ಬರೆದ 'ಎನ್ ಸ್ಲೇವ್ಡ್ ಡಾಟರ್ಸ್ - ಕೊಲೋನಿಯಲಿಸ್ಂ, ಲಾ ಆಂಡ್ ವಿಮೆನ್ಸ್ ರೈಟಿಂಗ್ಸ್' ಎಂಬ ಕೃತಿಯು ಹಿಂದೂ ಸಂಪ್ರದಾಯಸ್ಥ ಸಮಾಜದ ನೆಲೆಯನ್ನು ಪ್ರತಿಭಟಿಸುವ ರುಕ್ಮಾಬಾಯಿಯ ನಿಲುವು ಮತ್ತು ಕಾನೂನು ಹೋರಾಟಕ್ಕೆ ಸಂಬಂಧಿಸಿದ್ದು, ಹತ್ತೊಂಭತ್ತನೆಯ ಶತಮಾನದ ಉತ್ತರಭಾಗದ ವಸಾಹತುಶಾಹಿ ಕಾಲಘಟ್ಟದಲ್ಲಿ ರಚಿತವಾದ ಕಾನೂನುಗಳ ಕುರಿತು ಚರ್ಚಿಸುತ್ತದೆ.

ಪೌಲ್ ಗಿಲ್ಲೆನ್ ಮತ್ತು ದೇವ್ಲೀನಾ ಘೋಷ್ ಇವರ ಕೃತಿಯಾದ 'ಕೊಲೋನಿಯಲಿಸಂ ಆಂಡ್ ಮೋಡರ್ನಿಟಿ' ಎಂಬುದು ವಸಾಹತುಶಾಹಿ ಮತ್ತು ಆಧುನಿಕತೆಯ ನಡುವಿನ ಐತಿಹಾಸಿಕ ಪ್ರಕ್ರಿಯೆಗಳು ಮತ್ತು ವಸಾಹತುಶಾಹಿ ವಿರೋಧಿ ಚಳುವಳಿಯ ಸಮಾನಾಂತರ ಇತಿಹಾಸವನ್ನು ಚರ್ಚಿಸಲಾಗಿದೆ. ಕುಂಕುಂ ಸಂಗಾರಿ ಮತ್ತು ಸುದೇಶ್ ವೈದ್ ಇವರು ಸಂಪಾದಿಸಿದ 'ರಿಕಾಸ್ಟಿಂಗ್ ಇಂಡಿಯನ್ ವಿಮೆನ್ ಎಸ್ಸೇಸ್ ಇನ್ ಕೊಲೋನಿಯಲ್ ಹಿಸ್ಟರಿ' ಎಂಬ ಕೃತಿಯಲ್ಲಿ ವಸಾಹತು ಭಾರತದಲ್ಲಿ ಸತಿ ಪದ್ಧತಿ, ತೆಲಂಗಾಣ ಹೋರಾಟದಲ್ಲಿ ಮಹಿಳೆಯರ ಪಾತ್ರ ಮತ್ತು ಪಾರ್ಥಾಚಟರ್ಜಿಯವರ ಲೇಖನವಾದ 'ರಾಷ್ಟ್ರೀಯತಾವಾದಿ ನಿರ್ಣಯದ ಮಹಿಳಾ ಪ್ರಶ್ನೆಗಳು' ಈ ಕುರಿತಾದ ಚರ್ಚೆಗಳಿದ್ದು, ಇದು ಹತ್ತೊಂಭತ್ತನೆಯ ಶತಮಾನದ ಮೊದಲ ಮತ್ತು ಮಧ್ಯಭಾಗದ ಬಂಗಾಳದಲ್ಲಿನ ಮಹಿಳಾ ಪ್ರಶ್ನೆಗಳನ್ನು ಅವಲೋಕಿಸುತ್ತದೆ.

ಸಂಗೀತ ರೇ ಇವರ 'ಎನ್ಜೆಂಡರಿಂಗ್ ಇಂಡಿಯ' ಎಂಬ ಕೃತಿಯು ರಾಷ್ಟ್ರೀಯತೆಗೆ ಸಂಬಂಧಿಸಿದ ಸಂಭಾಷಣೆಗಳನ್ನೊಳಗೊಂಡಿದೆ. ರಾಷ್ಟ್ರೀಯ ಚಳವಳಿಯಲ್ಲಿ ಮಹಿಳೆಯ ಭಾಗವಹಿಸುವಿಕೆಯು ಮೂಡಿಸಿದ ಭಾವಸಂಕೀರ್ಣತೆಯ ಕುರಿತು ಚರ್ಚೆಯನ್ನು ವಿಭಿನ್ನವಾಗಿ ವಿಶ್ಲೇಷಿಸಲಾಗಿದೆ.

ಗೌರಿ ವಿಶ್ವನಾಥನ್ ಇವರ 'ಮಾಸ್ಕ್ ಆಫ್ ಕಾನ್ವೆಸ್'ಎಂಬ ಕೃತಿಯು ಬ್ರಿಟಿಷ್ ಇಂಡಿಯಾದಲ್ಲಿ ಆಂಗ್ಲ ಶಿಕ್ಷಣದ ಪರಿಚಯದ ಹಿಂದಿನ ಸೈದ್ಧಾಂತಿಕ ಪ್ರೇರಣೆಗಳ ಕುರಿತು ಚರ್ಚಿಸುತ್ತದೆ. ಭಾರತೀಯರ ನೈತಿಕ ಜ್ಞಾನವನ್ನು ಅಭಿವೃದ್ಧಿಗೊಳಿಸಲು ಇಂಗ್ಲಿಷ್ ಸಾಹಿತ್ಯಿಕ ಅಧ್ಯಯನವನ್ನು ಹತ್ತೊಂಭತ್ತನೆಯ ಶತಮಾನದ ಮೊದಲ ಭಾಗದಲ್ಲಿ ಪ್ರಾರಂಭಿಸಿದ ಬ್ರಿಟಿಷ್ ಆಡಳಿತಗಾರರು ಆರಂಭದಲ್ಲಿ ಧಾರ್ಮಿಕ ತಟಸ್ಥತೆಯನ್ನು ಕಾಯ್ದುಕೊಂಡಿದ್ದರೂ ೧೮೩೦-೧೮೫೦ರ ಕಾಲಘಟ್ಟದಲ್ಲಿ ತಮ್ಮ ಪಠ್ಯ ಕ್ರಮದ ಮೂಲಕ ಕ್ರಿಸ್ತಿಯನ್ ಚಿತ್ರಣವನ್ನು ನೀಡಿರುವುದರ ಕುರಿತ ವಿಷಯಗಳನ್ನು ಈ ಕೃತಿಯಲ್ಲಿ ಚರ್ಚಿಸಲಾಗಿದೆ. ಮಂಗಳಾ ಪ್ರಿಯದರ್ಶಿನಿಯವರು ರಚಿಸಿದ 'ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ'ಎಂಬ ಕೃತಿಯಲ್ಲಿ ಭಾರತದಲ್ಲಿ ಮಹಿಳಾ ಅಧ್ಯಯನದ ಬೆಳವಣಿಗೆ ಮತ್ತು ಪ್ರಸ್ತುತತೆ, ಸ್ತ್ರೀವಾದದ ನೆಲೆಗಳು, ಸಮಾನ ಹಕ್ಕುಗಳಿಗಾಗಿ ಹೋರಾಟ, ಮತದಾನದ ಹಕ್ಕಿಗಾಗಿ ಹೋರಾಟ, ಪ್ರಧಾನ ವ್ಯಾಪ್ತಿಯ ಮತ್ತು ತಳಮೂಲ ಸಂಘಟನೆಗಳು ಹಾಗೂ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಮಹಿಳಾ ಚಳವಳಿಗಳ ಕುರಿತಂತೆ ಚರ್ಚಿಸಲಾಗಿದೆ.

ಕಮಲಾ ಹಂಪನಾ ಇವರ 'ಬೊಗಸೆ (ಮಹಿಳೆ ಸುತ್ತ ಮುತ್ತ)' ಕೃತಿಯಲ್ಲಿ ಹೆಣ್ಣಿನ ಸುತ್ತ ಸುತ್ತಿಕೊಂಡ ಸಂವೇದನೆಗಳ ಬುತ್ತಿಯು ಸೇರಿಕೊಂಡಿದೆ. ಸ್ತ್ರೀ ಪರಿಕಲ್ಪನೆಯಿಂದ ಪ್ರಾರಂಭಗೊಂಡು ಇತ್ತೀಚಿಗಿನ ಮಹಿಳೆಯ ಸ್ಪಂದನಗಳವರೆಗೂ ಹರಿದ ಲಹರಿಗಳು ಈ ಕೃತಿಯಲ್ಲಿ ಕಂಡು ಬರುತ್ತದೆ. ಸ್ತ್ರೀವಾದದ ಕಲ್ಪನೆ ಇನ್ನೂ ದಟ್ಟವಾಗಿ ಮೂಡದಿದ್ದ ಕಾಲದಲ್ಲಿನ ಲೇಖನಗಳು ಪ್ರಮುಖವಾಗಿ, ಮಹಿಳಾ ಚಳವಳಿ, ಹೋರಾಟಗಳು ಮತ್ತು ಶಾಸನಗಳನ್ನು ಆಧರಿಸಿದ ಸಂಶೋಧನಾ ಪ್ರಬಂಧಗಳು ಇದರಲ್ಲಿದೆ. ಲೇಖಕಿಯ ಮಾತಿನಲ್ಲಿ ಹೇಳುವುದಾದರೆ ಬೊಗಸೆ ಬರೀ ಮಾತಲ್ಲ, ಬರಿ ಬರಹವಲ್ಲ, ಇದೊಂದು ಹೊರ ಜಗತ್ತಿಗೂ ಮಹಿಳೆಯ ಅಂತರಂಗಕ್ಕೂ ನಡೆದ ನಿರಂತರ ಹೋರಾಟ, ದಿಕ್ಕುಗಳ ಧ್ವನಿ ತರಂಗಗಳಿಂದ ಮೊಳಗಿನ ಮೊತ್ತವಾಗಿದೆ. ಗಾಯತ್ರಿ ನಾವಡ ಇವರ 'ಮಹಿಳೆ ಬಿಡುಗಡೆಯ ಹಾದಿಯಲ್ಲಿ' ಎಂಬ ಕೃತಿಯಲ್ಲಿ ಸಂಕೋಲೆಯ ಹಿಡಿತದಲ್ಲಿ ಮಹಿಳೆ, ದುಡಿಮೆಯ ನೊಗ ಹೊತ್ತು ನಿಂತಾಗ, ಸುಧಾರಣೆಯ ಯುಗದಿಂದ ಬದಲಾವಣೆಯೆಡೆಗೆ ಹಾಗೂ ಇತರ ಲೇಖನಗಳು ಸಮಾಜದಲ್ಲಿ ಬಾಳಿನ ಕರ್ಕಷತೆಯೊಂದಿಗೆ ಸ್ವಾತಂತ್ರ್ಯಕ್ಕಾಗಿ ಹಾತೊರೆಯುವ ಸ್ತ್ರೀ ಮನೋಭಾವದ ಕುರಿತಾಗಿದೆ.

ಆರ್.ಇಂದಿರಾ ಇವರ 'ಮಹಿಳೆ ಸಮಾಜ ಮತ್ತು ಸಂಸ್ಕೃತಿ' ಎಂಬ ಕೃತಿಯು ಭಾರತದಲ್ಲಿನ ಪ್ರಧಾನ ಮಹಿಳಾ ಸಮಸ್ಯೆಗಳನ್ನು ಒಳಗೊಂಡು, ಸಮಾಜ ಮತ್ತು ಸಂಸ್ಕೃತಿಯ ವಿವಿಧ ಆಯಾಮಗಳನ್ನು ವಿಶ್ಲೇಷಿಸುತ್ತದೆ. ರಾಜ್‌ಕುಮಾರ್, ರಾಮೇಶ್ವರಿ ದೇವಿ, ರೋಮಿಲಾ ಪುರ್ತಿ

ಸಂಪಾದಿಸಿದ 'ವಿಮೆನ್ ಆಂಡ್ ದ್ ಫ್ರೀಡಂ ಸ್ಟ್ರಗಲ್' ಎಂಬ ಕೃತಿಯು ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸಿದ ಹಿಂದೂಸ್ಥಾನದ ಧ್ರುವತಾರೆಯರ ಚಿತ್ರಣವನ್ನು ನೀಡುತ್ತದೆ. ಮಹಿಳೆಯರ ಪಾತ್ರವನ್ನು ಅವಲೋಕಿಸುವುದರೊಂದಿಗೆ, ಸ್ವತಂತ್ರ ಭಾರತದಲ್ಲಿ ಮೊದಲ ಮಹಿಳಾ ಮಂತ್ರಿಯಾಗಿ ವಿಜಯಲಕ್ಷ್ಮಿ ಪಂಡಿತರ ಸೇವೆಯ ಕುರಿತು ಚರ್ಚಿಸಲಾಗಿದೆ. ಜಿ. ಕೆ. ಘೋಷ್ ಇವರ 'ದಲಿತ್ ವಿಮೆನ್'ಎಂಬ ಕೃತಿಯು ಸ್ವಾತಂತ್ರ್ಯಪೂರ್ವದಲ್ಲಿನ ವರ್ಗ ತಾರತಮ್ಯ, ದಲಿತ ಸಮುದಾಯದ ಏಳಿಗೆಗೆ ಸಮಾಜ ಸುಧಾರಕರು ನೀಡಿದ ಕೊಡುಗೆಗಳು ಹಾಗೂ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಕೂಡಾ ಮುಂದುವರಿದ ಶೋಷಣೆಯ ಕುರಿತು ಚರ್ಚಿಸಲಾಗಿದೆ. ವಿಜಯಾದಬ್ಬೆಯವರ 'ನಾರಿ ದಾರಿ ದಿಗಂತ' ಕರ್ನಾಟಕದಲ್ಲಿ ಮಹಿಳೆಯರು ಆಧುನಿಕತೆಗೆ ತೆರೆದುಕೊಂಡ ಸಂದರ್ಭ ಎದುರಾದ ಆತಂಕಗಳು ಮತ್ತು ಮಿತಿಗಳನ್ನು ಚರ್ಚಿಸಲಾಗಿದೆ.

ಗಾಯತ್ರೀ ನಾವಡರವರ 'ವಿರಚನೆ' ಎಂಬ ಕೃತಿಯು ಸ್ತ್ರೀವಾದಿ ಸಾಂಸ್ಕೃತಿಕ ಚಿಂತನೆ ಎಂಬ ಪರಿಕಲ್ಪನೆಯನ್ನು ಹೊಂದಿದ್ದು, ಪಾಡ್ದನಗಳಲ್ಲಿ ಸ್ತ್ರೀ ಪ್ರತಿನಿಧೀಕರಣ, ಹೆಣ್ಣು ಕೆಲಸ ಮತ್ತು ಬಿಡುವಿನ ಪರಿಕಲ್ಪನೆ, ಜನಪದ ಮಹಾಕಾವ್ಯಗಳಲ್ಲಿ ಪಾತಿವ್ರತ್ಯದ ನಿರ್ವಚನ ಮೊದಲಾದ ವಿಷಯಗಳನ್ನು ಚರ್ಚಿಸುತ್ತದೆ. ಬೆ.ಕಾ. ಮೂರ್ತಿೇಶ್ವರಯ್ಯರವರ ಕೃತಿಯಾದ 'ಮಹಿಳೆ ಸಮಾಜ ಮತ್ತು ಕಾನೂನು' ಎಂಬ ಕೃತಿಯು ಪ್ರಾಚೀನ ಭಾರತದಲ್ಲಿ ಮಹಿಳೆಯ ಸ್ಥಾನಮಾನಗಳನ್ನು ಧರ್ಮಶಾಸ್ತ್ರಗಳು, ಕೌಟಿಲ್ಯನ ಅರ್ಥಶಾಸ್ತ್ರ ಹಾಗೂ ಯಜ್ಞಾವಲ್ಕ್ಯನ ಸ್ಮೃತಿಗಳ ಹಿನ್ನೆಲೆಯಲ್ಲಿ ಬಿಂಬಿಸುತ್ತದೆ. ಶಾಂತಾ ಇಮ್ರಾಪುರ್ ಇವರು ಸಂಪಾದಿಸಿದ 'ಮಹಿಳೆ ಸಾಹಿತ್ಯ ಸಂಸ್ಕೃತಿ' ಎಂಬ ಕೃತಿಯು ವಿವಿಧ ಲೇಖಕಿಯರ ಹನ್ನೆರಡು ಲೇಖನಗಳನ್ನು ಒಳಗೊಂಡಿದ್ದು, ಮಹಿಳಾಪರ ಚಿಂತನೆಯ ತಾತ್ವಿಕ ಶೃಂಗಕ್ಕೆ ಪಯಣಿಸಲು ಅನುಕೂಲವಾಗುವ ನಿಟ್ಟಿನಲ್ಲಿದೆ. ಜಾನಪದದ ವೈಜ್ಞಾನಿಕ ಅಧ್ಯಯನದಲ್ಲಿ ಸ್ತ್ರೀವಾದಿ ತಾತ್ವಿಕತೆಯ ಹೊಸಬೆಳಕು ಸಹಕಾರಿಯಾಗುತ್ತದೆಂಬ ದೃಷ್ಟಿಕೋನ ಈ ಲೇಖನಗಳಲ್ಲಿವೆ.

ಎಚ್. ಎಸ್. ಶ್ರೀಮತಿಯವರ 'ಚಹರೆ' ಎಂಬ ಕೃತಿಯಲ್ಲಿನ ಸ್ತ್ರೀವಾದಿ ಸಂಬಂಧಿ ಲೇಖನಗಳು ಸ್ತ್ರೀ ಪುರುಷ ಶ್ರೇಣೀಕರಣದ ಪರವಿರೋಧ ವರ್ಗೀಕರಣವನ್ನು ನಿರಾಕರಿಸಿ ಮಾನವಪರ ಚೌಕಟ್ಟಿನಲ್ಲಿ ಗ್ರಹಿಸುವ ಕುರಿತಾಗಿದೆ. ಪ್ರತಿಷ್ಠಿತ ಮನೋವಿಜ್ಞಾನಿಗಳು ಮತ್ತು ಜೀವವಿಜ್ಞಾನಿಗಳು ತಮ್ಮ ಪುರುಷ ಪೀಡಿತ ಮನೋಧರ್ಮದಿಂದಲೇ ಹೆಣ್ಣನ್ನು ಕುರಿತು ಪೂರ್ವಾಗ್ರಹ ತೀರ್ಮಾನಗಳನ್ನಿಟ್ಟಿರುವುದನ್ನು ವಿವರವಾಗಿ ಚರ್ಚಿಸಲಾಗಿದೆ. ಸಾರಾ ಅಬೂಬಕ್ಕರ್ ರಚಿಸಿರುವ 'ಸಾಹಿತ್ಯ ಸಂಸ್ಕೃತಿ ಮತ್ತು ಮಹಿಳೆ'ಎಂಬ ಕೃತಿಯಲ್ಲಿ ಸಾಹಿತ್ಯ, ಮಹಿಳೆ, ಮುಸ್ಲಿಂ ಸಂವೇದನೆ, ಧರ್ಮ, ಶಿಕ್ಷಣ, ಕಾನೂನು, ಮತಾಂಧತೆ ಹೀಗೆ ಬಹುರೂಪಿ ನೆಲೆಗಳಲ್ಲಿ ಕನ್ನಡ ನಾಡಿನ ಮತ್ತು ಕನ್ನಡ ಸಾಹಿತ್ಯದ ವೈಚಾರಿಕ

ವಿಸ್ತರಣೆಯನ್ನು ಮಾಡಿರುವ ಲೇಖನಗಳಿವೆ. ಅಧ್ಯಯನ, ಅನುಭವ ಹಾಗೂ ಆಂದೋಲನದ ಮೂಲಕ ಸಾಹಿತ್ಯ ಮತ್ತು ಸಮಾಜದ ಸಂಕೀರ್ಣ ಸನ್ನಿವೇಶದಲ್ಲಿ ಸಾರಾರವರು ಕನಸಿನ ಕರ್ನಾಟಕವೊಂದನ್ನು ಕೃತಿಯಲ್ಲಿ ಕಟ್ಟಿಕೊಟ್ಟಿದ್ದಾರೆ. ಧರಣೀದೇವಿ ಮಾಲಗಿತ್ತಿಯವರ 'ಸ್ತ್ರೀವಾದ ಮತ್ತು ಭಾರತೀಯತೆ' ಎಂಬ ಕೃತಿಯು ಸ್ತ್ರೀಯ ಸ್ಥಾನಮಾನಗಳನ್ನು ಜನಪದ, ಪುರಾಣ, ಇತಿಹಾಸ, ವರ್ತಮಾನಗಳ ಹಿನ್ನೆಲೆಯಲ್ಲಿ ಮತ್ತು ಆಯಾ ಕಾಲಗಳ ಸಾಂಸ್ಕೃತಿಕ ಸಂದರ್ಭಗಳಲ್ಲಿ ಗುರುತಿಸಿ ಚರ್ಚಿಸುತ್ತದೆ. ಸ್ತ್ರೀವಾದ ಕಟ್ಟಿಕೊಡಬೇಕಾದ ಬದುಕು ಕೇವಲ ಹೆಣ್ಣಿನ ಬದುಕಲ್ಲ ಅಥವಾ ಗಂಡಸಿನ ದೃಷ್ಟಿಕೋನವೂ ಅಲ್ಲ, ಪರಸ್ಪರ ಗೌರವದ ಪ್ರೀತಿಯ ಬದುಕು. ಎಲ್ಲಾ ಮಾರ್ದವ ಭಾವನೆಗಳ ಜೊತೆಗೆ ಸ್ವಾಭಿಮಾನವನ್ನು ಉಳಿಸುವ ಸಾಮರ್ಥ್ಯ ಸ್ತ್ರೀವಾದದ ಕೇಂದ್ರವಾಗಿರಬೇಕು. ಈ ಕೃತಿಯಲ್ಲಿನ 'ದಲಿತ ಸಾಹಿತ್ಯದಲ್ಲಿ ಮಹಿಳೆ' ಎಂಬ ಲೇಖನವು ಸಾಹಿತ್ಯದಲ್ಲಿ ದಲಿತ ಮಹಿಳೆಯನ್ನು ಕಂಡ ಬಗೆಯನ್ನು ದಲಿತೇತರ ದೃಷ್ಟಿಯಿಂದಲೂ ಅಭ್ಯಸಿಸಲು ಅನುಕೂಲವಾಗುವ ಹಾಗೆ ದಲಿತ ಕೃತಿಗಳನ್ನು ಇತರ ಕೃತಿಗಳ ಜೊತೆಗಿಟ್ಟು ಚರ್ಚಿಸಲಾಗಿದೆ.

ಎಚ್. ಎಸ್. ಶ್ರೀಮತಿ, ಶಿವಾನಂದ ಎಸ್. ವಿರಕ್ತಮಠ, ಜೆ. ಕೃಷ್ಣ ಇವರು ಸಂಪಾದಿಸಿದ 'ಹೆಣ್ಣು ಮತ್ತು ಭಾಷೆ' ಎಂಬ ಕೃತಿಯು ಭಾಷಾ ಕಲಿಕೆ ಮತ್ತು ಬಳಕೆಗಳಲ್ಲಿ ಹೆಣ್ಣಿಗೆ ಇರುವ ಸವಾಲುಗಳು, ಸಮಕಾಲೀನ ಮಹಿಳಾ ಕಾವ್ಯ ಮತ್ತು ಭಾಷೆ, ಭಾಷೆಯಲ್ಲಿ ಹೆಣ್ಣಿನ ಪ್ರತಿನಿಧೀಕರಣ, ಸಾಮಾಜಿಕ ಸಂವಹನ, ಲಿಂಗ ತಾರತಮ್ಯ, ಭಿನ್ನತೆ, ಭಾಷಾ ಬಳಕೆಯಲ್ಲಿ ವ್ಯತ್ಯಾಸ ಮುಂತಾದ ವಿಷಯಗಳ ಕುರಿತು ಚರ್ಚಿಸುತ್ತದೆ. ಮಾ. ಭ ಪರ್ಲರವರ 'ಮಹಿಳೆಯ ಮುಖಗಳು' ಕೃತಿಯಲ್ಲಿ ಸ್ತ್ರೀಯ ವಿವಿಧ ರಚನಾತ್ಮಕ ಮುಖಗಳನ್ನು ಬಿಂಬಿಸುವ ೪೦ ಲೇಖನಗಳನ್ನು ಸಂಗ್ರಹಿಸಲಾಗಿದೆ. ಸ್ತ್ರೀಯ ಕರ್ತವ್ಯ, ನಿಷ್ಠೆ, ಪ್ರೀತಿ-ವಾತ್ಸಲ್ಯ, ತ್ಯಾಗ-ಬಲಿದಾನ ಮುಂತಾದ ಉದಾತ್ತ ಮೌಲ್ಯಗಳು ಪ್ರೇರಣಾ ಶಕ್ತಿಯಾಗಿ ಪರಿಣಮಿಸಬಹುದೇ ಎಂಬ ನಿಟ್ಟಿನಲ್ಲಿ ಚರ್ಚೆಗಳು ಕಂಡು ಬರುತ್ತದೆ. ಬಿ.ಎನ್ ಸುಮಿತ್ರಾಬಾಯಿಯವರ 'ಸ್ತ್ರೀವಾದ' ಎಂಬ ಕೃತಿಯು ಸ್ತ್ರೀವಾದದ ವ್ಯಾಖ್ಯೆ, ಸ್ವರೂಪ, ಸಾಮಾಜಿಕ ಮತ್ತು ತಾತ್ವಿಕ ಹಿನ್ನೆಲೆ, ಮುಖ್ಯ ವೈಶಿಷ್ಟ್ಯಗಳು, ಪಶ್ಚಿಮದಲ್ಲಿ ಬೆಳೆದು ಬಂದ ರೀತಿ, ಕನ್ನಡಕ್ಕೆ ಬಂದಾಗ ಆದ ಹೊಂದಾಣಿಕೆ, ಮುಖ್ಯ ಸಾಹಿತ್ಯ ಕೃತಿಗಳಲ್ಲಿ ಅವುಗಳ ಅಭಿವ್ಯಕ್ತಿ ಕ್ರಮವನ್ನು ಸ್ಥೂಲವಾಗಿ ಚರ್ಚಿಸುತ್ತದೆ. ಪಿ.ಎನ್ ಪ್ರೇಮಲತಾ ಇವರು ರಚಿಸಿದ 'ನ್ಯಾಷನಲಿಸಂ ಆಂಡ್ ವಿಮೆನ್ಸ್ ಮೂವ್ಮೆಂಟ್ ಇನ್ ಇಂಡಿಯಾ ೧೯೧೭-೧೯೪೭' ಎಂಬ ಕೃತಿಯು ಮಹಿಳೆಯರಿಗೆ 'ಮತದಾನದ ಹಕ್ಕು'ಎಂಬ ವಿಷಯದ ಕುರಿತು ಆಧುನಿಕ ಭಾರತದಲ್ಲಿ ಜಾಗೃತಿ ಮೂಡಿಸಿದ ಸಾಮಾಜಿಕ ಸುಧಾರಣಾ ಸಂಸ್ಥೆಗಳು, ವಿಮೆನ್ಸ್ ಇಂಡಿಯಾ ಎಸೋಸಿಯೇಷನ್ ಇದರ ಪಾತ್ರ, ಮತದಾರರಾಗಿ ಮಹಿಳೆಯರು ಮತ್ತು ಸ್ಪರ್ಧಿಗಳಾಗಿ ಅವರ ಪಾತ್ರವನ್ನು

ಅವಲೋಕಿಸಲಾಗಿದೆ. ಜ್ಯೋತಿ ಶಶಿಕುಮಾರ್ ರಚಿಸಿದ 'ಮಹಿಳಾ ಸಾಮಾಜಿಕತೆ'ಎಂಬ ಕೃತಿಯು ಸಾಮಾಜಿಕ ಸಂಸ್ಥೆಗಳ ಸ್ಥೂಲ ಲಕ್ಷಣಗಳು ಮತ್ತು ಕಾರ್ಯಗಳು, ಪ್ರಧಾನ ಸಾಮಾಜಿಕ ಸಂಸ್ಥೆಗಳಲ್ಲಿ ಲಿಂಗವ್ಯವಸ್ಥೆಯ ಪಾತ್ರಗಳು ಮತ್ತು ಲಿಂಗ ವ್ಯವಸ್ಥೆಯ ಸಂಬಂಧ, ಜಾತಿ ವ್ಯವಸ್ಥೆ ಮತ್ತು ಮಹಿಳೆ, ಶಿಕ್ಷಣ ವ್ಯವಸ್ಥೆ ಮತ್ತು ಮಹಿಳೆ, ಧರ್ಮ ಮತ್ತು ಮಹಿಳೆ ಮೊದಲಾದ ವಿಷಯಗಳ ಕುರಿತು ಚರ್ಚಿಸುತ್ತದೆ. ಲೋಲಾಕ್ಷಿ ಎನ್. ಕೆ ಯವರು ರಚಿಸಿದ 'ರಾಷ್ಟ್ರೀಯವಾದಿ ಚಿಂತನೆ ಮತ್ತು ಮಹಿಳೆ' ಎಂಬ ಕೃತಿಯು ವಸಾಹತು ಆಡಳಿತದ ಶೋಷಣೆ, ರಾಷ್ಟ್ರೀಯ ಹೋರಾಟ ಹಾಗೂ ಮಹಿಳಾಪರ ಹೋರಾಟಗಳ ನಡುವಿನ ಸಂಬಂಧಗಳನ್ನು ವಿಶ್ಲೇಷಿಸುತ್ತದೆ. ಪಾಶ್ಚಿಮಾತ್ಯಕ್ಕಿಂತ ಭಿನ್ನವಾಗಿ ಭಾರತವನ್ನು ಪ್ರತಿಬಿಂಬಿಸುವ ಆಧ್ಯಾತ್ಮಿಕ ಕ್ಷೇತ್ರವನ್ನು ಗುರುತಿಸಿದ ರಾಷ್ಟ್ರೀಯವಾದಿಗಳು ಸ್ತ್ರೀಯನ್ನು ಆಧ್ಯಾತ್ಮಿಕ ಕ್ಷೇತ್ರದ ರಕ್ಷಕಿಯಾಗಿ ಹೇಗೆ ಗುರುತಿಸಿಕೊಂಡರು ಎಂಬುವುದನ್ನು ಚರ್ಚಿಸುತ್ತದೆ. ೧೯೦೭ರಿಂದ ೧೯೪೭ರ ಅವಧಿಯ ೫ ದಶಕಗಳ ಆಯ್ದ ಕೆಲವು ಕನ್ನಡ ಪತ್ರಿಕೆಗಳನ್ನಿಟ್ಟುಕೊಂಡು ಮಹಿಳಾ ಚಳವಳಿಯಲ್ಲುಂಟಾದ ಬದಲಾವಣೆಗಳನ್ನು ಪ್ರಧಾನವನ್ನಾಗಿಟ್ಟುಕೊಂಡು ಚರ್ಚಿಸಲಾಗಿದೆ.

ಶಿವಾನಂದ ವಿರಕ್ತಮಠ ಇವರು ರಚಿಸಿದ 'ಮಹಿಳೆ ಮತ್ತು ಧರ್ಮ' ಎಂಬ ಕೃತಿಯು ಸಾಮಾಜಿಕ ಸಂಸ್ಥೆಗಳ ಗುಣಲಕ್ಷಣಗಳು ಹಾಗೂ ಕಾರ್ಯ ವಿಧಾನಗಳು, ಧರ್ಮಗಳಲ್ಲಿ ಮಹಿಳೆಯ ಸಾಮಾಜಿಕ ಚಹರೆಗಳು, ಧಾರ್ಮಿಕ ಸಂರಚನೆಯಾಗಿ ಪಿತೃಪ್ರಧಾನತೆ, ಸ್ತ್ರೀವಾದಿ ಸಂಕಥನವಾಗಿ ಮಹಿಳಾ ಅಭಿವ್ಯಕ್ತಿಯಲ್ಲಿ ಮುಖ್ಯವಾಗಿ ಭಕ್ತಿ ಚಳುವಳಿಯಲ್ಲಿ ಸ್ತ್ರೀವಾದಿ ಸಂಕಥನಗಳ ಕುರಿತು ಚರ್ಚಿಸುತ್ತದೆ. ಆಂಡಾಳ್, ಅಕ್ಕಮಹಾದೇವಿ, ಮೀರಾ ಮತ್ತು ಲಾಲ್ ದಾದ್, ಹೆಳವನಕಟ್ಟೆ ಗಿರಿಯಮ್ಮ ಮತ್ತು ಹರಪ್ಪನಹಳ್ಳಿ ಭೀಮವ್ವ ಪರಂಪರೆ, ಸಂಪ್ರದಾಯ ಮತ್ತು ಆಚರಣೆಗಳಲ್ಲಿ ಲಿಂಗ ವ್ಯವಸ್ಥೆ ಪಾವಿತ್ರ್ಯ, ತಾಯ್ತನ ಮತ್ತು ವೈಧವ್ಯ ಪರಿಕಲ್ಪನೆಗಳ ಕುರಿತ ವಿಶ್ಲೇಷಣೆಗಳನ್ನು ಈ ಕೃತಿಯು ಒಳಗೊಂಡಿದೆ. ಮನೋರಮಾ ಭಟ್ ಇವರು ರಚಿಸಿದ 'ದಕ್ಷಿಣ ಕನ್ನಡ ಜಿಲ್ಲೆಯ ಮೊದಲ ಲೇಖಕಿಯರು' ಎಂಬ ಕೃತಿಯು ವಸಾಹತುಪೂರ್ವ ಕಾಲಘಟ್ಟದ ಕೆಲವು ಲೇಖಕಿಯರ ಸಾಹಿತ್ಯಿಕ ಕೊಡುಗೆಗಳ ಕುರಿತು ಚರ್ಚಿಸುತ್ತದೆ. ಮಹಿಳೆಯರ ಸಾಧನೆಗಳು ಗೌಣವೆಂದೇ ಪರಿಗಣಿಸಲ್ಪಡುತ್ತಿದ್ದ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಮಹಿಳಾ ಸಾಧಕಿಯರ ಸಾಧನೆಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಮಾಡಲಾಗಿದೆ. ಮಹಿಳಾ ಲೇಖಕಿಯರಿಗೆ ಅಸ್ಮಿತೆಯೇ ಇಲ್ಲದಿದ್ದ ಕಾಲದ ಮಹಿಳೆಯರು ರಚಿಸಿದ ಕೃತಿಗಳ ಕುರಿತು ಮಾಹಿತಿ ನೀಡುವ ನಿಟ್ಟಿನಲ್ಲಿ ಈ ಕೃತಿ ಮಹತ್ವ ಪಡೆದಿದೆ. ಆದರೆ ಇದು ಸ್ವಾತಂತ್ರ್ಯಪೂರ್ವ ದಕ್ಷಿಣ ಕನ್ನಡ ಜಿಲ್ಲೆಯ ಮಹಿಳಾ ಸಾಧಕಿಯರ ಸಂಪೂರ್ಣ ಅಧ್ಯಯನವಾಗಿರುವುದಿಲ್ಲ.

ಗಾಯತ್ರಿ ನಾವಡ ಇವರ 'ಮಹಿಳಾ ಸಂಕಥನ' ಎಂಬ ಕೃತಿಯು ಆಧುನಿಕಪೂರ್ವ ಕನ್ನಡ ಸಾಹಿತ್ಯದಲ್ಲಿನ ಸ್ತ್ರೀಲೋಕ, ದಾಸ ಸಾಹಿತ್ಯ ಮತ್ತು ಮಹಿಳೆ, ಮಹಿಳಾ ಜನಪದ ಸಾಹಿತ್ಯ ಮತ್ತು ಸ್ವಾತಂತ್ರ್ಯ ಚಳವಳಿ, ಮಹಿಳಾ ಮೀಸಲಾತಿ, ಮಹಿಳಾ ಸಂವೇದನೆಗಳು, ಮಹಿಳೆ ಸಮಸ್ಯೆಗಳ ಕುರಿತಾದ ವಿಷಯಗಳನ್ನು ಒಳಗೊಂಡಿದೆ. ಸಾಮಾಜಿಕ ಪಿಡುಗುಗಳ ವಿರುದ್ಧ ಸಮಾಜಸೇವಾ ಸಂಸ್ಥೆಗಳು, ಮಹಿಳಾ ಸಂಘಟನೆಗಳು ದುಡಿಯಬೇಕೆನ್ನುವುದರ ಅವಶ್ಯಕತೆ ಈ ಕೃತಿಯಲ್ಲಿ ಕಂಡು ಬರುತ್ತದೆ. ಸರೋಜಿನಿ ಶಿಂತ್ರಿ ಮತ್ತು ಕೆ. ರಾಘವೇಂದ್ರ ರಾವ್ ಇವರ 'ವಿಮೆನ್ ಫ್ರೀಡಂ ಫೈಟರ್ಸ್ ಆಫ್ ಕರ್ನಾಟಕ' ಎಂಬ ಕೃತಿಯು ಕರ್ನಾಟಕದ ಮಹಿಳಾ ಹೋರಾಟಗಾರ್ತಿಯರ ಕುರಿತಾಗಿದೆ. ಕರ್ನಾಟಕದ ವಿವಿಧ ಜಿಲ್ಲೆಗಳ ಮಹಿಳಾ ಹೋರಾಟಗಾರ್ತಿಯರ ಒಟ್ಟು ಚಿತ್ರಣದ ಕುರಿತು ಚರ್ಚಿಸುತ್ತದೆ. ಸ್ವಾತಂತ್ರ್ಯ ಹೋರಾಟದಲ್ಲಿ ಪುರುಷರಿಗೆ ಹೆಗಲು ಕೊಟ್ಟು ದುಡಿದ ಮಹಿಳೆಯರ ಸಾಹಸಗಾಥೆಯತ್ತ ಬೆಳಕುಚೆಲ್ಲಲಾಗಿದೆ. ಆದರೆ ಈ ಕೃತಿಯಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಹೋರಾಟಗಾರ್ತಿಯರ ಕುರಿತು ಸಂಪೂರ್ಣ ಮಾಹಿತಿ ಕಂಡುಬರುವುದಿಲ್ಲ.

ವೆಂಕಟಲಕ್ಷ್ಮಿ. ಬಿ.ಎಸ್ ಇವರ ಕೃತಿಯಾದ 'ಬದುಕು ಬವಣೆ ಭರವಸೆ' ಎಂಬುವುದು ಮಹಿಳೆಯರಿಗೆ ಎದುರಾಗುವ ವಿವಿಧ ಸನ್ನಿವೇಶಗಳ ಕುರಿತಾಗಿದೆ. ವಿವಾಹ ಹಾಗೂ ಸಂಸಾರದ ಸರಳುಗಳ ಹಿಂದೆ, ಸಂಕೋಲೆಗಳ ಭಾರದಲ್ಲಿ ಪೊಳ್ಳು ಭ್ರಮೆಯಲ್ಲಿ, ಆಸೆ ಕಮರುವ ಆತಂಕ ಮೊದಲಾದ ಲೇಖನಗಳು ಸಮಾಜದಲ್ಲಿ ಮಹಿಳೆ ಎದುರಿಸುವ ಸವಾಲುಗಳ ಕುರಿತು ಬೆಳಕು ಚೆಲ್ಲುತ್ತದೆ. ವೆಂಕಟೇಶ್ ಸಿ.ಡಿಯವರು ಸಂಪಾದಿಸಿದ 'ಮಹಿಳೆ ಶಿಕ್ಷಣ ಮತ್ತು ಸಮಾಜ' ಎಂಬ ಕೃತಿಯಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಲೈಂಗಿಕ ಕಿರುಕುಳಗಳ ಸ್ವರೂಪ, ಮಹಿಳೆಯರಿಗೆ ಶಿಕ್ಷಣ: ಧಾರ್ಮಿಕ ಒತ್ತಡಗಳು ಹಾಗೂ ಹೆಣ್ಣುಭ್ರೂಣ ಹತ್ಯೆ ಕುರಿತ ವಿಮರ್ಶೆ ಇದೆ.

ಇಂದಿರಾ ಶಿವಣ್ಣನವರು ಸಂಪಾದಿಸಿದ 'ಕರ್ನಾಟಕದ ಅನನ್ಯ ಸಾಧಕಿಯರು' ಎಂಬ ಕೃತಿಯು ಭಾರತೀಯ ನೃತ್ಯ ಕಲೆಯ ಪುನರುತ್ಥಾನದ ಸಂದರ್ಭದಲ್ಲಿ ನೃತ್ಯವನ್ನು ವೃತ್ತಿಯಾಗಿ ಆಯ್ದುಕೊಂಡ ಯು.ಕೆ. ಚಂದ್ರಭಾಗಾದೇವಿ ಹಾಗೂ ಇತಿಹಾಸತಜ್ಞೆಯಾಗಿ ಕನ್ನಡ, ಇಂಗ್ಲಿಷ್ ಹಾಗೂ ಕೊಂಕಣಿ ಭಾಷೆಗಳಲ್ಲಿ ಅನೇಕ ಕೃತಿಗಳನ್ನು ರಚಿಸಿರುವ ಜ್ಯೋತ್ಸ್ನಾ ಕಾಮತ್‌ರವರ ಕೊಡುಗೆಗಳನ್ನು ಚರ್ಚಿಸಲಾಗಿದೆ. ಅದೇ ರೀತಿ ಸೃಜನಶೀಲ ಬರವಣಿಗೆಗೆ ಕಾದಂಬರಿ ಲೋಕದಲ್ಲಿ ಹೆಸರುವಾಸಿಯಾದ ಪಾರ್ವತಿ ಎಚ್.ಎಸ್, ಶೈಲಜಾ ಉಡಚಣ ಹಾಗೂ ಚಂಪಾವತಿ ಮಹಿಷಿಯ ಕುರಿತು ಚರ್ಚಿಸಲಾಗಿದೆ. ಗೀತಾ ಶೆಣೈಯವರ 'ಸಂಚರ ಸಹಸ್ರಮಾನದ ಲೇಖಕಿಯರು' ಎಂಬ ಕೃತಿಯು ವಿಶ್ವದ ಪ್ರಖ್ಯಾತ ಲೇಖಕಿಯರ ಕುರಿತಾಗಿದೆ. ಹಲವು ಪ್ರಥಮಗಳ ಸಾಧಕಿಯಾದ ತಿರುಮಲಾಂಬ, ಶತಮಾನ ಕಂಡ

ಕಾವ್ಯಕೋಗಿಲೆ ಸರೋಜಿನಿನಾಯ್ಡು, ಸ್ತ್ರೀವಾದದ ಪಥಸಂಚಾಲಕಿಯಾದ ಸಿಮೋನ್ ದಿ ಬೊವಾ, ಕಥಾಸಾಮ್ರಾಜ್ಞಿ ಆಶಾಪೂರ್ಣದೇವಿ, ಕಾದಂಬರಿಗಳ ರಚನಾಕಾರ್ತಿಯಾದ ತ್ರಿವೇಣಿ, ಬಿಚ್ಚು ಮನಸ್ಸಿನ ಸಂವೇದನಾ ಶೀಲ ಕವಯತ್ರಿಯಾದ ಕಮಲಾದಾಸ್ ಹಾಗೂ ಇತರ ಸಾಧಕಿಯರ ಕುರಿತು ಚರ್ಚಿಸಲಾಗಿದೆ. ಮಹಿಳಾ ಸಾಧಕಿಯರ ಸಾಧನೆಗಳ ಅನಾವರಣಗೊಳಿಸಿರುವ ಲೇಖಕಿಯು ಸಮಾಜದಲ್ಲಿ ಮಹಿಳೆಯನ್ನು ದ್ವಿತೀಯ ದರ್ಜೆಗೆ ಸೀಮಿತಗೊಳಿಸುವುದು ಸರಿಯಲ್ಲ ಎಂಬ ನಿಲುವು ತಳೆದಿದ್ದಾರೆ.

ಶ್ರೀವಳ್ಳಿ. ಟಿ. ಎಸ್ ರವರ 'ಗಿರಿಬಾಲೆ - ಚಿಂತನಾ ಲಹರಿ' ಎಂಬ ಕೃತಿಯು ವಸಾಹತು ಕಾಲದ ಲೇಖಕಿಯಾದ ಸರಸ್ವತಿಬಾಯಿ ರಾಜಾವಾಡೆ ಕುರಿತಾಗಿದೆ. ಎಲೆಮರೆಕಾಯಿಯಂತಿದ್ದು 'ಗಿರಿಬಾಲೆ' ಎಂಬ ಕಾವ್ಯನಾಮದಿಂದ ಬರೆಯಲಾರಂಭಿಸಿದ ಲೇಖಕಿಯು, ಸ್ತ್ರೀ ಪುರುಷರಿಬ್ಬರಿಗೂ ಸಮಾನ ಅವಕಾಶಗಳಿರಬೇಕೆನ್ನುತ್ತಾರೆ. ಕಮಲಾದೇವಿ ಚಟ್ಟೋಪಾಧ್ಯಾಯರು ರಚಿಸಿದ 'ಇಂಡಿಯನ್ ವಿಮೆನ್ಸ್ ಬ್ಯಾಟಲ್ ಫಾರ್ ಫ್ರೀಡಂ' ಎಂಬ ಕೃತಿಯು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಮಹಿಳೆಯರ ಬವಣೆಗಳನ್ನು ಹಾಗೂ ಗಾಂಧೀಜಿಯವರ ಪ್ರೋತ್ಸಾಹದಿಂದ ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸಿದ ಬಗೆಯನ್ನು ಚರ್ಚಿಸುತ್ತದೆ. ಸುಮಿತ್ ಸರ್ಕಾರ್ ಮತ್ತು ತನಿಕ ಸರ್ಕಾರ್ ಇವರು ಸಂಪಾದಿಸಿದ 'ವಿಮೆನ್ ಇನ್ ಮೋಡರ್ನ್ ಇಂಡಿಯಾ' ಎಂಬ ಕೃತಿಯು ಹತ್ತೊಂಭತ್ತು ಹಾಗೂ ಇಪ್ಪತ್ತನೆಯ ಶತಮಾನದ ಸಾಮಾಜಿಕ ಸುಧಾರಣೆಗಳು ಮತ್ತು ಮಹಿಳೆಯರ ಸ್ಥಾನಮಾನದ ಕುರಿತು ಚರ್ಚಿಸುತ್ತದೆ. ಭಾರತೀಯ ನೆಲೆಯಲ್ಲಿ ಮಹಿಳಾ ಸಂಬಂಧಿ ವಿಷಯಗಳ ಕುರಿತು ವಿಫುಲವಾದ ಮಾಹಿತಿಯನ್ನು ಈ ಕೃತಿಯು ಒಳಗೊಂಡಿದೆ.

## ಅಧ್ಯಾಯಗಳು

ಆರು ಅಧ್ಯಾಯಗಳು ಮತ್ತು ಸಮಾರೋಪಗಳಲ್ಲಿ ಅನಾವರಣಗೊಳ್ಳುವ ಪಿಎಚ್.ಡಿ ಸಂಶೋಧನಾ ಮಹಾಪ್ರಬಂಧದ ರೂಪುರೇಷೆಗಳು ಹೀಗಿವೆ. ಕೊನೆ ಟಿಪ್ಪಣಿಯನ್ನು ಪ್ರತಿ ಅಧ್ಯಾಯದ ಕೊನೆಯಲ್ಲಿ ನೀಡಲಾಗಿದೆ.

## ಅಧ್ಯಾಯ ೧ : ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ವಿಧಾನ

ಸಂಶೋಧನಾ ಪ್ರಬಂಧದ ಮೊದಲ ಅಧ್ಯಾಯದಲ್ಲಿ ಪೀಠಿಕೆ, ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ವಿಧಾನವನ್ನು ಚರ್ಚಿಸಲಾಗಿದೆ. ಭಾರತವು ರಾಜಪ್ರಭುತ್ವದಿಂದ ವಸಾಹತು ಅಧೀನಕ್ಕೆ ಬದಲಾದಾಗ ಸ್ಥಳೀಯ ರಾಜಕಾರಣ, ಆರ್ಥಿಕತೆ ಹಾಗೂ ಸಾಮಾಜಿಕ ರಚನೆಯಲ್ಲಿ ಆದಂತಹ

ಬದಲಾವಣೆಗಳನ್ನು ಪ್ರಸ್ತಾಪಿಸಲಾಗಿದೆ. ಈವರೆಗೆ ಆಗಿರುವ ಅಧ್ಯಯನಗಳ ಸಮೀಕ್ಷೆಯನ್ನು ನಡೆಸಲಾಗಿದೆ.

## ಅಧ್ಯಾಯ ೨ : ವಸಾಹತುಶಾಹಿ ಪೂರ್ವ ಕಾಲಘಟ್ಟದ ಮಹಿಳೆಯ ಸ್ಥಿತಿಗಳು

ವಸಾಹತುಪೂರ್ವ ಕಾಲದ ತುಳುನಾಡಿನ ಸಾಮಾಜಿಕ ಚಿತ್ರಣವನ್ನು ಪಾಡ್ದನಗಳ ಮೂಲಕ ಕಂಡುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ. ಮೌಖಿಕ ಅಕರಗಳಾಗಿರುವ ಪಾಡ್ದನಗಳು, ಭೂತ ವರ್ತಮಾನಗಳ ಚಲನಶೀಲ ಸಂಬಂಧಗಳನ್ನು ಪ್ರತಿನಿಧಿಸುತ್ತದೆ. ಇಲ್ಲಿನ ಶಾಸನಗಳು, ಲಿಖಿತ ಸಾಹಿತ್ಯ ಇತ್ಯಾದಿ ದಾಖಲೆಗಳು ಉಲ್ಲೇಖಿಸದೆ ಇರತಕ್ಕ ಅನೇಕ ಸಾಂಸ್ಕೃತಿಕ, ಧಾರ್ಮಿಕ ವಿಚಾರಗಳನ್ನು ಪಾಡ್ದನಗಳು ಹೆಜ್ಜೆಹೆಜ್ಜೆಗೂ ಬಣ್ಣಿಸಿ ತೋರಿಸುತ್ತದೆ. ಸಿರಿಯ ಕಥಾನಕದಲ್ಲಿ ಅವಳ ಬದುಕು ಮತ್ತು ಹೋರಾಟಗಳು ಸ್ವಾಭಿಮಾನದ ಅಂಶವಾಗಿಯೂ, ತನ್ನಿಮಾನಿಗದಲ್ಲಿನ ಮಾನವೀಯ ಮೌಲ್ಯಗಳ ಸಹಜ ಚಿತ್ರಣಗಳ ಮೂಲಕ ಹೆಣ್ಣಿನ ಜೀವನವನ್ನು ಅನಾವರಣಗೊಳಿಸಲಾಗಿದೆ. ತುಳುನಾಡನ್ನಾಳಿದ ಬೆರಳೆಣಿಕೆಯ ಅರಸು ಮನೆತನಗಳ ರಾಣಿಯರು ಮತ್ತು ಕೆಳಸ್ತರದ ಮಹಿಳೆಯರ ಕುರಿತು ಗಮನಹರಿಸಲಾಗಿದೆ. ಜಿಲ್ಲೆಯ ವಿವಿಧ ಭಾಗಗಳ ಕೆಳವರ್ಗದ ಮಹಿಳೆಯರ ಸ್ಥಿತಿಗತಿಗಳನ್ನು ಸಂದರ್ಶನದ ಮೂಲಕ ವಿರಚಿಸಲಾಗಿದೆ.

## ಅಧ್ಯಾಯ ೩ : ಮಿಷನರಿಗಳು ಮತ್ತು ಮಹಿಳೆ

ಮೂರನೆಯ ಅಧ್ಯಾಯದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಿಷನರಿಗಳ ಶೈಕ್ಷಣಿಕ ಚಟುವಟಿಕೆಗಳನ್ನು ಚರ್ಚಿಸಲಾಗಿದೆ. ಶಿಕ್ಷಣದ ಮೂಲಕ ಧರ್ಮಪ್ರಚಾರದ ಕಾರ್ಯವನ್ನು ಕೈಗೊಂಡ ಕ್ರೈಸ್ತ ಮಿಷನರಿಗಳ ನಿಲುವನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸಲಾಗಿದೆ. ಅದೇ ರೀತಿ ಜಿಲ್ಲೆಯ ಮಹಿಳೆಯರ ಶೈಕ್ಷಣಿಕ ಪ್ರಗತಿಯಲ್ಲಿ ಸ್ಥಳೀಯ ಶಿಕ್ಷಣ ಸಂಸ್ಥೆಗಳ ಪಾತ್ರವನ್ನು ಗಮನಿಸಲಾಗಿದೆ. ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ಮೊದಲ ಬಾರಿಗೆ ದಲಿತ ಮಹಿಳೆಯರಿಗೆ ವೈದ್ಯಕೀಯ ಕೋರ್ಸು ಮಾಡಲು ಬ್ರಿಟಿಷ್ ಸರಕಾರ ನೀಡಿದ ಅವಕಾಶ, ಮಹಿಳಾ ಆರೋಗ್ಯ ಸುಧಾರಣೆ ಮತ್ತು ಮಕ್ಕಳ ಸುರಕ್ಷತೆಗಾಗಿ ಸ್ಥಾಪಿಸಲ್ಪಟ್ಟ ಪ್ರಸವಶಾಸ್ತ್ರ ತರಬೇತಿ ಕೇಂದ್ರಗಳಿಗೆ ಮಹಿಳೆಯರ ಸ್ಪಂದನೆ, ಸೂಲಗಿತ್ತಿಯವರ ಅಜಾಗರುಕತೆಯಿಂದ ಸಂಭವಿಸುವ ಪ್ರಸೂತ ಮರಣಗಳನ್ನು ತಪ್ಪಿಸಲು ಕೈಗೊಂಡ ಕ್ರಮಗಳು, ಮಾತೃತ್ವ ಮತ್ತು ಶಿಶುಕಲ್ಯಾಣ ಕೇಂದ್ರಗಳನ್ನು ಸ್ಥಾಪಿಸಿ ದಾದಿಯರಿಗೆ ಆಧುನಿಕ ರೀತಿಯ ಸೂತಿಕಾ ಶಾಸ್ತ್ರ ತರಬೇತಿ ನೀಡಲು ಪ್ರೋತ್ಸಾಹ ಮೊದಲಾದ ವಿಷಯಗಳ ಕುರಿತು ಚರ್ಚೆ ಇದೆ. ಹೀಗೆ ಜಿಲ್ಲೆಯಲ್ಲಿ ಆರಂಭವಾದ ಪಾಶ್ಚಾತ್ಯ ಚಿಕಿತ್ಸಾಕ್ರಮಕ್ಕೆ ಆರಂಭದಲ್ಲಿ ಸ್ಪಂದನೆ ಇಲ್ಲದಿದ್ದರೂ ನಂತರ ಈ ನಿಟ್ಟಿನಲ್ಲಿ ದೊರೆತ ಜನರ ಪ್ರತಿಕ್ರಿಯೆಗಳನ್ನು ಚರ್ಚಿಸಲಾಗಿದೆ.

### ಅಧ್ಯಾಯ ೪ : ಮಹಿಳೆ ಮತ್ತು ಸಾಮಾಜಿಕ ಸುಧಾರಣೆಗಳು

ಪಾಶ್ಚಿಮಾತ್ಯ ಸಂಸ್ಕೃತಿಯೊಡನೆ ಸಂಪರ್ಕ ಬೆಳೆದ ಪರಿಣಾಮವಾಗಿ ನವಚೈತನ್ಯದ ಭಾವನೆಗಳು ೧೯ನೇ ಶತಮಾನದ ಅಂತ್ಯದ ವೇಳೆಗೆ ಮನೋವಿಕಾಸದ ಅಡಿಪಾಯವನ್ನು ಹಾಕಿಕೊಟ್ಟವು. ಯುರೋಪಿನಲ್ಲಿ ಹುಟ್ಟಿಕೊಂಡ ಉದಾರ ಮತ್ತು ಪ್ರಜಾಪ್ರಭುತ್ವ ತತ್ವಗಳು ಸಾಮಾಜಿಕ ಸುಧಾರಣೆಗಳಿಗೆ ಸ್ಫೂರ್ತಿಯಾದವು. ಬಾಲ್ಯವಿವಾಹ, ವಿಧವಾ ಪದ್ಧತಿ, ಸ್ತ್ರೀ ಶಿಕ್ಷಣಕ್ಕೆ ವಿರೋಧ, ಪರ್ದಾ ಪದ್ಧತಿ, ಹೆಣ್ಣುಶಿಶು ಹತ್ಯೆ ಇಂತಹ ಅನೇಕ ಸಾಮಾಜಿಕ ಕಟ್ಟುಪಾಡುಗಳ ಸಂಕೋಲೆಯಲ್ಲಿದ್ದ ಮಹಿಳೆಯರ ಸಾಮಾಜಿಕ ಅಭಿವೃದ್ಧಿಗೆ ಶಿಕ್ಷಣದ ಅಗತ್ಯವನ್ನು ಮನಗಂಡ ಸಮಾಜ ಸುಧಾರಕರು ಮತ್ತು ಸಮಾಜ ಸುಧಾರಣಾ ಸಂಸ್ಥೆಗಳ ಪಾಲ್ಗೊಳ್ಳುವಿಕೆ, ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಮಹಿಳೆಯರ ಶ್ರೇಯೋಭಿವೃದ್ಧಿಗೆ ಶ್ರಮಿಸಿದ ಹಲವು ಸುಧಾರಕರು ಹಾಗೂ ವಸಾಹತು ಭಾರತದಲ್ಲಿ ಜಾರಿಗೊಳಿಸಲ್ಪಟ್ಟ ಮಹಿಳಾ ಸಂಬಂಧಿ ಕಾಯ್ದೆಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ಅಧ್ಯಾಯ ೫ : ಶೈಕ್ಷಣಿಕ ಸ್ಥಿತ್ಯಂತರ ಮತ್ತು ಸಾಮಾಜಿಕ ಬದಲಾವಣೆ

ಐದನೇ ಅಧ್ಯಾಯದಲ್ಲಿ ಶೈಕ್ಷಣಿಕ ಸ್ಥಿತ್ಯಂತರದ ನಂತರದ ಸಾಮಾಜಿಕ ಬದಲಾವಣೆಗಳ ಕುರಿತು ಚರ್ಚೆ ಇದೆ. ಅಜ್ಞಾನದಿಂದ ಜ್ಞಾನದ ಕಡೆಗೆ ಕೊಂಡೊಯ್ಯುವ ಸಾಧನವಾದ ಶಿಕ್ಷಣವು ವಸಾಹತು ಕಾಲಘಟ್ಟದಲ್ಲಿ ಬೀರಿದ ಪ್ರಭಾವದಿಂದ ಎಚ್ಚೆತ್ತ ಸ್ತ್ರೀಯರು ತಮ್ಮ ಮನಸ್ಸಿನ ತುಮುಲಗಳನ್ನು ಪತ್ರಿಕೆಗಳಲ್ಲಿ ಲೇಖನಗಳ ಮೂಲಕ  ಹಂಚಿಕೊಂಡಿರುವುನ್ನು ಚರ್ಚಿಸಲಾಗಿದೆ. ಹೀಗೆ ಮಹಿಳೆಗೆ ದೊರೆತ ಹೊಸ ಶೈಕ್ಷಣಿಕ ಸಂಪರ್ಕ ಅವಳ ಸ್ಥಿತಿಗತಿಯಲ್ಲಿ ಸಣ್ಣ ಸಂಚಲನ ಮೂಡಿಸಿ ಅವಳ ಆಲೋಚನಾ ವಿಧಾನವನ್ನು ವಿಸ್ತರಿಸಿರುವ ಬಗೆಯನ್ನು ವಿಶ್ಲೇಷಿಸಲಾಗಿದೆ.

### ಅಧ್ಯಾಯ ೬: ಸ್ವಾತಂತ್ರ್ಯ ಹೋರಾಟ ಮತ್ತು ಮಹಿಳೆ

ವಿದೇಶಿ ಆಡಳಿತದ ಸ್ಪರ್ಧಿಯಾಗಿ ಹುಟ್ಟಿಕೊಂಡ ಭಾರತದ ರಾಷ್ಟ್ರೀಯತೆಯು ಭಾರತೀಯರಲ್ಲಿ ರಾಷ್ಟ್ರೀಯ ಮನೋಭಾವದ ಬೆಳವಣಿಗೆಗೆ ಸಹಕಾರಿಯಾಯಿತು. ಬ್ರಿಟಿಷರ ಆಗಮನದ ತದನಂತರ ಸ್ವಾತಂತ್ರ್ಯ ಚಳವಳಿಯ ಸುತ್ತ ನಡೆದ ನೂರಾರು ಸಣ್ಣ ಪುಟ್ಟ ಚಲನೆಗಳು ಈ ನೆಲದ ಬದುಕನ್ನು, ಚಿಂತನಾ ಕ್ರಮವನ್ನು ಬದಲಿಸಿತು. ದೇಶಾಭಿಮಾನದಲ್ಲಿ ಕಾರ್ಯಮಗ್ನಳಾದ ಮಹಿಳೆ ತಮ್ಮ ಪುರುಷ ಸಹವರ್ತಿಗಳ ನೋವು ಮತ್ತು ತ್ಯಾಗಗಳನ್ನು ಸಮಾನವಾಗಿ ಹಂಚಿಕೊಂಡು ಹೋರಾಡಿದಳು. ಗಾಂಧೀಜಿಯವರ ಕರೆಗೆ ಓಗೊಟ್ಟು ಭಾರತದಾದ್ಯಂತ ಮಹಿಳೆಯರು ರಾಷ್ಟ್ರೀಯ ಹೋರಾಟಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡರು. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ಅನೇಕ ಮಹಿಳೆಯರು ರಚನಾತ್ಮಕ ಕಾರ್ಯಗಳಲ್ಲಿ ಭಾಗವಹಿಸಿ ಸೆರೆವಾಸ ಅನುಭವಿಸಿದರು. ಯಾವ ಫಲಾಪೇಕ್ಷೆ

ಬಯಸದೆ ರಾಷ್ಟ್ರೀಯ ಚಟುವಟಿಕೆಗಳಲ್ಲಿ ಪಾಲ್ಗೊಂಡ ಮಹಿಳೆಯರ ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

## ಉಪಸಂಹಾರ ಮತ್ತು ಫಲಿತಗಳು

ಈ ಭಾಗವು ಸಂಶೋಧನಾ ಪ್ರಬಂಧದ ಸಾರ ಸಂಗ್ರಹಗಳನ್ನೊಳಗೊಂಡಿದೆ. ವಸಾಹತುಶಾಹಿ ಆಡಳಿತದ ಪ್ರಭಾವದ ಮೂಲಕ ಕಂಡುಬಂದ ಸಾಮಾಜಿಕ ಬದಲಾವಣೆಯನ್ನು ಪರಾಮರ್ಶಿಸಲಾಗಿದೆ. ಮಿಷನರಿಗಳ ಚಟುವಟಿಕೆಗಳು, ಅವರು ಸ್ಥಾಪಿಸಿದ ಶೈಕ್ಷಣಿಕ ಸಂಸ್ಥೆಗಳ ಧನಾತ್ಮಕ ಮತ್ತು ಋಣಾತ್ಮಕ ಪ್ರಭಾವವನ್ನು ಅವಲೋಕಿಸಲಾಗಿದೆ. ಶೈಕ್ಷಣಿಕ ಸ್ಥಿತ್ಯಂತರಗಳು ಮಹಿಳೆಗೆ ಧ್ವನಿ ನೀಡೀತೇ? ಎಂಬುವುದನ್ನು ಚರ್ಚಿಸಲಾಗಿದೆ. ರಾಷ್ಟ್ರೀಯ ಹೋರಾಟಗಳಲ್ಲಿ ಪುರುಷರಿಗೆ ಹೆಗಲುಕೊಟ್ಟು ಎಲೆಮರೆಕಾಯಿಯಂತೆ ದುಡಿದರೂ, ಅಸ್ಮಿತೆಯೇ ದೊರಕದ ಮಹಿಳೆಯರನ್ನು ಗುರುತಿಸಿ, ಅವರ ಪಾತ್ರವನ್ನು ಬಿಂಬಿಸಲಾಗಿದೆ. ಈ ಮೇಲಿನ ಎಲ್ಲಾ ಅಧ್ಯಾಯಗಳಲ್ಲಿ ಕಂಡುಬಂದ ಅಂಶಗಳನ್ನು ಕ್ರೋಢೀಕರಿಸಿ ಫಲಿತಗಳನ್ನು ನೀಡಲಾಗಿದೆ.

# ಸಂದರ್ಭ ಸೂಚಿ


೧. ಜೆರಾಲ್ಡಿನ್ ಫೋಬ್ಸ್ (ಮೂಲ), ಎಚ್. ಎಸ್ (ಶ್ರೀಮತಿ ಅನು): ೨೦೦೧, ಆಧುನಿಕ ಭಾರತದಲ್ಲಿ ಮಹಿಳೆ, ಪ್ರಗತಿ ಗ್ರಾಫಿಕ್ಸ್, ಪುಟಗಳು ೧೮-೨೦.

೨. ಪಾರ್ಥಾ ಚಟರ್ಜಿ : ೧೯೮೭, ದಿ ನ್ಯಾಷನಲಿಷ್ಟ್ ರೆಸೊಲೂಷನ್ ಆಫ್ ವಿಮೆನ್ಸ್ ಕ್ವೆಷ್ಚನ್, ಸೆಂಟರ್ ಫಾರ್ ಸ್ಟಡೀಸ್ ಇನ್ ಸೋಷಿಯಲ್ ಸೈನ್ಸಸ್, ಪುಟಗಳು ೨೩೮-೩೯.

೩. ಜ್ಯೋತಿ ಶಶಿಕುಮಾರ್: ೨೦೦೭, ಮಹಿಳಾ ಸಾಮಾಜಿಕತೆ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೧೩.

೪. ದೇವಕಿ ಜೈನ್: ೧೯೭೪, ಇಂಡಿಯನ್ ವಿಮೆನ್, ರೋಮಿಲಾ ಥಾಪರ್ ರವರ ಲೇಖನ - ಲುಕ್ಕಿಂಗ್ ಬ್ಯಾಕ್ ಇನ್ ಹಿಸ್ಟರಿ, ಮಿನಿಸ್ಟರ್ ಆಫ್ ಇನ್ಫಾರ್ಮೇಶನ್ ಆಂಡ್ ಬ್ರಾಡ್ ಕಾಸ್ಟಿಂಗ್, ನ್ಯೂ ಡೆಲ್ಲಿ, ಪುಟ ೯.

೫. ರಾಮಕೃಷ್ಣ ಜಿ. (ಸಂ): ೨೦೦೭, ಹೊಸತು, ಸಂಪುಟ ೮, ಸಂಚಿಕೆ ೬, ಜನವರಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪುಟ ೧೪.

೬. ಸಿಮೋನ್ ದಿ ಬೊವಾ (ಮೂಲ), ಎಚ್. ಎಸ್. ಶ್ರೀಮತಿ (ಅನು): ೨೦೦೭, ಸೆಕ್ಂಡ್ ಸೆಕ್ಸ್, ಅಧ್ಯಯನ ಮಂಡಲ, ಬೆಂಗಳೂರು, ಪುಟ ೨೫೨.

೭. ಅದೇ, ಪುಟ ೪೯೭.

೮. ಎಚ್.ಎಸ್ ಶ್ರೀಮತಿ: ೨೦೧೨, ಸ್ತ್ರೀವಾದ: ತಾತ್ವಿಕತೆ , ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ಪುಟ ೫೬.

೯. ರಾಮಕೃಷ್ಣ. ಜಿ (ಸಂ): ಪೂರ್ವೋಕ್ತ, ಪುಟಗಳು ೫೭-೬೦.

೧೦. ಎಚ್.ಎಸ್ ಶ್ರೀಮತಿ: ಪೂರ್ವೋಕ್ತ, ಪುಟ ೮.

೧೧. ಅದೇ, ಪುಟ ೨.

೧೨. ಮೋಹನ್ ಕೃಷ್ಣ ರೈ. ಕೆ: ೨೦೧೦, ಕೆನರಾದ ವಿಭಜನೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೧೨.

೧೩. ಜೆರಾಲ್ಡಿನ್ ಫೋಬ್ಸ್ (ಮೂಲ), ಶ್ರೀಮತಿ ಎಚ್. ಎಸ್: ಪೂರ್ವೋಕ್ತ, ಪುಟಗಳು ೨೦- ೨೧.

೧೪. ಫ್ರಾಂಟ್ಸ್ ಫ್ಯಾನನ್: ೧೯೬೭, ಬ್ಲ್ಯಾಕ್ ಸ್ಕಿನ್ ವೈಟ್ ಮಾಸ್ಕ್, ಪೆನ್ನಿನ್, ಹರ್ಮೊಂಡ್ಸ್ ವರ್ತ್,
ಪುಟ ೩೦.

೧೫. ಬರ್ನಾರ್ಡ್ ಕೋಹ್ನ್ ಎಸ್: ೧೯೯೭, ಕೊಲೋನಿಯಾಲಿಸಂ ಆಂಡ್ ಇಟ್ಸ್ ಫಾರ್ಮ್ಸ್ ಆಫ್ ನಾಲೆಡ್ಜ್, ಆಕ್ಸಫರ್ಡ್ ಯುನಿವರ್ಸಿಟಿ ಪ್ರೆಸ್, ಡೆಲ್ಲಿ, ಪುಟ ix.

೧೬. ರಾಮಚಂದ್ರನ್ ಸಿ.ಎನ್: ೧೯೯೦, ವಸಾಹತ್ತೋತ್ತರ ಚಿಂತನೆ, ಅಂಕಿತ ಪ್ರಕಾಶನ, ಬೆಂಗಳೂರು, ಪುಟ ೪೩.

೧೭. ಡಬ್ಲ್ಯು ಎಡ್ವರ್ಡ್ ಸೈದ್: ೧೯೭೫, ಓರಿಯಂಟಲಿಸಂ: ವೆಸ್ಟರ್ನ್ ಕನ್ಸಂಟೇಶನ್ಸ್ ಆಫ್ ದಿ ಓರಿಯಂಟ್, ಲಂಡನ್, ಪೆಂಗ್ವಿನ್ ಬುಕ್ಸ್, ೧೯೭೮, ರಿಪ್ರಿಂಟೆಡ್ ಎಡಿಶನ್, ಪೆಂಗ್ವಿನ್ ಬುಕ್ಸ್, ನ್ಯೂಡೆಲ್ಲಿ.

೧೮. ಬಿ. ಸುರೇಂದ್ರ ರಾವ್: ೨೦೦೧, ದಿ ಮೋಡರ್ನ್ ಇನ್ ಮೋಡರ್ನ್ ಇಂಡಿಯನ್ ಹಿಸ್ಟರಿ, ಅಧ್ಯಕ್ಷೀಯ ಭಾಷಣ, ಇಂಡಿಯನ್ ಹಿಸ್ಟರಿ ಕಾಂಗ್ರೆಸ್, ಕಲ್ಕತ್ತಾ ವಿಶ್ವವಿದ್ಯಾಲಯ, ಕಲ್ಕತ್ತ, ಪುಟ ೫.

೧೯. ಜೆಸ್ಸಿ ಟೆಲ್ಲಿಸ್ ನಾಯಕ್: ೧೯೮೩, ಇಂಡಿಯನ್ ವಿಮನ್ ವುಡ್ ದೆನ್ ಆಂಡ್ ನವ್, ಸಾಟ್ ಪ್ರಕಾಶನ ಸಂಚಾರ್ ಕೇಂದ್ರ, ಇಂದೋರ್, ಪುಟ ೩೦.

೨೦. ಬಿ. ಸುರೇಂದ್ರ ರಾವ್ : ೨೦೧೦, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಪುಟಗಳು ೨೦೩- ೨೦೪.

೨೧. ಪ್ರಕಾಶ್‌ಗ್ಯಾನ್(ಸಂ): ೧೯೯೫, ಇಂಪೀರಿಯಲ್ ಹಿಸ್ಟರೀಸ್ ಆಂಡ್ ಪೋಸ್ಟ್ ಕೊಲೋನಿಯಲ್ ಡಿಸ್ಪೇಸ್ಮೆಂಟ್ಸ್, ಪ್ರಿನ್ಸ್‌ಟನ್ ಯುನಿವರ್ಸಿಟಿ ಪ್ರೆಸ್, ನ್ಯೂ ಜೆರ್ಸಿ, ಪುಟ ೬೭.

೨೨. ಶ್ರೀನಿವಾಸ್ ಎಂ.ಎನ್: ೧೯೬೬, ಸೋಷಿಯಲ್ ಚೇಂಜ್ ಇನ್ ಮಾಡರ್ನ್ ಇಂಡಿಯಾ, ಓರಿಯಂಟ್ ಬ್ಲಾಕ್ ಸ್ವಾನ್ ಪ್ರೈವೇಟ್ ಲಿಮಿಟೆಡ್, ನ್ಯೂ ಡೆಲ್ಲಿ.

೨೩. ರಾಮಚಂದ್ರನ್ ಸಿ.ಎನ್: ಪೂರ್ವೋಕ್ತ, ಪುಟ ೧೨.

೨೪. ಬಿ. ಸುರೇಂದ್ರ ರಾವ್: ಪೂರ್ವೋಕ್ತ, ಪುಟ ೩.

೨೫. ಡೇವಿಡ್ ಲರ್ನರ್: ೧೯೫೮, ದಿ ಪಾಸಿಂಗ್ ಆಫ್ ಟ್ರೆಡಿಷನಲ್ ಸೊಸೈಟಿ: ಮೋಡರ್ನೈಸಿಂಗ್ ಮಿಡಲ್ ಈಸ್ಟ್, ಫ್ರೀನ್ ಪ್ರೆಸ್ ಆಫ್ ಗ್ಲೆನ್ ಕೊ, ನ್ಯೂಯಾರ್ಕ್.

೨೬. ನಿರಂತರ: ೨೦೦೯, ಬಿ. ವಿ. ಕಕ್ಕಿಲ್ಲಾಯ ಸಂಭಾವನಾ ಗ್ರಂಥ, ಎಂ ಎಸ್. ಕೃಷ್ಣನ್ ಸ್ಮರಣ ಸಂಸ್ಥೆ ಬೆಂಗಳೂರು, ಪುಟ ೩೧೬.

೨೭. ಜೆರಾಲ್ಡಿನ್ ಫೋಬ್ಸ್ (ಮೂಲ), ಶ್ರೀಮತಿ ಎಚ್. ಎಸ್ (ಅನು): ಪೂರ್ವೋಕ್ತ, ಪುಟ ೪೭.

೨೮. ಉಷಾ ಎಂ: ೨೦೦೭, ಆಧುನಿಕ ಮಹಿಳಾ ಸಾಹಿತ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೨೫.

೨೯. ಸೂಸಿ ಥಾರು ಮತ್ತು ಲಲಿತ: ಸಂಪುಟ ೧, ೧೯೯೫, ವಿಮೆನ್ ರೈಟಿಂಗ್ ಇನ್ ಇಂಡಿಯಾ ಕ್ರಿ.ಪೂ. ೬೦೦ ಟು ದಿ ಪ್ರೆಸೆಂಟ್, ಆಕ್ಸ್ ಫರ್ಡ್ ಯುನಿವರ್ಸಿಟಿ ಪ್ರೆಸ್, ಪುಟ ೧೯೯.

೩೦. ಇಂಡಿಯನ್ ಎಡುಕೇಶನ್ ಪಾಲಿಸಿ: ೧೯೧೩, ಸುಪರಿಂಟೆಂಡೆಂಟ್ ಆಫ್ ಗವರ್ನಮೆಂಟ್ ಪ್ರಿಂಟಿಂಗ್ ಇಂಡಿಯಾ, ಕಲ್ಕತ್ತಾ, ೧೯೧೪.

೩೧. ಜೆ ಸ್ಟರಕ್ : ಸಂಪುಟ ೧, ೧೮೯೪, ಸೌತ್ ಕೆನರಾ, ಮದ್ರಾಸ್ ಡಿಸ್ಟ್ರಿಕ್ಟ್ ಮ್ಯಾನುವಲ್ಸ್, ಮದ್ರಾಸ್, ಪುಟ ೧೩೫.

೩೨. ಅಡ್ಯನಡ್ಕ ಕೃಷ್ಣ ಭಟ್ (ಸಂ): ೧೯೭೭, ಸುದರ್ಶನ, ವಿಜಯ ಕಾಲೇಜು ಟ್ರಸ್ಟ್ ಮುಲ್ಕಿ, ದಕ್ಷಿಣ ಕನ್ನಡ, ಪುಟಗಳು ೧೪೫-೧೪೬.

೩೩. ರಮೇಶ್ ಕೆ.ವಿ: ೧೯೬೯, ತುಳುನಾಡಿನ ಇತಿಹಾಸ, ಗೀತಾ ಬುಕ್ ಹೌಸ್, ಮೈಸೂರು, ಪುಟಗಳು ೧೮-೨೦.

೩೪. ವಾಮನ ನಂದಾವರ (ಸಂ): ಕೊಡಿಪು, ವಿಶ್ವ ತುಳು ಸಮ್ಮೇಳನ, ನೆಂಪು ಸಂಚಿ, ೨೦೦೯, ಇಂದಿರಾ ಹೆಗ್ಗಡೆಯವರ ಲೇಖನ, ತುಳುನಾಡಿನ ಸಿಂಹಾಸನವನ್ನಾಳಿದ ಮಹಿಳೆಯರು, ಇಂದಿರಾ ಹೆಗ್ಗಡೆ, ಪುಟ ೫.

೩೫. ಗಣಪತಿ ರಾವ್ ಐಗಳ್: ೨೦೦೪, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಪುಟ ೩೮೨.

೩೬. ರಮೇಶ್ ಕೆ.ವಿ: ೧೯೬೯, ತುಳುನಾಡಿನ ಇತಿಹಾಸ, ಗೀತಾ ಬುಕ್ ಹೌಸ್, ಮೈಸೂರು, ಪುಟಗಳು ೨೧-೨೨.

೩೭. ಜೆ ಸ್ಟರಕ್ : ಪೂರ್ವೋಕ್ತ, ಪುಟಗಳು ೧೩೫ -೧೪೦.

೩೮. ಕ್ರಾಂತಿ ಫರಾಯಾಸ್: ೧೯೯೯, ದಿ ಕ್ರಿಶ್ಚಿಯನ್ ಇಂಪಾಕ್ಟ್ ಇನ್ ಸೌತ್ ಕೆನರಾ, ಚರ್ಚ್ ಹಿಸ್ಟರಿ ಅಸೋಸಿಯೇಷನ್ ಆಫ್ ಇಂಡಿಯಾ, ಮುಂಬಯಿ, ಪುಟ ೮.

೩೯. ಜೆ ಸ್ಟರಕ್ : ಪೂರ್ವೋಕ್ತ, ಪುಟ. ೧೮೧ - ೧೮೨.

೪೦. ಅದೇ, ಪುಟಗಳು ೧೮೪-೧೮೬.

೪೧. ಬಿ.ಎ ವಿವೇಕ್ ರೈ: ೨೦೧೬, ಮಂಗಳೂರು ದರ್ಶನ, ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ಸಂಪುಟ ೧, ಪುಟಗಳು ೨೦೯-೨೧೦.

೪೨. ಜೆ ಸ್ಟರಕ್ : ಪೂರ್ವೋಕ್ತ, ಪುಟಗಳು ೧೩೬-೩೭.

೪೩. ಶಿವರಾಮ ಪಡಿಕ್ಕಲ್ : ೨೦೦೧, ನಾಡುನುಡಿಯ ರೂಪಕ, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳಗಂಗೋತ್ರಿ, ಪುಟ ೩೫.

೪೪. ಮೋಹನ ಕೃಷ್ಣ ರೈ.ಕೆ: ೨೦೦೭, ವಸಾಹತುಶಾಹಿ ಮತ್ತು ನಗರೀಕರಣ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೯.

೪೫. ಬಿ. ಸುರೇಂದ್ರ ರಾವ್: ಪೂರ್ವೋಕ್ತ, ಪುಟ ೨೧೦.

೪೬. ಸರೋಜಿನಿ ಶಿಂತ್ರಿ: ೧೯೮೧, ನಾನೊಂದು ಕನಸು ಕಂಡೆ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

# ಅಧ್ಯಾಯ: ಎರಡು

# ವಸಾಹತುಪೂರ್ವ ಕಾಲಘಟ್ಟದ ಮಹಿಳೆಯ ಸ್ಥಿತಿಗತಿಗಳು

೨.೧ ಪಾಡ್ದನಗಳಲ್ಲಿ ಸ್ತ್ರೀಯರು

೨.೨ ಕರಾವಳಿಯ ಪ್ರಮುಖ ರಾಜಮನೆತನಗಳ ಸ್ತ್ರೀಯರು

೨.೩ ಕೆಳವರ್ಗದ ಮಹಿಳೆಯರ ಸ್ಥಿತಿಗತಿಗಳು

## ಅಧ್ಯಾಯ : ಎರಡು

## ವಸಾಹತುಪೂರ್ವ ಕಾಲಘಟ್ಟದ ಮಹಿಳೆಯ ಸ್ಥಿತಿಗಳು

ಪೂರ್ವ ವೈದಿಕ ಕಾಲದಲ್ಲಿ ಮಹಿಳೆಯ ಸ್ಥಾನಮಾನ ಉಚ್ಚಾಯ ಮಟ್ಟದಲ್ಲಿದ್ದರೂ, ನಂತರದಲ್ಲಿ ಬದಲಾವಣೆಗೊಳಪಟ್ಟು ಕಾಲಕಳೆದಂತೆ, ಆಕೆಯ ಧಾರ್ಮಿಕ ಹಕ್ಕುಗಳಿಗೆ ಚ್ಯುತಿ ಬರತೊಡಗಿತು. ಬಾಲ್ಯವಿವಾಹ, ವಿಧವಾ ಪದ್ಧತಿ ಆಚರಣೆಗೆ ಬಂದು ಅಂತರ್ಜಾತೀಯ ವಿವಾಹಗಳಿಗೆ ನಿಷೇಧ ಹೇರಲಾಯಿತು. ಸುಮಾರು ಐದನೇ ಶತಮಾನದ ವೇಳೆಗೆ ಅಸ್ತಿತ್ವಕ್ಕೆ ಬಂದ ಸತಿ ಪದ್ಧತಿ ಹೆಣ್ಣು ಹೆತ್ತವರಿಗೆ ಆಘಾತಕಾರಿ ನೋವು ತಂದೊಡ್ಡಿತು. ತಮ್ಮ ಕಣ್ಮುಂದೆಯೇ ಹೆತ್ತ ಮಗಳ ದಹನ ಅಂತ್ಯವಿಲ್ಲದ ಭಯ ಮತ್ತು ಆತಂಕಕ್ಕೆ ಕಾರಣವಾಯಿತು.[1] 'ಎಲ್ಲಿ ಸ್ತ್ರೀಯರು ಪೂಜಿಸಲ್ಪಡುತ್ತಾರೋ, ಅಲ್ಲಿ ದೇವತೆಗಳು ರಮಿಸುತ್ತಾರೆ' ಎಂದು ಹೇಳಿದ ಪ್ರಾಚೀನ ಹಿಂದೂ ಸಂಸ್ಕೃತಿಯ ಒಡಲಲ್ಲೇ ಹೆಣ್ಣಿಗೆ ಸ್ವಾತಂತ್ರ್ಯವನ್ನು ನಿರಾಕರಿಸಿದ ಆ ಸಂಸ್ಕೃತಿ ಅವಳಿಗೆ ಸಂಕೋಲೆಯನ್ನು ಬಿಗಿದು ದನಿಯೆತ್ತದಂತೆ ಮಾಡಿದೆ.[2] ಪಿತೃಪ್ರಧಾನ ವ್ಯವಸ್ಥೆಯ ಹಿಡಿತದಲ್ಲಿದ್ದ ಸ್ಥಾಪಿತ ಧಾರ್ಮಿಕ ಪರಂಪರೆಗಳು ಮಹಿಳೆಯನ್ನು ಅಸ್ಪೃಶ್ಯರೊಡನೆ ಸಮೀಕರಿಸಿ, ನಿರ್ಜೀವವಾದ ವಸ್ತುವಿನ ಮಟ್ಟಕ್ಕೆ ಆಕೆ ಇಳಿಸಲ್ಪಟ್ಟಿದ್ದಳು.

ಜ್ಞಾನದ ಉತ್ಪಾದನೆಯ ಪ್ರಕ್ರಿಯೆಯಿಂದ ಮಹಿಳೆಯರನ್ನು ಹೊರಗಿಡುವ ಕಾರ್ಯವು ಉದ್ದೇಶಪೂರ್ವಕ ಮತ್ತು ರಾಜಕೀಯ ಸ್ವರೂಪದ್ದಾಗಿತ್ತು. ಅದರ ಗುರಿ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಧಿಕಾರ ಪುರುಷರಲ್ಲೇ ಉಳಿಯುವಂಥ ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯನ್ನು ಉಳಿಸಿ, ಸ್ತ್ರೀಯರ ಅಧೀನತೆಯನ್ನು ಮುಂದುವರಿಸುವುದೇ ಆಗಿತ್ತು. ಇತಿಹಾಸದುದ್ದಕ್ಕೂ ಮಹಿಳೆಯರ ಶಿಕ್ಷಣ ಮತ್ತು ಅವರ ಬೌದ್ಧಿಕ ಪ್ರವೃತ್ತಿಗಳಿಗೆ ಕಂಡುಬರುವ ವಿರೋಧವನ್ನು ಇದು ವಿವರಿಸುತ್ತದೆ. ಪರಿಕಲ್ಪನೆಗಳನ್ನು ರೂಪಿಸಲು ಮತ್ತು ಜ್ಞಾನವನ್ನು ಸೃಷ್ಟಿಸಲು ಅಗತ್ಯವಾದ ಬೌದ್ಧಿಕ ಅವಕಾಶ ನಿರಾಕರಿಸಲ್ಪಟ್ಟ ಕಾರಣದಿಂದ ಜ್ಞಾನದ ಬೆಳವಣಿಗೆಗೆ ಗಣನೀಯ ಕೊಡುಗೆ ನೀಡಲು ಕೆಲವೇ ಮಹಿಳೆಯರಿಗೆ ಮಾತ್ರ ಸಾಧ್ಯವಾಯಿತು. ಇದಲ್ಲದೆ ಕಲೆ, ಸಾಹಿತ್ಯ ಮತ್ತು ವಿಜ್ಞಾನಗಳಿಗೆ ಮಹಿಳೆಯರ ಕೊಡುಗೆಗಳನ್ನು ಪುರುಷರು (ಎಂದರೆ, ಪತಿಯರು, ಸಹೋದರರು, ತಂದೆಯರು, ಅಥವಾ ಅವರ

ಜೊತೆಯಲ್ಲಿ ಕೆಲಸಮಾಡಿದ ಪುರುಷ ಸಂಶೋಧಕರು) ತಮ್ಮ ಸ್ವಂತಕ್ಕೆ ಬಳಸಿಕೊಂಡರು ಅಥವಾ ಅವು ಪ್ರಚಲಿತ (ಪುರುಷ ಕೇಂದ್ರಿತ) ಜೀವನ ದೃಷ್ಟಿಗೆ ವಿರುದ್ಧವಾಗಿದ್ದರೆ ಅವುಗಳನ್ನು ಪರಿಗಣಿಸಲಿಲ್ಲ.[೩]

## ೨.೧ ಪಾಡ್ದನಗಳಲ್ಲಿ ಸ್ತ್ರೀಯರು

ಪಾಡ್ದನಗಳು ತುಳು ಜನಪದ ಸಾಹಿತ್ಯದ ಒಂದು ವಿಶೇಷ ಪ್ರಕಾರ. ಇವು ತುಳುನಾಡಿನ ನಂಬಿಕೆ, ನಡವಳಿಕೆ, ಆಚಾರ-ವಿಚಾರ, ಕಟ್ಟುಕಟ್ಟಳೆ, ವಿಧಿ-ನಿಷೇಧ, ಆರಾಧನೆ, ಆಚರಣೆ, ಯುದ್ಧ ಕ್ರೀಡೆ, ಬೇಟೆ, ಆರ್ಥಿಕ, ರಾಜಕೀಯ, ನ್ಯಾಯವ್ಯವಸ್ಥೆ, ಜಾತಿವ್ಯವಸ್ಥೆ, ಬಂಧುತ್ವವ್ಯವಸ್ಥೆ, ಹೆಣ್ಣು ಗಂಡಿನ ಸಂಬಂಧ ಸಂಘರ್ಷಗಳನ್ನು ಸಮಗ್ರವಾಗಿ ಪ್ರತಿಭಟಿಸುವ ಮೌಖಿಕ ದಾಖಲೆಗಳಾಗಿವೆ. ಪಾಡ್ದನಗಳು ಕೇವಲ ನಿಶ್ಚಲ ಗತವನ್ನು ಪ್ರತಿನಿಧಿಸುವುದಿಲ್ಲ, ಬದಲಾಗಿ ಭೂತ ವರ್ತಮಾನಗಳ ಚಲನಶೀಲ ಸಂಬಂಧಗಳನ್ನು ಪ್ರತಿನಿಧಿಸುತ್ತವೆ.[೪] ಇವು ತಲೆ ತಲಾಂತರದಿಂದ ಜನರ ಬಾಯಿಂದ ಬಾಯಿಗೆ ಹರಿದುಕೊಂಡು ಬಂದವುಗಳು. ಮೌಖಿಕವಾಗಿ ಪ್ರಸರಣಗೊಳ್ಳುವಾಗ ಪಾಠಾಂತರಗಳು ಉಂಟಾಗುತ್ತವೆ. ಇವು ಜನಪದ ಹಾಡುಗಳ ಒಂದು ಮುಖ್ಯ ವೈಶಿಷ್ಟ್ಯ. ಇದು ಭೂತಾರಾಧನೆಯ ವೃತ್ತಿ ಕಲಾವಿದರಿಂದ ಬೆಳೆದು ಬಂದಿದ್ದು ಇದರ ಇನ್ನೊಂದು ಧ್ವನಿ ಕೃಷಿ ವ್ಯವಸಾಯ ನಿರತ ಸ್ತ್ರೀಯರಿಂದ ಮುಂದುವರೆದಿದೆ. ಬದುಕಿನ ನಾನಾ ಆವರ್ತನೆಗಳಲ್ಲಿ ಪಾಡ್ದನಗಳನ್ನು ಉಳಿಸಿಕೊಂಡ ಆ ಧ್ವನಿಯಲ್ಲೂ ಸ್ತ್ರೀಯರದ್ದೇ ಹೆಚ್ಚುಗಾರಿಕೆ.[೫]

ನಿಜಾರ್ಥದಲ್ಲಿ ಪಾಡ್ದನಗಳು ತುಳುನಾಡಿನ ರಾಜ್ಯ ನಿರ್ಮಾಣ ಪ್ರಕ್ರಿಯೆಯಿಂದ ಹಿಡಿದು ಜನೇತಿಹಾಸ ನಿರ್ಮಾಣದವರೆಗಿನ ಮಹತ್ವದ ವಿಚಾರಗಳನ್ನು ಒಳಗೊಂಡಿದೆ. ಪಾಡ್ದನಗಳು ದೈವಾರಾಧನೆಗಷ್ಟೇ ಸೀಮಿತಗೊಂಡ ಸಾಹಿತ್ಯವಾಗಿರದೆ, ಅವುಗಳಲ್ಲಿ ತುಳುನಾಡಿನ ಸಾಂಸ್ಕೃತಿಕ ಹಾಗೂ ಚಾರಿತ್ರಿಕ ಬದುಕು ಅಡಕವಾಗಿದೆ ಎನ್ನುವುದು ವಾಸ್ತವದ ಸಂಗತಿಯಾಗಿದೆ.[೬] ತುಳುನಾಡಿನ ಶಾಸನಗಳು, ಲಿಖಿತ ಸಾಹಿತ್ಯ ಇತ್ಯಾದಿ ದಾಖಲೆಗಳು ಉಲ್ಲೇಖಿಸದೆ ಇರತಕ್ಕ ಅನೇಕ ಸಾಂಸ್ಕೃತಿಕ, ಧಾರ್ಮಿಕ ವಿಚಾರಗಳನ್ನು ಪಾಡ್ದನಗಳು ಹೆಜ್ಜೆ ಹೆಜ್ಜೆಗೂ ಬಣ್ಣಿಸಿ ತೋರಿಸುತ್ತದೆ.[೭] ಪಾಡ್ದನ ಹಾಡುವ ಮಹಿಳಾ ಸಂಪ್ರದಾಯ ಬತ್ತದ ನೇಜಿ (ಎಳೆ ಸಸಿ) ಕೀಳುವ ಮತ್ತು ನೆಡುವ ಸಂದರ್ಭಗಳಲ್ಲಿ, ಮದುಮಗಳಿಗೆ ಮದರಂಗಿ ಹಚ್ಚುವ ಸಂದರ್ಭದಲ್ಲಿ ಹಾಗೂ ಬಿಡುವಿನ ವೇಳೆಯಲ್ಲಿ ಮನೆಯ ಆವರಣದೊಳಗೆ ಪ್ರದರ್ಶನಗೊಳ್ಳುತ್ತದೆ. ಈ ಎಲ್ಲಾ ಸಂದರ್ಭಗಳಲ್ಲೂ ಪಾಡ್ದನ ಹಾಡುಗಾರರು ಮಹಿಳೆಯರಾಗಿದ್ದು ಮೇಲುನೋಟಕ್ಕೆ ದಣಿವು ಪರಿಹಾರ ಮತ್ತು ಮನರಂಜನೆ ಉದ್ದೇಶವಾಗಿ ಕಂಡರೂ, ತುಳುವ ಪರಿಕಲ್ಪನಾತ್ಮಕ ಜಗತ್ತಿನ ಸಾಂಸ್ಕೃತಿಕ ಮೌಲ್ಯಗಳ ಸಂರಕ್ಷಣೆಯ ಒಳ ಉದ್ದೇಶವನ್ನು ಹೊಂದಿರುವುದು ಸ್ಪಷ್ಟವಾಗಿದೆ. ಇವು ಪ್ರಕಟಿಸುವ ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ ಸಂಬಂಧಗಳ

ಅಘೋಷಿತ ಸತ್ಯಗಳು ಸಾಂಪ್ರದಾಯಿಕ ನಿರೀಕ್ಷಿತ ಸ್ತ್ರೀತ್ವವನ್ನು ಪ್ರಶ್ನೆಗೊಡ್ಡುತ್ತವೆ. ಪಾಡ್ದನಗಳಲ್ಲಿ ಭೂತಗಳ ಚರಿತ್ರೆ ಇರುವುದು ಮಾತ್ರವಲ್ಲದೆ ತುಳುನಾಡಿನ ಜನರ ಬದುಕಿನ ಅನೇಕ ವಿವರಗಳು ದೊರೆಯುತ್ತದೆ. ಇವು ತುಳುನಾಡಿನ ಸಂಸ್ಕೃತಿಯ ಐತಿಹಾಸಿಕ ದಾಖಲೆಯನ್ನು ಕೊಡುವ ದೃಷ್ಟಿಯಿಂದ ಮುಖ್ಯವಾಗಿವೆ. ಪ್ರಾಚೀನ ತುಳುನಾಡಿನ ಭಿನ್ನ ಭಿನ್ನ ವರ್ಗ, ಜಾತಿಗಳು, ಜನರು, ಬೇಸಾಯ ಪದ್ಧತಿ, ಆಡಳಿತ ಪದ್ಧತಿ, ವಿನೋದ, ಕ್ರೀಡೆಗಳು, ಯುದ್ಧ ಪದ್ಧತಿ, ವಾಣಿಜ್ಯ ವ್ಯವಹಾರ, ಉಡುಗೆ ತೊಡುಗೆಗಳು, ಸಾರಿಗೆ ಸಂಪರ್ಕದ ಸ್ವರೂಪ, ಕಂದಾಯ ಪದ್ಧತಿ, ವಿದ್ಯಾಭ್ಯಾಸದ ಕ್ರಮ, ಧರ್ಮಗಳ ರೀತಿಗಳು, ನಂಬಿಕೆಗಳು ಕೌಟುಂಬಿಕ ವ್ಯವಸ್ಥೆ ಇಂತಹ ಅನೇಕ ವಿಷಯಗಳ ಮಾಹಿತಿಗಳನ್ನು ಪಾಡ್ದನಗಳಿಂದ ಪಡೆಯಬಹುದು. ಇಂದು ಪಾಡ್ದನಗಳು ಉಳಿದಿರುವುದು ಅವುಗಳ ಆಚರಣೆಗಳ ಸಂದರ್ಭದಿಂದ ಅಲ್ಲ; ಅವುಗಳಿಂದ ದೊರೆಯುವ ಸಾಂಸ್ಕೃತಿಕ ಇತಿಹಾಸ ಮತ್ತು ಸಾಮಾಜಿಕ ಧ್ವನಿಗಳಿಂದಾಗಿ.[೮]

ಜನಪದರ ಆಶು ಕವಿತೆಗಳಾದ ಪಾಡ್ದನಗಳು ನೂರಾರು ವರ್ಷಗಳಿಂದ ಬಾಯಿಂದ ಬಾಯಿಗೆ ಹರಿದು ಬಂದ ವಾಗ್ಮಯ ಸಾಹಿತ್ಯ. ಈ ಕಥನಗಳು ಹುಟ್ಟಿಕೊಳ್ಳಬೇಕಾದರೆ, ಅಲ್ಲಿ ಏನಾದರೂ ಐತಿಹ್ಯವಿದ್ದಿರಬೇಕು. ಏನಾದರೂ ಘಟನೆ ನಡೆದಿರಲೇಬೇಕು. ಘಟನೆ ನಡೆಯದೇ ಇದ್ದರೆ ಸಮಷ್ಟಿಭಾವ ಪ್ರದರ್ಶನಗೊಳ್ಳುವುದಿಲ್ಲ. ಭಾವೋದ್ವೇಗವಿಲ್ಲದೆ ಕವಿತೆ ಹುಟ್ಟುವುದಿಲ್ಲ. ಹೀಗಾಗಿ ಈ ಕಥನ ಕವನಗಳಲ್ಲಿ ಬಹುಪಾಲು ಸತ್ಯಾಂಶವಿದ್ದಿರಲೇ ಬೇಕು.[೯] ಒಟ್ಟಿನಲ್ಲಿ ತುಳುನಾಡಿನ ಸಂಸ್ಕೃತಿ ಪರಂಪರೆಯಲ್ಲಿ ಹಲವಾರು ವಿಶಿಷ್ಟ ಎಳೆಗಳು ಕೂಡಿದ್ದು, ಅವನ್ನು ಐತಿಹಾಸಿಕ ಆಧಾರಗಳಿಗಿಂತಲೂ ಹೆಚ್ಚು ಸಚಿತ್ರವಾಗಿ, ರೋಚಕವಾಗಿ ಹಾಗೂ ನಿರಂಬಳವಾಗಿ ಪಾಡ್ದನ ಪ್ರಪಂಚವು ನಿರೂಪಿಸುತ್ತದೆನ್ನಬಹುದು.[೧೦]

ಒಂದು ನಾಡಿನ ಇತಿಹಾಸ ರಚನೆಗೆ ಪಾಡ್ದನಗಳೇ ಮುಂತಾದ ಜನಪದ ಸಾಹಿತ್ಯವನ್ನು ಬಳಸಿಕೊಳ್ಳಬೇಕಾದ ಅಗತ್ಯವನ್ನು ಜನಪದ ವಿದ್ವಾಂಸರು ಈ ಕಾರಣಗಳಿಗಾಗಿ ಒತ್ತಿ ಹೇಳಿದ್ದಾರೆ. ಪಾಡ್ದನಗಳು ಆರಾಧನೆ ಹೊಂದುವ ಸಾಂಸ್ಕೃತಿಕ ವೀರರ ಅಸಾಮಾನ್ಯ ಬದುಕಿನ ವಿವರಗಳನ್ನು ಒಳಗೊಂಡಿದೆ. ಕೋಟಿ ಚೆನ್ನಯ, ಕಲ್ಕುಡ ಕಲ್ಲುರ್ಟಿ, ಕೊರ್ದಬ್ಬು, ತನ್ನಿಮಾನಿಗ, ಕೊರಗತನಿಯ, ಗಿಳಿರಾಮ, ಪುರುಷ ಭೂತ, ಆಲಿಭೂತ ಇವುಗಳಿಗೆ ಸಂಬಂಧಿಸಿದಂತೆ ಇರುವ ಪಾಡ್ದನಗಳಲ್ಲಿ ಭೂತಗಳಾಗಿ ರೂಪಾಂತರ ಹೊಂದುವ ಲೌಕಿಕ ವ್ಯಕ್ತಿಗಳ ವಾಸ್ತವ ಬದುಕಿನ ದುರಂತಗಳು ಕಂಡು ಬರುತ್ತದೆ. ಇವುಗಳು ಒಂದು ಗಂಡು ಅಥವಾ ಹೆಣ್ಣಿನ ಆಕಸ್ಮಿಕ ಮರಣದ ಬಳಿಕ ಅವು ಭೂತಗಳ ವರ್ಗಕ್ಕೆ ಸೇರಿದ ಸಂಗತಿಯನ್ನು ಹೇಳುತ್ತವೆ. ಕೆಲಿಂಜ, ಮಾಣಿ, ಅನಂತಾಡಿವ್- ಈ ಸ್ಥಳಗಳಲ್ಲಿ ಉಳ್ಳಾಲ್ತಿ ಭೂತದ ಉತ್ಸವದ ಸಂದರ್ಭದಲ್ಲಿ ದುರಂತ ಸಾವನ್ನು ಹೊಂದಿದ ಹೆಣ್ಣೊಬ್ಬಳ ಕಥಾನಕವನ್ನು ಪಾಡ್ದನದ ರೂಪದಲ್ಲಿ ಹಾಡಲಾಗುತ್ತದೆ.[೧೧] ನಲಿಕೆ, ಪರವ, ಪಂಬದ (ಬೆಳ್ಚಪಾಡ) ಮೊದಲಾದ ವರ್ಗದವರು ಪಾಡ್ದನಗಳನ್ನು ಹೆಚ್ಚಾಗಿ ಹಾಡುವವರು. ಇವು ಹಿಂದಿನಿಂದ ಹರಿದು ಬಂದು

ಉಳಿದಿರುವುದು ಇವರಿಂದಲೇ ಎಂದು ಹೇಳಬಹುದು. ಜಾತಿ ಪದ್ಧತಿಯ ಹಿಡಿತ ಪ್ರಬಲವಾಗಿದ್ದರೂ ಕೆಲವೊಂದು ಸಂದರ್ಭಗಳಲ್ಲಿ ಜಾತಿಯ ಸೀಮೆಯನ್ನು ಮೀರಿದ ಪ್ರಮೇಯಗಳೂ ಇಲ್ಲದಿಲ್ಲ. ಜಾತೀಯತೆಯನ್ನು ಮೀರಿದ ಮಾನವೀಯತೆ ಕೆಲವೊಮ್ಮೆ ಮಿಂಚಿ ತೋರುತ್ತದೆ. ಉದಾಹರಣೆಗೆ, ಅನಾಥವಾದ ಕೊರಗರ ಮಗುವನ್ನು ಮೈರಕ್ಕೆ ಬೈರದಿ ತನ್ನ ಮಗುವಂತೆ ಸಾಕುವುದು. ಕೊರಗ ತನಿಯ, ಕಣ್ಣನ್ನು ಕಟ್ಟಿ ಕಾಡಿಗೆ ಬಿಡಲ್ಪಟ್ಟಿದ್ದ ಬ್ರಾಹ್ಮಣ ಕನ್ಯೆ ದೇಯಿಯನ್ನು ಸಾಯಿನ ಬೈದ್ಯ ಕರುಣೆತೋರಿ ತಂದು ಸಾಕುವುದು. (ಕೊಡದಬ್ಬು) ದೇಯಿಗೆ ಹೆರಿಗೆಯ ನೋವು ವಿಪರೀತವಾದಾಗ ಪೆರ್ಮಾಲೆ ಬಲ್ಲಾಳ ತನ್ನ ಕೈಯ ವಜ್ರದ ಉಂಗುರವನ್ನು ಬ್ರಹ್ಮ ದೇವರಿಗೆ 'ಈಡು' ಇಟ್ಟು ಪ್ರಾರ್ಥಿಸುತ್ತಾನೆ.[೨] ಜನತೆಯ ಮೇಲೆ ಪರಿಣಾಮಕಾರಿಯಾಗುವಂತೆ ಪ್ರಭಾವ ಬೀರಿದ ಸ್ತ್ರೀಯರ ಜೀವನವು ಕೆಲವು ಪಾಡ್ದನಗಳಲ್ಲಿ ನಿರೂಪಿತವಾಗಿದೆ. ನಾಗಸಿರಿ ಕನ್ಯೆಗೆ, ಕರ್ನಗೆ, (ಕರ್ನಕ), ಅಸುರೆತಿ ಬಂಗಾರ್, ಕೊಲ್ಲೂರ ಮುಕಾಂಬಿ ಜೇವು, ಸುಬ್ಬಿಯಮ್ಮ, ಬೊಳ್ಳೊಲ್ಲ ಕಿನ್ಯಾಗೆ, ಬಾಲೆತಂಗಡಿ ಅಥವಾ ಪುತ್ತಕ್ಕ, ಬಾಲೆ ಕಿನ್ಯಾಮು, ಸಿರಿ ಅಕ್ಕೆರಸು ಪೂಂಜೆದಿ, ಓನಮ್ಮ ಜೇವು, ಮಾನಿಗ, ಪರತಿ ಮಂಗಣೆ ಮೊದಲಾದ ಪಾಡ್ದನಗಳಲ್ಲಿ ಲೌಕಿಕ ಹಾಗೂ ಅಲೌಕಿಕ ಅಂಶಗಳಿವೆ. ಇವುಗಳಲ್ಲಿ ಕರ್ನಗೆ, ಕೊಲ್ಲೂರ ಮುಕಾಂಬಿ ಜೇವು, ಬೊಳ್ಳೊಲ್ಲ ಕಿನ್ನಗೆ, ಓನಮ್ಮ ಜೇವು, ಮಾನಿಗ, ಪರತಿ ಮಂಗಣೆ, ಸುಬ್ಬಿಯಮ್ಮ ಮೊದಲಾದ ಪಾಡ್ದನಗಳು ದುರಂತ ಕತೆಗಳನ್ನೊಳಗೊಂಡಿವೆ.[೩]

ಸ್ತ್ರೀ ವಿರೋಧಿ ಸಾಮಾಜಿಕ ಕಟ್ಟಳೆಗಳನ್ನು ಮೀರಿ ಮರುಮದುವೆಯಾಗುವ ಸಿರಿ, ಜಾತಿಕಟ್ಟಳೆ ವಿರೋಧಿಸಿದ ತನ್ನಿಮಾನಿಗ ಪುರುಷನ ಅನ್ಯಾಯಕ್ಕೆ ಸಿಡಿದ ಮಾಯಂದಾಲ್, ಸ್ವಾಭಿಮಾನದ ಸಂರಕ್ಷಣೆಗೆ ಬಂಡಾಯವೆದ್ದ ಕಲ್ಲುರ್ಟಿಯರು ಪರಂಪರೆಯಲ್ಲಿ ಕಾಣುವ ಚಲನಶೀಲ ಸಾಂಸ್ಕೃತಿಕ ಪ್ರಯೋಗಗಳಿಗೆ ಮಾದರಿಗಳಾಗುತ್ತಾರೆ. ಇದನ್ನು ಲಕ್ಷಿಸುವಾಗ ಪಾಡ್ದನದಲ್ಲಿ ತುಳುವರ ಇತಿಹಾಸ ಮತ್ತು ತುಳುವರ ಇತಿಹಾಸದಲ್ಲಿ ಪಾಡ್ದನ ವಿಭಿನ್ನ ನೆಲೆಗಳಲ್ಲಿ ಆಸಕ್ತಿ ಪಡೆಯುತ್ತದೆ.

ಪಾಡ್ದನಗಳಲ್ಲಿ ಸಿರಿಯ ಪಾಡ್ದನವು ಬಂಟ ಸಮಾಜದ ಸಂಸ್ಕೃತಿಯ ಅನೇಕ ಮೂಲ ಬೇರುಗಳನ್ನು ತಿಳಿಸುತ್ತದೆ. ಸಿರಿಯ ಪುರಾಣ ಕಥೆಯು ಕೆಲವು ಸಾಮಾಜಿಕ ಮತ್ತು ನೈತಿಕ ತತ್ವಗಳನ್ನು ಪ್ರಧಾನವಾಗಿ ಆಧರಿಸಿದೆ. ಅದು ಸ್ತ್ರೀ ಮೂಲದ ಬಂಧುತ್ವ ಮತ್ತು ಕುಟುಂಬದಲ್ಲಿ ಸ್ತ್ರೀಯರ ಸ್ಥಾನಮಾನಗಳನ್ನು ನಿರ್ದೇಶಿಸುತ್ತದೆ. ಮಾತೃಮೂಲೀಯ ಕುಟುಂಬ ಪದ್ಧತಿಯನ್ನು ಸಮರ್ಥಿಸಿ ಈ ಪದ್ಧತಿಯ ಅನೇಕ ಲೋಪದೋಷಗಳ ಕಡೆಗೂ ಬೊಟ್ಟು ಮಾಡಿ ತೋರಿಸುತ್ತದೆ. ಮನುಷ್ಯನ ಮೂಲಭೂತ ಮಾನಸಿಕ ವಿಕಾರಗಳಾದ ಕಾಮ, ಸ್ವಾರ್ಥ, ಅತಿಯಾಸೆ, ದೌರ್ಬಲ್ಯ-ಇವುಗಳೆಲ್ಲಾ ಈ ಪಾಡ್ದನದಲ್ಲಿ ಬಹಳ ಶಕ್ತಿಪೂರ್ಣವಾಗಿ, ಕ್ರಿಯಾತ್ಮಕವಾಗಿ ಕಾಣಿಸುತ್ತದೆ. ಹೆಂಗಸರು ತಮ್ಮ ಸಂತಾನವನ್ನು ಪರಿಶುದ್ಧವಾಗಿ ಇಟ್ಟುಕೊಳ್ಳಲು ಮತ್ತು ಮುಂದುವರಿಸಿಕೊಂಡು ಹೋಗಲು ಹೆಣಗಾಡುವುದನ್ನು

ಕಾಣಬಹುದು. ನಿಸ್ಸಾಹತೆ, ಕಟ್ಟುವ್ಯವಸ್ಥೆ ಅಲುಗುವುದು - ಇವುಗಳಿಂದ ಉಂಟಾಗುವ ಕಾತರಗಳು ಸಮಸ್ಯೆಗಳ ರೂಪದಲ್ಲಿ ವ್ಯಕ್ತಿಗಳನ್ನು ಕಾಡುತ್ತದೆ. ಸಿರಿ ಪಾಡ್ದನದ ದುರಂತ ಗುಣಗಳು ಸಾಂಸ್ಕೃತಿಕ ಹಾಗೂ ವೈಯಕ್ತಿಕ ಎಂಬ ಎರಡು ಮೂಲಗಳಲ್ಲಿ ಕಾಣಿಸಿಕೊಳ್ಳುತ್ತದೆ.[೧೪]

ಸಾಂಸಾರಿಕ ಬದುಕಿನಲ್ಲಿ ಹೆಣ್ಣಾದ ತನಗೆ ಸಮಾಜದಿಂದ ಅನ್ಯಾಯ ನಡೆದಾಗ ಹುಟ್ಟಿದ ಮನೆ ಮತ್ತು ಸೇರಿದ ಮನೆ ಎರಡನ್ನೂ ಬಿಟ್ಟು ವಿವಾಹ ವಿಚ್ಛೇದನ ನೀಡಿ ಮರುಮದುವೆಯಾದ ಸಿರಿ 'ಸ್ತ್ರೀ' ಚಿಂತನೆಗೆ ಇಂದು ಪ್ರಧಾನ ಸಂಕೇತವಾಗಿದ್ದಾಳೆ. ತುಳುವರು ತಮ್ಮ ಸಮಾಜದ ಕಟ್ಟುಕಟ್ಟಳೆಗಳನ್ನು ಮರುಚಿಂತನೆಗೆ ಒಡ್ಡಬೇಕೆನ್ನುವ ಆಶಯ, ಸಿರಿಯ ಜೀವನಗಾಥೆಯಲ್ಲಿ ಹೆಜ್ಜೆ ಹೆಜ್ಜೆಗೂ ಅಭಿವ್ಯಕ್ತಗೊಂಡಿದೆ.[೧೫] ತುಳು ಜನಪದ ಪುರಾಣವಾದ ಸಿರಿ ಪಾಡ್ದನವನ್ನು ಪ್ರಧಾನ ಸಂಸ್ಕೃತಿಯ ದೃಷ್ಟಿಗಿಂತ ಬೇರೆಯಾದ ಕೋನದಲ್ಲಿಟ್ಟು ಅರ್ಥೈಸುವಾಗ, ಸಿರಿಯು ಪಿತೃ ಪ್ರಧಾನ ಸಂಸ್ಕೃತಿಯ ಚಿಂತನೆಗಳಾದ ಹೆಣ್ಣಿನ ಪಾತಿವ್ರತ್ಯ, ಮಾತೃತ್ವ, ಪುರುಷ ಪ್ರಭುತ್ವಗಳ ಪರಿಕಲ್ಪನೆಯನ್ನು ಒಡೆಯುತ್ತಲೇ ಮಾತೃವಂಶೀಯ ಮೌಲ್ಯವನ್ನು ನೆಲೆಗೊಳಿಸುತ್ತಾಳೆ. ಇಂಥ ಒಡೆಯುವಿಕೆಯಲ್ಲಿಯೇ ಸಿರಿಯ ಜೀವನವನ್ನು ಅರ್ಥೈಸಬೇಕಾಗಿದೆ. ತುಳುವರ ವಿಶಿಷ್ಟ ಜೀವನ ಕ್ರಮ ಹಾಗೂ ಲೋಕದೃಷ್ಟಿಯ ಸೂಚಕಗಳಾದ ಪಾಡ್ದನಗಳು ಹೆಣ್ಣೊಬ್ಬಳ ಆತ್ಮಗೌರವ, ಧೈರ್ಯ, ಸ್ವಾಭಿಮಾನ ಸ್ತ್ರೀತ್ವದ ಇತ್ಯಾತ್ಮಕ ಅಂಶವಾಗಿ ಇಲ್ಲಿ ಕಾಣಲಾಗಿದೆ. ಹೀಗಾಗಿ ಆತ್ಮಗೌರವಕ್ಕೆ ಧಕ್ಕೆ ಬಂದಾಗ ಹೆಣ್ಣಿನ ನೈತಿಕ ಗುಣ ಧರ್ಮವೆಂದು ಪರಿಭಾವಿಸುವ ಪತಿಭಕ್ತಿ, ವಿಧೇಯತೆ, ಪಾತಿವ್ರತ್ಯಗಳನ್ನು ಮೀರಿ ನಡೆದುಕೊಳ್ಳುವಲ್ಲಿ ಸ್ಥಾಪಿತ ನಿಶ್ಚಿತಗಳನ್ನು ಪಲ್ಲಟಗೊಳಿಸುತ್ತಾರೆ. ಪುರುಷ ವ್ಯವಸ್ಥೆಯನ್ನು ಪ್ರಶ್ನಿಸುವ, ಪ್ರತಿಭಟಿಸುವ, ಹೋರಾಡುವ ಮಾನಿಕ, ಕಲ್ಲುರ್ಟಿ, ನಾಗಸಿರಿ, ಬಾಲೆಬಾನಿಯಂತಹ ಸ್ತ್ರೀ ಮಾದರಿಗಳು ಇಲ್ಲಿ ವಿಕೃತ ಪಾತ್ರಗಳಾಗುವುದಿಲ್ಲ. ಹೀಗಾಗಿಯೇ ಇಲ್ಲಿಯ ಹೆಣ್ಣುಗಳು ಪುರುಷನ ಪ್ರಭುತ್ವವನ್ನು ಮುರಿದು, ಅನ್ಯಾಯದ ವಿರುದ್ಧ ಹೋರಾಡಿ ಜಯ ಪಡೆಯುವ ಶಕ್ತಿಯಾಗುತ್ತಾರೆ.[೧೬]

ಸಿರಿ ಪಾಡ್ದನವು ಮಾತೃಮೂಲೀಯ ಬಂಧುತ್ವ ವ್ಯವಸ್ಥೆಯ ಬೇರೆ ಬೇರೆ ಹೆಂಗಸರ ಸಮಸ್ಯೆಗಳನ್ನು ಒಟ್ಟು ಗೂಡಿಸಿ ಸಂಘಟಿಸಿ ಕೊಟ್ಟಿರುವುದು ಅದರ ವೈಶಿಷ್ಟ್ಯ. ವಿಷಯಲಂಪಟನಾದ ಗಂಡ ಕಾಂತುಪೂಂಜ, ಸತ್ಯನಾಪುರದ ಅರಮನೆಯಲ್ಲಿ ಕೆಲಸದ ಮೇಲ್ವಿಚಾರಕನಾಗಿದ್ದು ಸಿರಿಗೆ ಸಿಕ್ಕುವ ಅರಮನೆಯಲ್ಲಿ ಗಡಿ (ಪಾಲು) ಕೊಡಬೇಕೆಂದು ಕೇಳುವ ಶಂಕರ ಆಳ್ವ, ಲಂಚದ ಬಲದಿಂದ ಸಿರಿಗೆ ವಿರುದ್ಧವಾಗಿ ಶಂಕರಾಳ್ವನ ಪರವಾಗಿ ಪಾಲಿನ ತೀರ್ಮಾನ ಕೊಡುವ ಪತ್ತೇರ್-ಕೂಟ (ಪಂಚಾಯಿತಿ ಕೂಟ), ಕಡಲಿನಲ್ಲಿ ಸಿರಿಯನ್ನು ದೋಣಿಯ ಮೂಲಕ ದಾಟಿಸಲು ದೋಣಿ ಬಿಡದ ಕಡವಿನವನು, ಅದಕ್ಕೆ ಕಾರಣಕರ್ತನಾದ ಅವಳ ಗಂಡ ಕಾಂತುಪೂಂಜ, ಕೊಡ್ಸರಾಳ್ವನನ್ನು ಎರಡನೆಯ ಮದುವೆಯಾದ ಸಂದರ್ಭದಲ್ಲಿ ಸಿರಿಯ ಮೇಲೆ ಮತ್ಸರ ತಾಳುವ ಸೋಮಾಳ್ವದಿ, ಈ ರೀತಿ ಅನೇಕರ

ಮೂಲಕ ಕಷ್ಟಗಳನ್ನು ಅನುಭವಿಸುತ್ತಾಳೆ. ಗಂಡನ ಸ್ವಭಾವದಿಂದ ರೋಸಿಹೋದ ಅಕ್ಕಸಿರಿಯು ಗಂಡನಾದ ಕಾಂತುಪೂಂಜನಿಗೆ ಬರವನ್ನು (ವಿವಾಹ ವಿಚ್ಛೇದನ) ಕೊಟ್ಟು ಕೊಡ್ಸರಾಳ್ವನೊಂದಿಗೆ ಎರಡನೆಯ ಮದುವೆಯಾಗುತ್ತಾಳೆ. ಇವುಗಳಲ್ಲಿ ಹೆಣ್ಣೇ ಗಂಡನಿಂದ ವಿಚ್ಛೇದನವನ್ನು ಪಡೆಯುವುದು ಮತ್ತು ಹೆಣ್ಣಿಗೆ ಎರಡನೇ ಮದುವೆಯಾಗುವುದು - ಇವು ಬಹಳ ಮುಖ್ಯವಾಗಿ ಎರಡು ಸಾಮಾಜಿಕ ಪದ್ಧತಿಗಳನ್ನು ಬಿಂಬಿಸುತ್ತದೆ.[೧೭] ಸಿರಿ ಕಥಾನಕವು ಸ್ತ್ರೀಯ ಸ್ವಾಭಿಮಾನ ಚರಿತ್ರೆಯ ಚಲನಶೀಲತೆಯೇ ಆಗಿದೆ. ಆದರೆ ಸಿರಿಯು ಮರುಮದುವೆಯಾಗಿರುವುದು ಪುರುಷಪ್ರಧಾನ ಸಂಸ್ಕೃತಿಯ ಬಹುಪತ್ನಿತ್ವಕ್ಕೆ ತಾತ್ವಿಕ ಸಮರ್ಥನೆ ನೀಡುವಂತಿದೆ.[೧೮] ಸಿರಿ ಪಾಡ್ದನದಲ್ಲಿ ಸಿರಿಯ ಕೌಟುಂಬಿಕ, ಸಾಮಾಜಿಕ ಸಂದರ್ಭ, ವಿಚ್ಛೇದನ, ಮರುಮದುವೆ, ಉತ್ತರಾಧಿಕಾರತ್ವ, ಸ್ತ್ರೀತ್ವ ಮತ್ತು ಪರಿಶುದ್ಧತೆಯ ಪರಿಕಲ್ಪನೆಗಳು, ಗಂಡಿನ ಮೋಸ, ಅನ್ಯಾಯ, ಪುರುಷ ಪ್ರಭುತ್ವದ ಹೇರಿಕೆಯ ಪ್ರಯತ್ನಗಳು, ಅದರ ವಿರುದ್ಧ ಹೆಣ್ಣಿನ ಹೋರಾಟ ಮತ್ತು ವಿಜಯಗಳು ದಾಖಲಾಗಿದೆ. ಇದರಿಂದಾಗಿ ಬಂಟ ಸಮುದಾಯದ ಮೂಲಹೆಣ್ಣೆಂದು ಗ್ರಹೀತಳಾದ ಸಿರಿಯೊಂದಿಗೆ ತುಳುನಾಡಿನ ಎಲ್ಲ ಮಾತೃರೂಪಿ ಕುಟುಂಬದ ಹೆಣ್ಣುಗಳು ತಮ್ಮ ಸಂಬಂಧವನ್ನು ಕಂಡುಕೊಳ್ಳುತ್ತಾರೆ. ಸಿರಿ (ಪಾಡ್ದನ) ಪುರಾಣದೊಂದಿಗೆ ಗಾಢವಾದ ಸಂಬಂಧವಿರುವ ತುಳುವ ಮಹಿಳೆಯರಿಗೆ ಸಿರಿಯ ಬದುಕು ಮತ್ತು ಹೋರಾಟಗಳು ಆದರ್ಶ ಮಾದರಿಯಾಗಿ ಇರುವುದರಲ್ಲಿ ಸಿರಿಪಾಡ್ದನವು ಸಿರಿಜಾತ್ರೆಗೊಂದು ಸಂಹಿತೆಯಾಗಿ ಕಾರ್ಯನಿರ್ವಹಿಸುತ್ತದೆ.[೧೯]

'ಕೋಟಿ -ಚೆನ್ನಯ' ಪಾಡ್ದನವು ಜನಪದ ಸಾಹಿತ್ಯದ ದೃಷ್ಟಿಯಿಂದ ಅತ್ಯಂತ ಶ್ರೇಷ್ಠವಾದುದು. ಉಳಿದೆಲ್ಲ ಪಾಡ್ದನಗಳಿಗಿಂತ ಸುಧೀರ್ಘವಾದುದು. ಇದು ಜೀವನದ ಸ್ವಾಭಾವಿಕತೆಯನ್ನು, ಮಾನವೀಯ ಸಹಜ ಗುಣಗಳನ್ನು, ಜನರ ಸಂಸ್ಕೃತಿಯ ಹಿನ್ನೆಲೆಯಲ್ಲಿರುವ ನಂಬಿಕೆಯನ್ನು ಬಿಟ್ಟು ಹೋಗುವುದಿಲ್ಲ. ಕೋಟಿ ಚೆನ್ನಯ್ಯರ ಸ್ವಾಭಿಮಾನದಂತೆ ದೇಯಿಯಲ್ಲಿಯೂ ಆತ್ಮಾಭಿಮಾನವಿತ್ತು ಎನ್ನುವುದನ್ನು ಪಾಡ್ದನವು ಚಿತ್ರಿಸುವುವಲ್ಲಿರುವ ಸೂಕ್ಷ್ಮತೆಯನ್ನು ಗಮನಿಸಬೇಕಾಗಿದೆ.

'ಕಲ್ಕುಡ-ಕಲ್ಲುರ್ಟಿ' ಪಾಡ್ದನವು ಲೌಕಿಕದಿಂದ ಅಲೌಕಿಕದೆಡೆ ಹರಿಯುವ ಕತೆಯನ್ನು ಒಳಗೊಂಡಿದೆ. ಮಾಯದ ಅಣ್ಣ ತಂಗಿಯರು ಕಾರ್ಕಳಪೇಟೆಯನ್ನು ಸುಡುವುದು, ಅರಸನ ಹೆಂಡತಿಯನ್ನು ನಡುರಾತ್ರಿ ಎತ್ತಿಕೊಂಡು ಹೋಗುವುದು, ನದಿಯಲ್ಲಿ ಬರುತ್ತಿದ್ದ ವೈಲಾಯರಿಗೆ ಸಾಮಾನ್ಯ ಮನುಷ್ಯನ ರೂಪದಲ್ಲಿ ಕಾಣಿಸುವುದು ಮೊದಲಾದ ಘಟನೆಗಳು ಈ ಭೂತಗಳ ಮಹಿಮೆಯನ್ನು ವಿವರಿಸುವ ಅಮಾನುಷ ಚಿತ್ರಣಗಳು.[೨೦] ಕಲ್ಲುರ್ಟಿ ಎಂಬ ಹೆಣ್ಣು ಮಗಳ ಪ್ರತಿಭಟನೆ ಹೆಣ್ಣಿಗೆ ನಡೆದ ಅನ್ಯಾಯಕ್ಕಲ್ಲ. ಗಂಡಿಗೆ ನಡೆದ ಅನ್ಯಾಯಕ್ಕಾಗಿ, ಹೆಣ್ಣು ಸಾಮಾಜಿಕ ಸಮಸಂಸ್ಕೃತಿಯ ಪರಿವರ್ತನೆಯನ್ನು ಬಯಸುವುದು ಹೆಣ್ಣಿನ ಮುಂದಾಳತ್ವದಲ್ಲೇ ಜಾತಿಗಳಿಲ್ಲದ ಕೂಡುಕಟ್ಟುಗಳಿದ್ದ ವರ್ಗರಹಿತ ಸಮಾಜದ ಹೆಣ್ಣಾಗಿ, ಮುಂದೆ ಶೋಷಣೆಯನ್ನು ಕಂಡಾಗ, ಎಚ್ಚರಿಕೆಯ ಕಿಡಿಯಾಗಿ

ಕಲ್ಲುರ್ಟಿ ತನ್ನ ಪ್ರಾಚೀನತೆಯನ್ನು ಪ್ರತಿಷ್ಠಾಪಿಸುತ್ತಾಳೆ.[೨೧] ಶ್ರಮಜೀವಿಗಳ ಪರವಾಗಿರುವ ಕಲ್ಲುರ್ಟಿಯ ಪ್ರಸರಣದ ಕಲೆ ಕಾರಣಿಕದ ಕತೆಗಳಲ್ಲಿ ಆಕೆಯನ್ನು ಸಂಸ್ಕೃತೀಕರಣಗೊಳಿಸುವ, ಸಂಸ್ಕೃತಿಗೆ ಬಗ್ಗಿಸುವ ಪ್ರಯತ್ನವೇನೋ ನಡೆದಿದೆ. ಆದರೆ, ಕಲ್ಲುರ್ಟಿಯ ಬದುಕು ಮತ್ತು ಸಾವಿನ ನಂತರವೂ ಆಕೆ ಸತ್ಯ ಮತ್ತು ನ್ಯಾಯದ ಪರವಾಗಿ ಇರುವುದು ಬದಲಾಗಿಲ್ಲ. ಪ್ರಾಚೀನತೆ ಇದ್ದರೂ, ಜುಮಾದಿ, ಕೊಡಣಿತ್ತಾಯ, ಉಳ್ಳಾಲ್ತಿ, ಜಾರಂದಾಯ ಮೊದಲಾದ ರಾಜನ್ ದೈವಗಳ ಪಟ್ಟ ಆಕೆಗೆ ಅಷ್ಟಾಗಿ ದೊರೆತಿಲ್ಲ. ಹಾಗಿದ್ದೂ ಎಲ್ಲಾ ಆದಿವಾಸಿ ತುಳು ಜನಾಂಗಗಳಲ್ಲಿ ಆಕೆ ಕುಟುಂಬದ ಭೂತವಾಗಿ ಆರಾಧಿಸಲ್ಪಡುತ್ತಾಳೆ. ಆಕೆಯ ಬಂಡಾಯ ಕೇವಲ ಸ್ವಾಭಿಮಾನಕ್ಕಲ್ಲ. ಪುರುಷ ಸ್ವಾಭಿಮಾನದ ರಕ್ಷಣೆಯಲ್ಲಿ ಸ್ತ್ರೀಯರು ಮಹತ್ವದ ಪಾತ್ರವನ್ನು ವಹಿಸಬೇಕು ಎಂಬಂತಿದೆ.[೨೨]

ತನ್ನಿಮಾನಿಗನ ಕತೆಯ ವಸ್ತು ಮತ್ತು ಆಶಯಗಳು ಮೌಖಿಕ ಪರಂಪರೆಯಲ್ಲಿ ಹಲವು ತಿರುವುಗಳನ್ನು ತೋರಿಸುತ್ತದೆ. ತನ್ನಿಮಾನಿಗಳಿಗೆ ಪ್ರಾಚೀನ ಹರವು ಇದ್ದು ಆಕೆ ಲೆಕ್ಕೆಸಿರಿ, ರಕ್ತೇಶ್ವರಿಯಾಗಿ ರೂಪಧಾರಣೆ ಮಾಡಿದರೂ ಕೂಡಾ ತನ್ನಿಮಾನಿಗ ಎನ್ನುವಾಗ ಮಡಿವಂತಿಕೆ ಪ್ರಶ್ನೆ ಎದುರಾಗುತ್ತದೆ. ಇದು ತುಳು ನಿವಾಸಿಗಳಲ್ಲಿ ಕಾಲಾಂತರದಲ್ಲಿ ಬೆಳೆದ ಜಾತೀಯ ಕಂದಕಗಳಿಗೆ ಸಾಕ್ಷಿಯಾಗಿದೆ. ತನ್ನಿಮಾನಿಗ ಕುಟುಂಬವನ್ನು, ಸಮಾಜವನ್ನು ತಿದ್ದುವ ಸಮಾಜ ಶಿಕ್ಷಕಿಯಾಗಿ ಅವಳ ಸಹಜ ಚಿತ್ರಣ ಇಂದಿಗೂ ತುಳುವರ ಮೌಖಿಕ ಪರಂಪರೆಯಲ್ಲಿ ಉಳಿದುಕೊಂಡಿದೆ. 'ಕೋಟಿ-ಚೆನ್ನಯ' ಪಾಡ್ದನವು ಜನಪದ ಸಾಹಿತ್ಯದ ದೃಷ್ಟಿಯಿಂದ ಅತ್ಯಂತ ಶ್ರೇಷ್ಠವಾದುದು ಮತ್ತು ಉಳಿದೆಲ್ಲ ಪಾಡ್ದನಗಳಿಗಿಂತ ಸುದೀರ್ಘವಾದುದು.[೨೩]

ತುಳುವಿನಲ್ಲಿ ಲಿಖಿತ ಸಾಹಿತ್ಯ ಅಲ್ಪ ಪ್ರಮಾಣದಾಗಿದ್ದರೂ ಜನಪದ ಸಾಹಿತ್ಯಕ್ಕೆ ಯಾವುದೇ ಕೊರತೆಗಳಿಲ್ಲ. ಸಂಧಿ ಪಾಡ್ದನಗಳು, ಕಬಿತೆಗಳು, ಒಗಟುಗಳು, ಗಾದೆಗಳು ಬ್ರಹ್ಮವಾದಿನಿಯರೆಂದೂ ಆಗರ್ಭವಾಗಿದ್ದು ತುಳು ಜನಪದ ಸಾಹಿತ್ಯ ತುಂಬಿದ ಭಂಡಾರವಾಗಿದೆ. ತ್ಯಾಗದ ಮನಮಿಡಿಯುವ ಚಿತ್ರಣವಿದೆ. ಅತಿಮಾನುಷ ಶಕ್ತಿಯ ಬಗ್ಗೆ ಅಪಾರ ನಂಬಿಕೆ ಇರುವ ಈ ಸಾಹಿತಿಗಳು ಲೋಕದ ವ್ಯವಹಾರಗಳೆಲ್ಲವೂ ದೈವ ದೇವರುಗಳ ಕೈವಾಡದಿಂದಲೇ ನಡೆಯುತ್ತದೆ ಎಂಬ ದೃಢ ನಂಬಿಕೆಯನ್ನು ಒತ್ತಿ ತೋರಿಸಲು ಪ್ರತಿಯೊಂದು ಕತೆಯನ್ನೂ ಅತಿಮಾನುಷ ಶಕ್ತಿಗಳ ಕಾರಣಿಕ ಸಂಗತಿಗಳಿಂದಲೇ ಅಂತ್ಯಗೊಳಿಸಿದ್ದಾರೆ. ಪಾಡ್ದನಗಳಲ್ಲಿ ವೀರರ ಧೀರೋದ್ಧಾತ ಗುಣಗಾನವಿದೆ. ವೀರ ವನಿತೆಯರ ಶೌರ್ಯದ ವರ್ಣನೆ ಇದೆ. ತ್ಯಾಗಿಗಳ ತ್ಯಾಗಮನ ಮಿಡಿಯುವ ಚಿತ್ರಣವಿದೆ.[೨೪] 'ಕೊರಗ ತನಿಯ' ಪಾಡ್ದನವು ಮಾನವೀಯ ಮೌಲ್ಯಗಳನ್ನು ಸಹಜ ಚಿತ್ರಣದಿಂದ ಸೂಚಿಸುತ್ತದೆ. ಬೈದ್ಯೆತಿಯ ಮಾತೃ ಹೃದಯ ಉತ್ಕೃಷ್ಟವಾದುದು.

ಈ ಪಾಡ್ದನದಲ್ಲಿ ಕೊರಪಳು ಮೈರೆ ಪುರವನ ಹೆಂಡತಿಯಾಗಿ ಬರುತ್ತಾಳೆ. ಅವಳ ಮಗ ಕೊರಗ ತನಿಯ ತನ್ನ ತಾಯಿ ಮರಣಿಸಿದಾಗ ಅನಾಥನಾಗುತ್ತಾನೆ. ಊರಿಗೆ ಮಾರಿ ಬಂದು ತಂದೆಯ ಜೊತೆಗೆ ಅವನನ್ನು ಪ್ರೀತಿಯಿಂದ ನೋಡಿಕೊಂಡಿದ್ದ ಊರಿನ ಜನರೆಲ್ಲ ಸತ್ತಾಗ ಕೊರಗತನಿಯ ಒಬ್ಬನೇ ಉಳಿಯುತ್ತಾನೆ. ಕಷ್ಟದಲ್ಲಿರುವಾಗ ಬೈರಕ್ಕೆ ಬೈದೆದಿಯ ಕಣ್ಣಿಗೆ ಕಂಡ ಹೊಟ್ಟೆಗೆ ಗತಿಯಿಲ್ಲದ ಹುಡುಗನನ್ನು ತನ್ನ ಇಬ್ಬರು ಮಕ್ಕಳ ಜೊತೆ ಸಾಕುವ ಜವಾಬ್ದಾರಿ ಹೊತ್ತು ತನ್ನೂರಿಗೆ ಕರೆದೊಯ್ಯುತ್ತಾಳೆ. ಇಲ್ಲಿ ಆಕೆ ಮಗುವಿನ ಕೆಳಜಾತಿಯ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ. ಕೊರಗ ತನಿಯ ದೈವಗಳ ಶಾಪದಿಂದ ಮಾಯವಾದಾಗ ಬೈರಕ್ಕೆ ಬೈರದಿಯ ಅಳಲು ಮಾತೃತ್ವದ ಮುಖ್ಯ ಭಾವವನ್ನಾಗಿ ನಿರೂಪಿಸಿದ್ದು ಕಂಡು ಬರುತ್ತದೆ. ಪಾಡ್ದನದ ಹೆಣ್ಣುಗಳು ತುಂಬು ಹೃದಯದ ಉದಾರವಂತರು ಎನ್ನುವುದು ಇಲ್ಲಿ ರೂಪಿತವಾಗಿದೆ.[೨೫]

'ಬೀರು ಕಲ್ಕುಡ' ಪಾಡ್ದನದಲ್ಲಿ ಬರುವ ಕಾಳಮ್ಮನೆನ್ನುವ ತಂಗಿಯ ಪಾತ್ರ ಪ್ರಮುಖವಾದುದು. ಅಣ್ಣನನ್ನು  ಹುಡುಕಿಕೊಂಡು ಬಂದ ತಂಗಿ, ಅವನು ಕೆತ್ತಿದ ಗುಮ್ಮಟಗಳನ್ನು ನೋಡಿ ಸಂತಸಪಟ್ಟರೂ, ಅಣ್ಣನ ಕೈಕತ್ತರಿಸಿದ ಕಾರ್ಕಳದ ಅರಸನ ಮೇಲಿನ ಸಿಟ್ಟುಗೊಳ್ಳುತ್ತಾಳೆ. ಅಣ್ಣನೊಡನೆ ಮಾಯವಾಗಿ ಅರಸನ ಅರಮನೆಯನ್ನು ಸುಟ್ಟು ಸೇಡು ತೀರಿಸಿಕೊಳ್ಳುವ ಪಾತ್ರ ಮಹತ್ವವಾಗಿದೆ. ಮಾತೃಪ್ರಧಾನ ಸಂಸ್ಕೃತಿಯನ್ನು ಆಚರಿಸುತ್ತಿದ್ದ ತುಳುನಾಡಿನ ಹೆಣ್ಣುಮಕ್ಕಳು ಒಡಹುಟ್ಟಿದವರಿಗಾದ ಅಪಮಾನವನ್ನು ಎಂದೂ ಸಹಿಸರು ಎನ್ನುವುದು ಈ ಪಾಡ್ದನದಲ್ಲಿ ನಿರೂಪಿತವಾಗಿದೆ.

'ಹೊನ್ನಮ್ಮ ಜೇವು' ಪಾಡ್ದನವು ಹೆಣ್ಣಿನ ಅಸಹಾಯಕತೆಯನ್ನು ವಿವರಿಸುತ್ತದೆ. ಶೀಲಕೆಟ್ಟ ಹೆಂಗಸು ಯಾರದೇ ತಪ್ಪಿನಿಂದಾದರೂ ಬದುಕಲು ಯೋಗ್ಯಳಲ್ಲ ಎಂಬುವುದು ಪಾಡ್ದನಗಳು ಹಾಡಿರುವ ಸತ್ಯವಾಗಿದೆ. ಕಾಮುಕ ಸ್ತ್ರೀಲೋಲರಿಂದ ಅಮಾಯಕ ಹೆಣ್ಣು ಮಕ್ಕಳು ಬಲಿಯಾಗುತ್ತಿದ್ದರೆಂದು ತಿಳಿಸುವ ಮೂಲಕ ಪಾಡ್ದನಗಳು ಅಂದಿನ ಸಾಮಾಜಿಕ ಪರಿಸ್ಥಿತಿಯ ಕುರಿತು ಬೆಳಕು ಚೆಲ್ಲುತ್ತದೆ. 'ಕೊಲ್ಲೂರ ಮೂಕಾಂಬಿ' ಎಂಬ ಪಾಡ್ದನವು ಅಸಹಾಯಕ ಹೆಣ್ಣಿನ ಮೇಲೆ ನಡೆದ ಬಲತ್ಕಾರದ ಕತೆಯನ್ನು ತಿಳಿಸುತ್ತದೆ. ದಾಂಪತ್ಯ ಜೀವನದ ಸಮಸ್ಯೆಯನ್ನೊಳಗೊಂಡ ದುರಂತ ಕತೆಯನ್ನು ನಿರೂಪಿಸುತ್ತದೆ. ಪತಿವ್ರತೆಯಾದ ಜೇವು ತನ್ನ ಗಂಡನ ಬಡತನ ನೀಗಿಸಲು ದಕ್ಷಿಣ ರಾಜ್ಯಕ್ಕೆ ಹೋಗುವನೆಂದು ಹೇಳಿದಾಗ, ತಾನೂ ಬರುವೆನೆಂದು ಹಟ ಮಾಡುತ್ತಾಳೆ. ತವರು ಮನೆಯಲ್ಲಿ ಬಿಟ್ಟು ಬರುವೆನೆಂದು ಸಮಧಾನಿಸಿದಾಗ, 'ಮದುವೆಯಾಗುವ ಮೊದಲು ತಂದೆ ತಾಯಿಯ ಮನೆಯಲ್ಲಿ ಹಾಲನ್ನ ಆಗಬಹುದು ಆದರೆ ಮದುವೆಯಾದ ಬಳಿಕ ಗಂಡನ ಮನೆಯ ಕಣ್ಣ ನೀರಿನ ಅನ್ನವಾದರೂ ಆಗಬಹುದು'ಎಂದೆನ್ನುತ್ತಾಳೆ. ವಿವಾಹವಾದ ಹೆಣ್ಣುಮಕ್ಕಳ ಮನೋಧರ್ಮ ಮತ್ತು ಅನುಭವಗಳನ್ನು

ಈ ಮಾತು ಪ್ರತಿನಿಧಿಸುತ್ತದೆ.[೨೬] ಮುಕಾಂಬಿಕೆಯ ಶೀಲ ಅಪಹರಣ ಮಾಡಿದಾಗ ಪ್ರಾಣ ಕಳೆದುಕೊಂಡ ಆಕೆಯ ಬದುಕು ಹೆಣ್ಣಿನ ಶೀಲದ ಪಾವಿತ್ರತೆಯನ್ನು ಬಿಂಬಿಸುತ್ತದೆ. ಗುಳಿಗ ಭೂತಕ್ಕೆ ಸಂಬಂಧಿಸಿದ ಪಾಡ್ದನವಾದ 'ಸುಬ್ಬಿಯಮ್ಮ' ಒರ್ವ ಸ್ತ್ರೀಯ ದುರಂತ ಜೀವನವನ್ನು ಚಿತ್ರಿಸುವ ಸಣ್ಣ ಕಥನ ಕವನವಾಗಿದೆ. ಅಲೌಕಿಕ ಘಟನೆಯೊಂದಿಗೆ ಅಂತ್ಯಗೊಳ್ಳುವ ಪಾಡ್ದನ ಒಬ್ಬ ಹೆಣ್ಣಿನ ಜೀವನ ದುರಂತಕ್ಕೀಡಾದ ಬಗೆಯನ್ನು ತಿಳಿಸುತ್ತದೆ. 'ಬೊಳ್ಳುಳ್ಳಿ ಕಿನ್ಯಗೆ' ಪಾಡ್ದನ ಹೆಣ್ಣಿನ ಮದುವೆಯಿಂದಾಗುವ ದುರಂತವನ್ನು ಸೂಚ್ಯವಾಗಿ ವಿವರಿಸುತ್ತದೆ.[೨೭] ಮದನಗ ಪಾಡ್ದನವು ಅತ್ಯಾಚಾರಕ್ಕೊಳಗಾದ ಹೆಣ್ಣಿನ ಕಥೆಯಾಗಿದೆ. ಈ ಪಾಡ್ದನದಲ್ಲಿ ಹೆಣ್ಣು ಅತ್ಯಾಚಾರಕ್ಕೆ ಒಳಗಾಗಿದ್ದರೂ ದೈವವು ಅವಳನ್ನು ತಪ್ಪಿತಸ್ಥೆಯನ್ನಾಗಿ ನೋಡುವ ರೀತಿ ಹಾಗೂ ಹೆಣ್ಣನ್ನು ಪರೀಕ್ಷಿಸುವ ಸಲುವಾಗಿ ಆಕೆಯನ್ನು ಶಿಕ್ಷೆಗೆ ಒಳಪಡಿಸುವ ನಿಯಮ ಪಾಡ್ದನಗಳಲ್ಲಿ ಬಹಳವಾಗಿ ಕಂಡುಬರುತ್ತದೆ. ಕೋಟೆಯ ಬಬ್ಬುಬರಗ ಪಾಡ್ದನದಲ್ಲಿ ಹೆಣ್ಣಿನ ಪಾವಿತ್ರತೆಯನ್ನು ಕಚ್ಚೂರ ಮಾಲೆದಿಯ ಪಾತ್ರದ ಮೂಲಕ ತೋರಿಸಲಾಗಿದೆ. ಪವಿತ್ರ ಹೆಣ್ಣನ್ನು ಬೆಂಕಿಯೂ ಸುಡಲಾರದು ಎನ್ನುವ ನಂಬುಗೆಯನ್ನು ಇಲ್ಲಿ ಎತ್ತಿ ಹಿಡಿಯಲಾಗಿದೆ.

'ಒಳಜೇಯಿ ಮಾಣಿಗ'ಪಾಡ್ದನವು ಒಂದು ಹೆಣ್ಣಿನ ಕತೆಯಾಗಿದ್ದು, ಸ್ವಾಭಿಮಾನದ ಸ್ವಭಾವದಿಂದ ಆಕೆ ತನ್ನ ಪತಿಯ ನಿಲುವನ್ನು ಪ್ರತಿಭಟಿಸುತ್ತಾಳೆ. ಪಾಡ್ದನಗಳಲ್ಲಿ ಬರುವ ಹೆಣ್ಣು ಮಕ್ಕಳು ಸ್ವಾಭಿಮಾನಿಗಳಾಗಿದ್ದು ಅವಮಾನವನ್ನು ತಡೆಯಲಾರದೆ ಶೀಲಕ್ಕಾಗಿ ಪ್ರಾಣ ತೆರಬಲ್ಲವರಾಗಿರುವರು. ತಾವು ಮಾಡದ ತಪ್ಪಿಗಾಗಿ ಬೆಂಕಿಗೆ ಹಾರಲೂ ಸಿದ್ಧರಿದ್ದು, ತನಗಾಗಲೀ, ತನ್ನ ಒಡಹುಟ್ಟಿದವರಿಗಾಗಲೀ ಆದ ಅನ್ಯಾಯವನ್ನು ಕೆಚ್ಚೆದೆಯಿಂದ ಪ್ರತಿಭಟಿಸುವುದು ಕಂಡುಬರುತ್ತದೆ. ಹೀಗೆ ಪಾಡ್ದನಗಳು ಹೆಣ್ಣಿನ ಜೀವನದ ಪರಿಪೂರ್ಣ ಚಿತ್ರಣವನ್ನುನೀಡುತ್ತದೆ.[೨೮]

## ೨.೨ ಕರಾವಳಿಯ ಪ್ರಮುಖ ರಾಜ ಮನೆತನಗಳ ಸ್ತ್ರೀಯರು

ಕರ್ನಾಟಕದ ಇತರ ಜಿಲ್ಲೆಗಳಂತೆ ದಕ್ಷಿಣ ಕನ್ನಡವೂ ಕೂಡ ತನ್ನದೇ ಆದ ವೈಶಿಷ್ಟ್ಯಗಳನ್ನು ಮೈಗೂಡಿಸಿಕೊಂಡಿದೆ. ಇಲ್ಲಿನ ರಾಜಕೀಯ ಇತಿಹಾಸಕ್ಕೆ ಸಂಬಂಧಿಸಿದಂತೆ ಹಿಂದೆ 'ತುಳುನಾಡು' ಎಂದು ಕರೆಯಲ್ಪಡುತ್ತಿದ್ದ ಈ ಜಿಲ್ಲೆಯನ್ನು ಕ್ರಿ.ಶ. ೫ನೆಯ ಶತಮಾನದ ಮಧ್ಯ ಭಾಗದಲ್ಲಿ ಕದಂಬರ ಕುಲದ ಅರಸರು ಆಳುತ್ತಿದ್ದರೆಂದು ಹಲ್ಮಿಡಿ ಶಾಸನದ ಉಲ್ಲೇಖಗಳಿಂದ ತಿಳಿದು ಬರುತ್ತದೆ.[೨೯] ಉತ್ತರ ಕರ್ನಾಟಕದಲ್ಲಿ ಸೇನಾವರ ಸಾವಿಯಬ್ಬೆ, ಚಾಲುಕ್ಯ ಅಕ್ಕದೇವಿ, ಹೊಯ್ಸಳ ಬಮ್ಮಲಾದೇವಿ, ಉಮಾದೇವಿ, ಚೋಳ ಮಹಾದೇವಿಯರಂತೆ, ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ಬೆರಳೆಣಿಕೆಯ ರಾಣಿಯರು ವೀರತ್ವ ಧರ್ಮ ಸಂಸ್ಕೃತಿಯನ್ನು ಉತ್ತುಂಗಕ್ಕೇರಿಸಿದರು.[೩೦]

ದಕ್ಷಿಣ ಕನ್ನಡ ಜಿಲ್ಲೆಯನ್ನು ಆಳಿದ ತುಂಡರಸರಲ್ಲಿ ಪುತ್ತಿಗೆಯ ಚೌಟರು, ಬಂಗವಾಡಿಯ ಬಂಗರು, ಸಾವಂತರು, ಹೊನ್ನೆಯ ಕಂಬಳಿಯವರು, ವೇಣೂರಿನ ಅಜಿಲರು, ಕಾರ್ಕಳದ ಬೈರರಸರು, ಪ್ರಬಲರಾಗಿದ್ದರೆಂಬ ವಿಚಾರ ಶಾಸನೋಲ್ಲೇಖಗಳಿಂದ ತಿಳಿದುಬರುತ್ತದೆ.[೩೧] ತುಳುನಾಡಿನಲ್ಲಿ ಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿ ಲಭ್ಯವಿದ್ದರೂ ಅವು ಸಾಮಾಜಿಕ ಚಟುವಟಿಕೆಗಳ ಬಗ್ಗೆ ಬೆಳಕನ್ನು ಚೆಲ್ಲುವುದಿಲ್ಲ. ಹೆಚ್ಚಿನ ಶಾಸನಗಳು ದಾನಶಾಸನಗಳಾಗಿವೆ ಹಾಗೂ ದೇವಸ್ಥಾನದ ಆಡಳಿತದಲ್ಲಿ ಪಾಲ್ಗೊಳ್ಳುವ ಜನವರ್ಗಗಳ ಬಗ್ಗೆ ಮಾತ್ರ ವಿವರ ನೀಡುತ್ತದೆ. ಸಮಾಜದ ಕೆಳವರ್ಗದ ಬಗ್ಗೆ ಉಲ್ಲೇಖ ಬಹಳ ಕಡಿಮೆ ಇದೆ.[೩೨] ಕೆಳವರ್ಗದ ಜನರ ಬಗ್ಗೆ ಶಾಸನಗಳಲ್ಲಿ ವಿವರ ಸಿಗದಿದ್ದರೂ ಆಗಿನ ಸಮಾಜದಲ್ಲಿ ಜಾತಿ ವ್ಯವಸ್ಥೆ ಯಾವ ರೀತಿಯಲ್ಲಿ ಇತ್ತು ಎಂಬುವುದರ ಬಗ್ಗೆ ವೀರಕುಲಶೇಖರ ಆಳುಪೇಂದ್ರನ ಮಂಗಳೂರಿನ ಶಾಸನ ವಿವರ ನೀಡುತ್ತದೆ. ಅದೇ ರೀತಿ ಜಾತಿಯಿಂದ ಹೊರಹಾಕುವುದು ದೊಡ್ಡ ಶಿಕ್ಷೆ ಎಂದು ಪರಿಗಣಿಸಲ್ಪಟ್ಟಿತ್ತು.[೩೩]

ಶಾಸನಗಳು ಆಡಳಿತ ವ್ಯವಸ್ಥೆಯನ್ನು ಹೊಂದಿದ ಅಧಿಕಾರಿಗಳ ಸ್ಥಾನಮಾನ ಮತ್ತು ಅವರು ಪಡೆದ ವಿಶಿಷ್ಟ ಹಕ್ಕುಗಳನ್ನು ತಿಳಿಸುತ್ತದೆ. ಇವುಗಳ ಅಧ್ಯಯನವು ಆಗಿನ ಕಾಲದ ರಾಜಕೀಯ ಮಾತು ಸಾಮಾಜಿಕ ಸ್ಥಿತಿಗಳನ್ನು ತಿಳಿದುಕೊಳ್ಳುವಲ್ಲಿ ಸಹಾಯಕವಾಗಿದೆ. ಹೀಗಿದ್ದರೂ ಶಾಸನಗಳು ನೀಡುವ ಮಾಹಿತಿಗಳು ದೋಷ ಮುಕ್ತವಾಗಿಲ್ಲ. ಉತ್ಪ್ರೇಕ್ಷೆ ಮತ್ತು ಅತಿಶಯೋಕ್ತಿಗಳು ಕಾಣಿಸಿಕೊಂಡರೂ, ಭಾರತದ ಸಮಗ್ರ ಇತಿಹಾಸ ರೂಪಿಸುವಲ್ಲಿ ಇವುಗಳ ಪಾತ್ರವನ್ನು ಅಲ್ಲಗಳೆಯುವಂತಿಲ್ಲ. ೩೦೦೦ಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಶಾಸನಗಳು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬೆಳಕಿಗೆ ಬಂದಿದೆ. ಕರಾವಳಿ ಕರ್ನಾಟಕದಲ್ಲಿ ದೊರೆತ ಹೆಚ್ಚಿನ ಶಾಸನಗಳು ವಿಜಯನಗರ ಅರಸರ ಆಳ್ವಿಕೆಯ ಕಾಲದ್ದಾಗಿದೆ. ಈ ಶಾಸನಗಳಲ್ಲಿ ದೊರಕುವ ದಾನ ನೀಡಿದ ವಿವರಗಳಲ್ಲದೆ, ಒಪ್ಪಂದ, ವೀರರ ಮತ್ತು ಸ್ತ್ರೀಯರ ಆತ್ಮಾರ್ಪಣೆ, ಧಾರ್ಮಿಕಸಂಸ್ಥೆಗಳ ಸ್ಥಾಪನೆಗಳ ವಿವರ ಇತ್ಯಾದಿ ವೈವಿಧ್ಯಮಯವಾಗಿದೆ. ಶಿಲಾ ಶಾಸನಗಳೊಂದಿಗೆ ಸಾಕಷ್ಟು ಸಂಖ್ಯೆಯಲ್ಲಿ ತಾಮ್ರ ಶಾಸನಗಳು ಲಭ್ಯವಾಗಿದೆ ಹಾಗೂ ಹಲವಾರು ವೀರ ಮತ್ತು ಸ್ಮಾರಕ ಶಾಸನಗಳು ಸಾಕಷ್ಟು ಸಂಖ್ಯೆಯಲ್ಲಿ ದೊರಕಿದೆ.[೩೪]

ತುಳುನಾಡಿನಲ್ಲಿ ೧೩ನೇ ಶತಮಾನದ ಮಧ್ಯಭಾಗದವರೆಗೆ ಸೋದರ ಮಾವನಿಂದ ಅಳಿಯನಿಗೆ ಹಕ್ಕು ಬರುವುದರ ಕುರಿತು ಐತಿಹಾಸಿಕ ಉಲ್ಲೇಖವಿಲ್ಲ. ಶಾಸನಗಳ ಆಧಾರಗಳ ಪ್ರಕಾರ ಈ ಪದ್ಧತಿ ಮೊತ್ತಮೊದಲಿಗೆ ಸ್ಪಷ್ಟವಾಗಿ ವಿಜಯನಗರ ಆಳ್ವಿಕೆಯ ಕಾಲದಲ್ಲಿ ಕಂಡು ಬಂದಿದ್ದು, ಅದೇ ಕಾಲಘಟ್ಟದ ಜೈನ ಸಾಮಂತ ಅರಸು ಮನೆತನದಲ್ಲಿಯೂ ಕಂಡು ಬರುತ್ತದೆ. ತಲಂಗೆರೆಯ ಆಳುಪ ಒಂದನೆಯ ಜಯಸಿಂಹನ ಆಳ್ವಿಕೆಯ ಕಾಲದಲ್ಲಿ ಇದನ್ನು ಗುರುತಿಸುತ್ತಾರೆ. ಈ ಶಾಸನದಲ್ಲಿ ರಾಜನ ಸಹೋದರಿ ಜೋಗವ್ವೆಯ ಮಕ್ಕಳಿಗೆ ಹಕ್ಕು ಬರುವುದನ್ನು ಹೇಳಲಾಗಿದೆ. ಕೇರಳ ರಾಜ್ಯದಲ್ಲಿ ಕಂಡು

ಬರುವ ಅಳಿಯಸಂತಾನ ಪದ್ಧತಿಯನ್ನು ಮಲಯಾಳ ಭಾಷೆಯಲ್ಲಿ 'ಮರುಮಕ್ಕತ್ತಾಯಂ' ಎಂದು ಕರೆಯುತ್ತಾರೆ. ತುಳುನಾಡಿಗೆ ಹೊರಗಿನಿಂದ ಬಂದ ನಿಯಮವು ೧೩ನೆಯ ಶತಮಾನದ ಆರಂಭದ ಹೊತ್ತಿಗೆ ಸ್ಪಷ್ಟವಾಗಿ ಕಾಣಿಸುತ್ತದೆ.[೨೫]

ತುಳುನಾಡನ್ನು ಆಳಿದ ಪ್ರಾಚೀನ ಅಳುಪರ ಪೈಕಿ ಮೊದಲ ಎರಡು (೧ನೆಯ ಆಳುಪರಸ ಮತ್ತು ೧ನೆಯ ಚಿತ್ರವಾಹನ) ರಾಜರುಗಳ ಕಾಲದಲ್ಲಿ ತುಳುನಾಡಷ್ಟೇ ಅಲ್ಲದೆ ಪೊಂಬುಚ್ಚ ಪ್ರದೇಶವೂ ಕದಂಬ ಮಂಡಲ (ಬನವಾಸಿ ೧೨೦೦೦) ಅವರ ಆಳ್ವಿಕೆಗೊಳಪಟ್ಟಿದ್ದವು. ಹೀಗಾಗಿ ಅವರ ಆಳ್ವಿಕೆಯಲ್ಲಿ ತುಳುನಾಡಿನ ಮಂಗಳಪುರ (ಇಂದಿನ ಮಂಗಳೂರು), ಪೊಂಬುಚ್ಚ ಪ್ರದೇಶದ ಪೊಂಬುಚ್ಚಪುರ ಮತ್ತು ಕದಂಬ ಮಂಡಲದ ಬನವಾಸಿ ಇವು ಆಳುಪರ ಮೂರು ಪ್ರಧಾನ ರಾಜಧಾನಿಗಳಾಗಿದ್ದವು. ಮಧ್ಯಯುಗೀನ ಅಳುಪರು ಪೊಂಬುಚ್ಚ ಪ್ರದೇಶವನ್ನೂ ಕಳೆದುಕೊಂಡಿದ್ದರು. ಇವರ ಕಾಲದಲ್ಲಿ ಮಂಗಳಪುರ ಮತ್ತು ಬಾರಹಕನ್ಯಾಪುರಗಳು ಆಳುಪರ ರಾಜಧಾನಿಗಳಾಗಿದ್ದವು.[೨೬] ಪಾಂಡ್ಯ ಪಟ್ಟಿಯೊಡೆಯನ ಕಾಲದಲ್ಲಿ ಈತ ಚಾಲುಕ್ಯರ ಅಧಿಪತ್ಯವನ್ನು ತಿರಸ್ಕರಿಸಿದುದರಿಂದ ಕುಪಿತನಾದ ೬ನೆಯ ವಿಕ್ರಮಾದಿತ್ಯನು ತನ್ನ ಸಾಮಂತನಾದ ಹೊಯ್ಸಳ ವಿಷ್ಣುವರ್ಧನನಿಗೆ ಆಳುಪ ರಾಜ್ಯವನ್ನು ಹತೋಟಿಗೆ ತರುವಂತೆ ಆಜ್ಞಾಪಿಸಿದನು. ಹೊಯ್ಸಳರಿಂದ ಸೋಲಲ್ಪಟ್ಟರೂ ರಾಜಕೀಯ ಸ್ಥಾನಮಾನಗಳ ದೃಷ್ಟಿಯಿಂದ ನಷ್ಟವೇನೂ ಉಂಟಾಗಲಿಲ್ಲ.

ಪಾಂಡ್ಯಪಟ್ಟಿಯೊಡೆಯನ ನಂತರ ಬಂದ ಕವಿ ಅಳುಪೇಂದ್ರನ ಪಟ್ಟದ ರಾಣಿ ಪಾಂಡ್ಯ ಮಹಾದೇವಿಯು ಪನ್ನೀರ್ಪಳ್ಳಿ (ಉಡುಪಿ ತಾಲೂಕು) ಎಂಬ ಗ್ರಾಮದ ಆಡಳಿತ ಸೂತ್ರವನ್ನು ವಹಿಸಿದ್ದಳೆಂದು ಕ್ರಿ.ಶ ೧೧೫೫ಕ್ಕೆ ಸೇರಿದ ಇವನ ಕೊಟಕೇರಿ ಶಾಸನದಿಂದ ತಿಳಿದು ಬರುತ್ತದೆ. ಆಳುಪ ವೀರ ಪಾಂಡ್ಯದೇವನ ಆಳ್ವಿಕೆಯ ಕಾಲದಲ್ಲಿ ಆತನ ತಾಯಿ ಪಟ್ಟಮಹಾದೇವಿ ಮತ್ತು ಪತ್ನಿ ಬಲ್ಲ ಮಹಾದೇವಿ ಆಡಳಿತದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದ್ದರು. ವೀರಪಾಂಡ್ಯದೇವನ ಮರಣಾನಂತರ ಸಿಂಹಾಸನವನ್ನೇರಿದ ಬಲ್ಲಮಹಾದೇವಿ ಇತರ ಆಳುಪ ರಾಜರಂತೆ ಪಾಂಡ್ಯ ಚಕ್ರವರ್ತಿ, ಮಹಾರಾಜಾಧಿರಾಜ ಮುಂತಾದ ಬಿರುದುಗಳನ್ನು ತಾನೂ ಉಪಯೋಗಿಸಿಕೊಂಡಳು.[೨೭]

ದಕ್ಷಿಣ ಕನ್ನಡ ಜಿಲ್ಲೆಯನ್ನು ಆಳಿದ ಜೈನ ಅರಸರಲ್ಲಿ ಬಂಗರಸನು ತುಳು ರಾಜ್ಯದಲ್ಲೆಲ್ಲಾ ಒಂದನೇ ಮರ್ಯಾದೆಯನ್ನು ಪಡೆಯುತ್ತಿದ್ದನು. ಬಂಗರಸನಾದ ಪಾಂಡ್ಯಪ್ಪ ಬಂಗರಾಜ ಒಡೆಯನು ಕಾಲವಾದ ನಂತರ ಅವನ ತಂಗಿಯಾದ ವಿಠಲದೇವಿಯು ೧೨೮೮ರಂದು ಪಟ್ಟಕ್ಕೆ ಬಂದು ಕ್ರಿ.ಶ ೧೨೬೪ರವರೆಗೆ ಆಳಿದಳು. ಕ್ರಿ.ಶ ೧೧೯೬ರಲ್ಲಿ ಕಾಮರಾಯನ ತರುವಾಯ ಪದುಮಲದೇವಿಯು ಪಟ್ಟಕ್ಕೆ ಬಂದಳು. ಕ್ರಿ.ಶ ೧೩೨೪ರಲ್ಲಿ ಪಟ್ಟಕ್ಕೆ ಬಂದ ಹಾವಳಿ ಬಂಗರಾಜನ ತಂಗಿ ಶಂಕರದೇವಿಯು ೨೫ ವರುಷ ಆಳಿದಳು. ಹೊಯ್ಸಳ ರಾಜ್ಯವು ಆಗ ಹೀನ ಸ್ಥಿತಿಗೆ ಬಂದುದರಿಂದ ಇವಳು ಸ್ವತಂತ್ರವಾಗಿ ಆಳತೊಡಗಿದಳು.

ಅದೇ ರೀತಿ ಒಂದನೇ ಲಕ್ಷ್ಮಪ್ಪರಸ ಬಂಗರಾಜನ ತಂಗಿಯಾದ ಎರಡನೇ ಶಂಕರದೇವಿಯು ಕ್ರಿ.ಶ ೧೪೫೯ರಲ್ಲಿ ಪಟ್ಟಕ್ಕೆ ಬಂದು ೩೬ವರ್ಷಗಳವರೆಗೆ ಆಳ್ವಿಕೆ ನಡೆಸಿದಳು. ಹೊಯ್ಸಳ ವಿಷ್ಣುವರ್ಧನನು ಕಾಲವಾದ ನಂತರ ಉನ್ನತಿಗೆ ಬಂದ ಜೈನ ಅರಸನಾದ ಚೌಟರಾಜನ ವಂಶದವರು ಪುತ್ತಿಗೆ ಮೂಡಬಿದಿರೆಗಳನ್ನು ರಾಜಧಾನಿಯಾಗಿ ಮಾಡುವುದಕ್ಕಿಂತ ಮೊದಲು ಉಳ್ಳಾಲ ರಾಜಧಾನಿಯಲ್ಲಿ ಆಳುತ್ತಿದ್ದರು. ಚೌಟರಸ ೧ನೇ ತಿರುಮಲರಾಯ ಕಾಲವಾದ ನಂತರ ಇವನ ಸೊಸೆ ೧ನೇ ಅಬ್ಬಕ್ಕ ದೇವಿಯು ಕ್ರಿ.ಶ ೧೨೦೫ರಿಂದ ೧೨೩೪ರ ವರೆಗೆ ಆಳಿದಳು. ಅದೇ ರೀತಿ ೧ನೇ ಪದುಮಲಾದೇವಿಯು ೧೩೩೫ರಿಂದು ಪಟ್ಟಕ್ಕೆ ಬಂದಳು. ಅವಳ ತರುವಾಯ ಅವಳ ಮಗಳಾದ ಒಂದನೇ ಚೆನ್ನಮ್ಮದೇವಿ ೧೪೦೩ರ ವರೆಗೆ ಆಳ್ವಿಕೆ ನಡೆಸಿದಳು.[೩೪] ಚೌಟರಸ ೩ನೇ ತಿರುಮಲರಾಯನ ನಂತರ ಅವನ ಸೊಸೆ ಅಬ್ಬಕ್ಕದೇವಿಯು ೧೪೬೬ರಲ್ಲಿ ಪಟ್ಟಕ್ಕೆ ಬಂದಳು. ಅಬ್ಬಕ್ಕ ರಾಣಿಯನ್ನು ಲಕ್ಷ್ಮಪ್ಪರಸ ಬಂಗರಾಜನು ಮದುವೆಯಾಗಿದ್ದು, ಆಕೆ ಉಳ್ಳಾಲದಲ್ಲಿಯೇ ಇದ್ದಳು. ಲಕ್ಷ್ಮಪ್ಪರಸ ಬಂಗರಾಜನು ತನ್ನ ರಾಜಧಾನಿಯಾದ ಮಂಗಳೂರಿನಲ್ಲಿದ್ದನು. ವಿಜಯನಗರದ ಇಳಿಗಾಲ, ಅರಬ್ಬಿ ಸಮುದ್ರ ತೀರದ ರೇವು ಪಟ್ಟಣಗಳಲ್ಲಿ ನೆಲೆ ಕಂಡಿದ್ದ ಪೋರ್ಚುಗೀಸರ ಅಟ್ಟಹಾಸಗಳಿಂದಾಗಿ ಲಕ್ಷ್ಮಪ್ಪರಸ ಬಂಗ ಮತ್ತು ಅಬ್ಬಕ್ಕ ರಾಣಿಯರ ವಿವಾಹ ಸಂಬಂಧದಲ್ಲಿ ಬಿರುಕು ಕಾಣತೊಡಗಿತು. ಇದರ ಪ್ರಯೋಜನವನ್ನು ಪೋರ್ಚುಗೀಸರು ಚೆನ್ನಾಗಿಯೇ ಗಿಟ್ಟಿಸಿಕೊಂಡರು. 'ಪತಿಭಕ್ತಿ' ಯ ಹೆಸರಿನಲ್ಲಿ ಸ್ವಾತಂತ್ರ್ಯ ಹರಣದ ತಲೆಬಾಗುವಿಕೆಯನ್ನು ಒಪ್ಪಲು ರಾಣಿ ಅಬ್ಬಕ್ಕ ಸಿದ್ಧಳಿರಲಿಲ್ಲ. ೧೫೫೬ರಲ್ಲಿ ಅಪಾರ ಪ್ರಮಾಣದ ಕಪ್ಪ ಕಾಣಿಕೆಗಳನ್ನು ಪೋರ್ಚುಗೀಸರು ಅಬ್ಬಕ್ಕಳಿಂದ ಪಡೆಯಲು ಪ್ರಯತ್ನಿಸಿದರು.[೩೫]

ಕ್ರಿ.ಶ.೧೫೫೬ರಲ್ಲಿ ಲಕ್ಷ್ಮಪ್ಪರಸನು ಕಾಲವಾದ ನಂತರ ಅವನ ಅಳಿಯನಾದ ಕಾಮರಾಯನು ಪಟ್ಟಕ್ಕೆ ಬಂದನು. ಅತ್ತೆಯಾದ ಅಬ್ಬಕ್ಕದೇವಿಗೂ ಅಳಿಯನಾದ ಕಾಮರಾಯನಿಗೂ ಆಗಾಗ್ಗೆ ಜಗಳಗಳು ಹುಟ್ಟುತ್ತಲೇ ಇದ್ದವು. ಕಾಮರಾಯನು ಅತ್ತೆಯ ಮೇಲಿನ ದ್ವೇಷದಿಂದ ಪೋರ್ಚುಗೀಸರೊಡನೆ ಸ್ನೇಹವನ್ನು ಬೆಳೆಸಿದನು. ಪೋರ್ಚುಗೀಸರ ಹಾವಳಿಯು ಸಹಿಸಲಾರದಷ್ಟು ಹೆಚ್ಚಾಗಿತ್ತು. ಉಳ್ಳಾಲದಲ್ಲಿಯೂ ಮಂಗಳೂರಿನಲ್ಲಿಯೂ ಬಹಳ ದೊಡ್ಡ ಸೈನ್ಯಗಳಿದ್ದವು. ಪೋರ್ಚುಗೀಸರು ಪ್ರತಿಯೊಂದು ಬಂದರಿನಿಂದ ಸುಂಕ ವಸೂಲಿ ಮಾಡುತ್ತಿದ್ದರು. 'ನಮ್ಮ ಕಡಲಿನಲ್ಲಿ ನಾವು ವ್ಯಾಪಾರ ಮಾಡಲು ವಿದೇಶಿಯರ ಪರವಾನಿಗೆಯೇ?' ಎಂಬುವುದು ಅಬ್ಬಕ್ಕಳ ಪ್ರತಿಕ್ರಿಯೆಯಾಗಿತ್ತು.

ಅಭಯದೇವಿ ಹಾಗೂ ಬುಕ್ಕಾದೇವಿಯೆಂದು ಪೋರ್ಚುಗೀಸರಿಂದ ಕರೆಯಲ್ಪಡುತ್ತಿದ್ದ ಈಕೆ, ಪೋರ್ಚುಗೀಸರಿಗೆ ಸರಿಯಾಗಿ ಕಪ್ಪವನ್ನು ಕೊಡುತ್ತಿರಲಿಲ್ಲ. ಅದನ್ನು ವಸೂಲಿ ಮಾಡುವುದಕ್ಕಾಗಿ ಕ್ರಿ.ಶ. ೧೫೬೭ನೇ ಜನವರಿ ತಿಂಗಳ ೪ರಂದು ಪೋರ್ಚುಗೀಸ್ ವೈಸರೋಯಿಯಾಗಿದ್ದ ಡೋನ್ ಫ್ರಾನ್ಸಿಸ್ ಮಸ್ಕರೆಂಞಾನು ೭ ಬಗಲೆಗಳಲ್ಲಿಯೂ, ೫ ಮಂಜಿಗಳಲ್ಲಿಯೂ, ೩೦೦೦ ಸೈನಿಕರನ್ನು ತೆಗೆದುಕೊಂಡು

ಉಳ್ಳಾಲದ ಹತ್ತಿರ ಹೊಳೆಯಲ್ಲಿ ಲಂಗರು ಹಾಕಿದನು. ರಾತ್ರಿ ಊಟಮಾಡುವ ಸಮಯ ಅಬ್ಬಕ್ಕದೇವಿಯ ೫೦೦ ಮಂದಿ ಸೈನಿಕರು ಪೋರ್ಚುಗೀಸ್ ಹಡಗುಗಳ ಮೇಲೆ ಬಿದ್ದರು. ೧೫೦೦ ಮಂದಿ ಸೈನಿಕರು ಹಡಗುಗಳಿಗೆ ಮುತ್ತಿಗೆ ಹಾಕಿದಾಗ ಪೋರ್ಚುಗೀಸರು ದಿಕ್ಕುದಿಕ್ಕಿಗೆ ಓಡಿಹೋದರು. ಡೋನ್ ಫ್ರಾನ್ಸಿಸ್ಕನು ಸೈನ್ಯವನ್ನು ಕೂಡಿ ಯುದ್ಧಕ್ಕೆ ನಿಂತಾಗ ಅಬ್ಬಕ್ಕದೇವಿಯ ಸೈನಿಕರು ಸೋತುಹೋದರು. ಪೋರ್ಚುಗೀಸರು ಉಳ್ಳಾಲವನ್ನು ಸುಟ್ಟುಬಿಟ್ಟರು. ಈ ಯುದ್ಧದಲ್ಲಿ ಅಬ್ಬಕ್ಕದೇವಿಯ ಸುಮಾರು ೫೦೦ ಮಂದಿ ಸೈನಿಕರೂ ಪೋರ್ಚುಗೀಸರ ೪೦ ಮಂದಿ ಸೈನಿಕರೂ ಮಡಿದುಬಿದ್ದರು. ಅಬ್ಬಕ್ಕದೇವಿಯು ಉಚ್ಚಿಲ ತಲಪಾಡಿಯಲ್ಲಿ ಗುಡ್ಡದ ಮೇಲಿರುವ ತನ್ನ ಕೋಟೆಗೆ ಓಡಿಹೋದಳು. ಕ್ರಿ.ಶ. ೧೫೭೦ರಲ್ಲಿ ಯಾವುದಾದರೂ ಉಪಾಯದಿಂದ ಪೋರ್ಚುಗೀಸರನ್ನು ಓಡಿಸಬೇಕೆಂದು ಉಳ್ಳಾಲದ ಹತ್ತಿರ ಸಮುದ್ರದಲ್ಲಿ ಸಂಚರಿಸುತ್ತಿದ್ದ ಜಾಮೋರಿನ್ ಇವನ ನೌಕಾಪತಿಯಾಗಿದ್ದ ಕುಟ್ಟಿಪೋಕ್ರೆಗೆ ಹೇಳಿ ಕಳುಹಿಸಿದಳು. ಅವನು ಉಳ್ಳಾಲಕ್ಕೆ ಸೈನ್ಯ ತಂದು ಪೋರ್ಚುಗೀಸರೊಡನೆ ಯುದ್ಧಮಾಡಿ ಸೋತು ಹೋದನು. ರಾಣಿಯು ಕಪ್ಪ ಕೊಡುವುದಕ್ಕೆ ಒಪ್ಪಬೇಕಾಯಿತು. ೧೫೮೨ರಲ್ಲಿ ರಾಣಿಯು ಕಾಲವಾದ ನಂತರ ಅವಳ ಮಗಳು ತಿರುಮಲಾದೇವಿಯು ೧೫೦೪ರಲ್ಲಿ ಪಟ್ಟಕ್ಕೆ ಬಂದಳು. ನಂತರ ಕಾರ್ಕಳದ ಪಾಂಡ್ಯಪ್ಪ ಧಾವಣಿ ಇಮ್ಮಡಿ ಭೈರವರಾಯನಿಗೂ ತಿರುಮಲಾದೇವಿಗೂ ನಡೆದ ಯುದ್ಧದಲ್ಲಿ ಚೌಟರ ಸೈನ್ಯವು ಹಿಂದಕ್ಕೆ ಓಡಿತು. ಯುದ್ಧ ಮುಂದುವರಿದಾಗ ಭೈರರಸನು ತಿರುಮಲಾದೇವಿಯನ್ನು ಕೊಂದನು.[೪೦]

ಇಟಲಿಯ ಪ್ರವಾಸಿಗನಾದ ಪಿಯತ್ರೋ ದೆಲ್ಲಾ ವಲ್ಲೆಯು ಉಳ್ಳಾಲದ ರಾಣಿಯು ಬೀದಿಯಲ್ಲಿ ನಡೆದುಕೊಂಡು ಬರುತ್ತಿದ್ದುದನ್ನು ಕಂಡು ತಿಳಿಸುವಂತೆ 'ರಾಣಿಯ ಜೊತೆಗೆ ಹೆಂಗಸರು ಯಾರೂ ಇರಲಿಲ್ಲ. ಇದ್ದವರು ಕೇವಲ ನಾಲ್ಕು ಸಿಪಾಯಿಗಳು. ಅವರು ರಾಣಿಯ ಮುಂದೆ ನಡೆದುಕೊಂಡು ಬರುತ್ತಿದ್ದರು. ರಾಣಿಯ ಹಿಂದೆಯೂ ಐದಾರು ಜನ ಸಿಪಾಯಿಗಳಿದ್ದರು. ಅವಳು ನೋಡುವುದಕ್ಕೆ ಪರಿಚಾರಕಿಯಂತಿದ್ದರೂ ಮಾತಿನಲ್ಲಿ ತನ್ನ ಘನತೆಯನ್ನು ತೋರಿದಳು. ಆಕೆಯ ಮಾತು ಬಹಳ ಸೌಮ್ಯವಾಗಿತ್ತು. ಬಹಳ ದೂರದೃಷ್ಟಿ ಹಾಗೂ ವಿವೇಕದ ಹೆಂಗಸಿನಂತೆ ಮಾತನಾಡಿದಳು. ಇಲ್ಲಿ ಹೆಂಗಸು ಏಕೆ ರಾಜ್ಯವಾಳುತ್ತಿದ್ದಳೆಂದು ವಿಚಾರಿಸಿದಾಗ, ತಿಳಿದವರು ಹೇಳಿದಂತೆ, ಒಲ್ಲಾಳದಲ್ಲಿ ಮೊದಲಿನಿಂದಲೂ ಗಂಡಸರೇ ಯಾವಾಗಲೂ ಆಳುತ್ತಿದ್ದು ಅಳಿಯಸಂತಾನದ ಪ್ರಕಾರ ತಂದೆಗೆ ಮಗ ಹಕ್ಕುದಾರನಾಗದೆ ಸಹೋದರಿಯ ಮಗ ಹಕ್ಕುದಾರನಾಗಿರುವನು' ಎಂದಿರುವನು.[೪೧] ಹೀಗೆ ಈತ ಕಿರಿಯ ಅಬ್ಬಕ್ಕ ರಾಣಿಯ ಕ್ಷಾತ್ರ ತೇಜಸ್ಸಿನ ಕೀರ್ತಿ ಸ್ಪೈನ್, ಪೋರ್ಚುಗಲ್, ಅರೇಬಿಯ, ಪರ್ಷಿಯಾದವರೆಗೂ ಹಬ್ಬಿರುವುದನ್ನು ವಿವರಿಸಿರುವನು. ತುಳುನಾಡಿನ ಅರಮನೆಗಳ ಉಪಚಾರ ಸಂಸ್ಕೃತಿಯನ್ನು ಉಲ್ಲೇಖಿಸಿರುವನು.[೪೨]

ಅಬ್ಬಕ್ಕದೇವಿಯ ತರುವಾಯ ಅವಳ ಮಗಳು ತಿರುಮಲಾದೇವಿ ಪಟ್ಟಕ್ಕೆ ಬಂದಳು. ಆಗ ಕಾರ್ಕಳದ ಪಾಂಡ್ಯಪ್ಪ ಧಾವಣಿ ಇಮ್ಮಡಿ ಭೀರವರಾಯನಿಗೂ ತಿರುಮಲಾದೇವಿಗೂ ಜಗಳ ಬೆಳೆದು ಎರಡೂ ಕಡೆಯವರು ಯುದ್ಧಕ್ಕೆ ಸಿದ್ಧರಾದರು. ಇಬ್ಬರಿಗೂ ಸರಿಸಮನಾಗಿ ಯುದ್ಧವಾದಾಗ ತಿರುಮಲಾದೇವಿ ಮರಣ ಹೊಂದಿದಳು. ನಂತರದಲ್ಲಿ ಎರಡನೇ ಚೆನ್ನಮ್ಮದೇವಿ, ಮೂರನೇ ಚೆನ್ನಮ್ಮದೇವಿ, ಎರಡನೇ ಚಿಕ್ಕರಾಯನ ಸಹೋದರಿ ಪದುಮಲಾದೇವಿ ಆಳಿದರು. ಮೂರನೇ ಅಬ್ಬಕ್ಕದೇವಿಯ ಕಾಲದಲ್ಲಿ ಇಕ್ಕೇರಿ ಅರಸ ಸೋಮಶೇಖರ ನಾಯಕನೊಡನೆ ಕ್ಲೇಶ ಬಂದರಿಂದ ಈಕೆ ತನ್ನ ಮಗಳಾದ ಚೆನ್ನಮ್ಮದೇವಿಯನ್ನೂ, ಮೊಮ್ಮಗನನ್ನೂ, ಸ್ವಲ್ಪ ಸೈನಿಕರನ್ನೂ ಸಂಗಡ ಕರೆದುಕೊಂಡು ಹೊರಟು ಪಡುಬಿದಿರೆಯ ಬಂದರಿನಿಂದ ಹಡಗುಹತ್ತಿ ಮಲಬಾರು ಜಿಲ್ಲೆಯ ಚರಕಲ್ಲಿಗೆ ಹೋಗಿ ನಿಂತಳು. ಕ್ರಿ.ಶ ೧೭೪೦ರಲ್ಲಿ ಇಕ್ಕೇರಿ ಸೋಮಶೇಖರನಾಯಕನು ಕಾಲವಾಗಿ ಬೂದಿಬಸವಪ್ಪ ನಾಯಕನು ಪಟ್ಟಕ್ಕೆ ಬಂದನು. ಕ್ರಿ.ಶ. ೧೭೪೯ರಲ್ಲಿ ಅಬ್ಬಕ್ಕದೇವಿಯು ಯೋಗ್ಯರಾದ ಸಾಮಾಜಿಕರನ್ನು ಬಸವಪ್ಪ ನಾಯಕನಿದ್ದಲ್ಲಿಗೆ ಕಳುಹಿಸಿ ತನ್ನ ಸೀಮೆಯನ್ನು ಹಿಂತಿರುಗಿ ಪಡೆದು ಮಲಯಾಳದಿಂದ ಹೊರಟು ಬರುವಾಗ ದಾರಿಯಲ್ಲಿ ಕಾಲವಾದಳು.

ತುಳುರಾಜ್ಯದಲ್ಲಿ ಆಳಿದ ಜೈನರಾಜರ ವಂಶಗಳಲ್ಲಿ ವೇಣೂರನ್ನು ಆಳಿದ ಅಜಿಲರ ವಂಶವು ಒಂದಾಗಿದೆ. ಕ್ರಿ.ಶ ೧೬೧೦ರಲ್ಲಿ ಪಟ್ಟಕ್ಕೆ ಬಂದ ಎರಡನೇ ಮಧುರಕ್ಕ ದೇವಿಯು ತನ್ನ ಆಳ್ವಿಕೆಯ ಕಾಲದಲ್ಲಿ ವೇಣೂರು ಗೋಮಟೇಶ್ವರನಿಗೆ ಮಸ್ತಕಾಭಿಷೇಕ ಮಾಡಿಸಿದಳು. ೧೬೮೩ರಲ್ಲಿ ಪಟ್ಟಕ್ಕೆ ಬಂದ ಎರಡನೇ ಪದುಮಲಾದೇವಿಯು ವೇಣೂರು ನಿರ್ವಾಣಸ್ವಾಮಿಯವರ ಮಠದ ಚೆನ್ನವೀರ ದೇವರಿಗೆ ಒಂದು ಉಂಬಳಿಬಿಟ್ಟಳೆಂಬುದು ತಾಮ್ರ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಈಕೆ ಕ್ರಿ.ಶ ೧೬೮೩ - ೧೭೨೧ರ ವರೆಗೆ ರಾಜ್ಯವಾಳಿದಳು.[೪೩]

ವಿಜಯನಗರ ಸಾಮ್ರಾಜ್ಯಕ್ಕೆ ತುಳುನಾಡ ಕರಾವಳಿ ಅಗತ್ಯವಾಗಿತ್ತು. ತುಳುನಾಡ ಅರಸರು ವಿಜಯನಗರದ ಅರಸರಿಗೆ ಕಪ್ಪ ಕೊಡುತ್ತಿದ್ದರೂ ಅವರ ಸ್ವಾತಂತ್ರ್ಯಕ್ಕೆ ಯಾವ ಅಡ್ಡಿಯೂ ಇರಲಿಲ್ಲ. ೧೫೧೨ರಲ್ಲಿ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಮಂಗಳೂರು ಪ್ರದೇಶವು ವಿಜಯನಗರ ಸಾಮ್ರಾಜ್ಯದ ಭಾಗವಾಯಿತು.[೪೪] ಕ್ರಿ. ಶ. ೧೬೭೨ರಲ್ಲಿ ಕೆಳದಿಯ ಚೆನ್ನಮ್ಮಾಜಿ ಭುವನಗಿರಿಯಲ್ಲಿ ಪಟ್ಟಗಿಟ್ಟಿಸಿಕೊಂಡು ಬಿಜಾಪುರ, ಬೀಳಗಿ ಮೊದಲಾದ ಪಾಳೆಯಗಾರರಿಂದ ದೂರವಿದ್ದಳಲ್ಲದೆ ಹೊನ್ನಾಳಿ ಹುಲಿಕರೆ ಕೋಟೆ ಗೆದ್ದುಕೊಂಡು ಅದಕ್ಕೆ ಚೆನ್ನಗಿರಿ ಎಂದು ಹೆಸರಿಸಿದಳು. ಸೋದೆ ಬೀಳಗಿ ಪಾಳೆಯಗಾರರನ್ನು ಸೋಲಿಸಿ ಕಪ್ಪ ವಸೂಲಿ ಮಾಡಿದಳು. ಮೈಸೂರಿಗೆ ಸೇರಿದ ಹಾಸನ, ಬಾಣಾವರ, ಬೇಲೂರು ಮೊದಲಾದ ಪ್ರಾಂತ್ಯಗಳನ್ನು ಗೆದ್ದುಕೊಂಡಳು. ಮರಾಠ ದೊರೆ ಶಿವಾಜಿಯ ಮಗನಿಗೆ ಅವರ ಉಪಟಳವನ್ನು ಮರೆತು ರಕ್ಷಣೆ ಕೊಟ್ಟಿರುವುದು ಇತಿಹಾಸದಲ್ಲಿ ಅಚ್ಚಳಿಯದ ವಿಷಯ. ಔರಂಗಜೇಬನಿಂದ ತಪ್ಪಿಸಿಕೊಳ್ಳಲು

ಇವಳ ಮೊರೆಹೋದ ರಾಜಾರಾಮನಿಗೆ ರಕ್ಷಣೆ ನೀಡಿ ಮೊಘಲ್ ಸೈನ್ಯವನ್ನು ಎದುರಿಸಿದ ರಾಣಿ ಎಂದು ಹೆಸರುವಾಸಿಯಾದ ಈಕೆ, ಪೋರ್ಚುಗೀಸರೊಡನೆ ಒಳ್ಳೆಯ ವ್ಯಾಪಾರ ರೂಢಿಸಿಕೊಂಡಿದ್ದಳು. ಆಂಗ್ಲ ಪ್ರವಾಸಿ ಜಾನ್ ಫಿಯರನು ಇವಳ ಕಾಲದಲ್ಲಿ ಕೆಳದಿ ರಾಜ್ಯದಲ್ಲಿ ಪ್ರವಾಸ ಮಾಡಿದ್ದನು. ಅನೇಕ ಧಾರ್ಮಿಕ ಕಾರ್ಯ ಕೈಗೊಂಡಿದ್ದು ಚೆನ್ನಮ್ಮ ಶೃಂಗೇರಿ ಮಠಕ್ಕೆ ತಮ್ಮ ಹಿಂದಿನ ಹಿರಿಯರು ಮಾಡಿದ ಸಾಲವನ್ನು ಬಗೆಹರಿಸಿ, ದೇವಾಲಯ ಮಠಗಳ ಉದ್ದೀಪನಕ್ಕೆ ಶ್ರಮಿಸಿದಳು. ರಾಜಧಾನಿಯಲ್ಲಿ ೧ ಲಕ್ಷ ೯೬ ಸಾವಿರ ಅಮರ ಗಣಂಗಳ ದಾಸೋಹ ಮಾಡಿಸಿದಾಕೆ, ಕೆಳದಿ ವೀರಭದ್ರ ದೇವಾಲಯದ ಎದುರಿನಲ್ಲಿ ಧ್ವಜಸ್ತಂಭ ನಿರ್ಮಿಸಿದಳು. ತನಗೆ ಮಕ್ಕಳಿಲ್ಲದ್ದರಿಂದ ಬಸವಪ್ಪ ಎಂಬುವವನನ್ನು ದತ್ತು ತೆಗೆದುಕೊಂಡು ಅವನಿಗೆ 'ಬಸವ ಭೂಪಾಲ' ಎಂಬ ಹೆಸರಿಟ್ಟು ಅವನಿಗೆ ಒಳ್ಳೆಯ ಶಿಕ್ಷಣವಿತ್ತು ನಂತರದಲ್ಲಿ ಪಟ್ಟಕ್ಕೇರಿಸಿದಳು.[೪೫]

ಇನ್ನೊಬ್ಬ ಧೀರ ಮಹಿಳೆ 'ಕರಿಮೆಣಸಿನ ರಾಣಿ' ಎಂದು ಖ್ಯಾತಳಾದ ರಾಣಿ ಚೆನ್ನಾಬೈರಾದೇವಿ. ಈಕೆಯ ಸುಭದ್ರ ಆಡಳಿತದಲ್ಲಿ ಹೊನ್ನಾವರ, ಹಾಡುವಳ್ಳಿ, ಅಂಕೋಲ, ಗೇರುಸೊಪ್ಪೆ ಇವಳ ಆಳ್ವಿಕೆಯ ಪ್ರದೇಶಗಳಾಗಿದ್ದವು. ತನ್ನ ರಾಜ್ಯದ ಬಂದರು ಮತ್ತು ಮುಖ್ಯ ಪಟ್ಟಣಗಳನ್ನು ಉನ್ನತ ಸ್ಥಿತಿಗೆ ತಂದಿದ್ದಳು. ಈಕೆ ತನ್ನ ರಾಜ್ಯದಲ್ಲಿ ಬೆಳೆಯುತ್ತಿದ್ದ ಕರಿಮೆಣಸಿನ ವ್ಯಾಪಾರವನ್ನು ಅಭಿವೃದ್ಧಿಗೊಳಿಸಿ ರಫ್ತುಮಾಡತೊಡಗಿದಳು. ವಿದೇಶಿ ಬರಹಗಾರರು ಈಕೆಯನ್ನು 'ಕರಿಮೆಣಸಿನ ರಾಣಿ' ಯೆಂದು ಉಲ್ಲೇಖಿಸಿದ್ದಾರೆ.[೪೬] ರಾಣಿ ಚೆನ್ನಬೈರಾದೇವಿಯರದ್ದು ಹೋರಾಟದ ದುರಂತ ಬದುಕು.

ಅತ್ತ ವಿದೇಶೀಯ ಪೋರ್ಚುಗೀಸರೊಡನೆ, ಇತ್ತ ಸ್ವದೇಶೀಯ ಕೆಳದಿ ರಾಜರೊಡನೆ ಯುದ್ಧ ಕೈಗೊಳ್ಳುವ ಪ್ರಸಂಗ ಬಂದಿತು. ಅಂತಿಮವಾಗಿ ವೆಂಕಟಪ್ಪನಾಯಕನ ಕಡೆಯಿಂದ ಉಂಟಾದ ದುರಾಕ್ರಮಣ ಧಾಳಿಯ ಸಂಕಟದಿಂದ ಪಾರಾಗಲು ಪೋರ್ಚುಗೀಸರ ಸಹಾಯ ಬಯಸಿದಳು. ಅಂದು ಪಡುವಲ ಕಡಲ ಕಿನಾರೆಯಲ್ಲಿ ಪೋರ್ಚುಗೀಸರು ಬೀಡುಬಿಟ್ಟಿದ್ದರು. ಅವರ ಹತ್ತಾರು ಅವಶ್ಯಕತೆಗಳಿಗೆ ಹಲವು ಸಲ ಪರಿಪರಿಯಾಗಿ ಬೈರಾದೇವಿ ನೆರವು ನೀಡಿದ್ದಳು. ಆದರೆ ಅತ್ಯಂತ ಕ್ಲಿಷ್ಟ ಪರಿಸ್ಥಿತಿಯಲ್ಲಿ ಅವರು ರಾಣಿಯನ್ನು ಕೈಬಿಟ್ಟರು. ಅವಳ ದುರ್ದೈವವೆಂಬಂತೆ ತನಗಿಂತ ಕೀಳಾದ ಕುಲದವನೊಬ್ಬನನ್ನು ಮೋಹಿಸಿದಳು. ಅವನು ತಾನೇ ಮುಂದೆ ದೊರೆಯಾಗುವ ಕನಸು ಕಂಡು ಕೆಳದಿ ದೊರೆಗಳ ನೆರವು ಪಡೆದ. ಕೆಳದಿಯ ದೊರೆಗಳು ಚೆನ್ನಾಬೈರಾದೇವಿಯನ್ನು ಮತ್ತು ಅವಳ ಪ್ರಿಯಕರನನ್ನು ಬಂಧಿಸಿ ರಾಜ್ಯವನ್ನು ವಶಪಡಿಸಿಕೊಂಡರು. ನಂತರ ಚೆನ್ನಾಬೈರಾದೇವಿ ಬಂದೀಖಾನೆಯಲ್ಲೇ ಮೃತಳಾದಳು. ಹೀಗೆ ವಸಾಹತುಪೂರ್ವದಲ್ಲಿ ಮಹಿಳೆ ರಾಜಕೀಯ ರಂಗದಲ್ಲಿ ಕೇವಲ ಬೆರಳೆಣಿಕೆಯ ಮಹಿಳೆಯರಿಗೆ ಮಾತ್ರವೇ ಇಂತಹ ಅವಕಾಶ ದೊರಕಿತೆಂಬುವುದು ಗಮನಿಸಬೇಕಾದ ಸಂಗತಿಯಾಗಿದೆ.

## ೨.೩ ಕೆಳವರ್ಗದ ಮಹಿಳೆಯರ ಸ್ಥಿತಿಗತಿಗಳು

ಸಂಸ್ಕೃತಿ ಎಂಬುವುದು ಮಾನವ ಸಮಾಜದಲ್ಲಿ ಒಂದು ಸೂಕ್ಷ್ಮವಾದ ವಿಚಾರವಾಗಿದೆ. ಏಕೆಂದರೆ ಸಾಂಸ್ಕೃತಿಕವಾಗಿ ಸಮಾಜದಲ್ಲಿ ಎಲ್ಲರಿಗೂ ಸಮಾನಾವಕಾಶವಿರಬೇಕೆಂಬುವುದು ಸಾಮಾಜಿಕ ನ್ಯಾಯದ ದೃಷ್ಟಿಯಲ್ಲಿ ಅಪೇಕ್ಷಣೀಯವಾದುದು. ಆದರೆ ಭಾರತದಂತಹ ಜಾತಿ ಮತ್ತು ವರ್ಣ ವ್ಯವಸ್ಥೆಯ ಸಂಸ್ಕೃತಿಯಲ್ಲಿ ಇದು ಮರೀಚಿಕೆಯಾಗಿದೆ. ಚರಿತ್ರೆಯುದ್ದಕ್ಕೂ ನಾವು ನಮ್ಮ ಸಾಂಸ್ಕೃತಿಕ ವಿಷಯಗಳನ್ನು ಗಮನಿಸಿದಾಗ ಒಂದು ವರ್ಗ ಸುಖಭೋಗದಲ್ಲಿ ಜೀವನ ನಡೆಸಿದರೆ, ಮತ್ತೊಂದು ವರ್ಗ ಜೀವನಕ್ಕೆ ಬೇಕಾಗುವ ಪ್ರಾಥಮಿಕ ಸೌಕರ್ಯಗಳಿಂದಲೂ ವಂಚಿತರಾಗುವುದು ಕಣ್ಮುಂದೆ ಇರುವ ಸತ್ಯವಾಗಿದೆ.[೪೭] ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅತೀ ಪೂರ್ವ ಕಾಲದಲ್ಲಿ ತಳಸ್ಥರದಲ್ಲಿ ಹುಟ್ಟುವುದಕ್ಕಿಂತ ಪಶು ಪ್ರಾಣಿಗಳಾಗಿ ಹುಟ್ಟಿ ಬದುಕುವುದೇ ಉತ್ತಮವೆಂದು ಪೂರ್ವಕಾಲದ ಅಸ್ಪೃಶ್ಯ ವರ್ಗದವರು ಭಾವಿಸುತ್ತಿದ್ದರು. ಅಂತೆಯೇ ಅಸ್ಪೃಶ್ಯ ವರ್ಗದವರಿಗೆ ಮತ ಸ್ವಾತಂತ್ರ್ಯವಿರಲಿಲ್ಲ. ಮಾತ್ರವಲ್ಲದೆ ಅಭಿಪ್ರಾಯ ಸ್ವಾತಂತ್ರ್ಯವಾಗಲೀ, ಸಾರ್ವಜನಿಕ ಸ್ಥಳಗಳಲ್ಲಿ ಇತರರಂತೆ ಭಾಗವಹಿಸುವ ಅವಕಾಶವೂ ಇರಲಿಲ್ಲ. ಸುಮಾರು ಕ್ರಿ.ಪೂ. ೩೦೦೦ ವರ್ಷಗಳ ಹಿಂದೆ ಜಿಲ್ಲೆಯ ಅಸ್ಪೃಶ್ಯ ವರ್ಗದವರು, ಮಾನವರಾಗಿ ಹುಟ್ಟುವುದೇ ಒಂದು ಶಾಪವೆಂದೂ, ಅದು ಅವರು ಪೂರ್ವ ಜನ್ಮದಲ್ಲಿ ಮಾಡಿದ ಪಾಪಕೃತ್ಯಗಳ ಫಲವೆಂದೂ ಬುದ್ಧಿಜೀವಿಗಳಾದ ಅಂದಿನ ಕಾಲದ ಹರಿಜನೇತರರು ಭಾವಿಸುತ್ತಿದ್ದರು.[೪೮]

ತುಳುನಾಡಿನಲ್ಲಿ ಗುಲಾಮರನ್ನು ಅಸ್ಪೃಶ್ಯರೆಂದು ಉಳಿದ ಮೇಲ್ವರ್ಗದ ವರ್ಗಗಳು ಪರಿಗಣಿಸುತ್ತಿದ್ದವು. ಎಷ್ಟು ನಿಕೃಷ್ಟ ಬದುಕು ಇವರದ್ದಾಗಿತ್ತೆಂದರೆ, ಸಮಾಜದ ಮುಖ್ಯವಾಹಿನಿಯಿಂದ ಮಾರುದೂರದಲ್ಲಿ ಅವರು ತಮ್ಮ ಗುಡಿಸಲುಗಳನ್ನು ಕಟ್ಟಿಕೊಳ್ಳಬೇಕಾಗಿತ್ತು. ಅಲ್ಲದೆ ಇನ್ನಿತರ ಮೇಲ್ಜಾತಿಗಳ ವಾಸ್ತವ್ಯದ ನೆಲೆಗಳ ಸಮೀಪದಲ್ಲಿ ತಮ್ಮ ಮನೆಗಳನ್ನು ಕಟ್ಟುವ ಹಾಗಿರಲಿಲ್ಲ. ಗುಲಾಮಿ ಅಸ್ಪೃಶ್ಯರು ರಸ್ತೆಗಳಲ್ಲಿ ಸಂಚರಿಸುವಾಗ, ತಮ್ಮ ಬರುವಿಕೆಯನ್ನು ನಾಲ್ಕೈದು ಬಾರಿ ಕೂಗು ಹಾಕಿ ಸೂಚನೆ ನೀಡಬೇಕಾಗಿತ್ತು. ಒಂದು ವೇಳೆ ಆತನ ಕೂಗುವಿಕೆಗೆ ಉಚ್ಚವರ್ಣೀಯರು ಸ್ಪಂದಿಸಿದರೆ, ತಕ್ಷಣ ಆತನ ದೃಷ್ಟಿಗೆ ಬೀಳದ ಹಾಗೆ ರಸ್ತೆಯನ್ನು ಬಿಟ್ಟು ದೂರಸರಿಯಬೇಕಾಗಿತ್ತು. ಈ ನಿಯಮಾವಳಿಯನ್ನು ತುಳುನಾಡಿನಲ್ಲಿ ಕಡ್ಡಾಯವಾಗಿ ಶಿಸ್ತಿನಿಂದ ಪಾಲಿಸಲಾಗುತ್ತಿತ್ತು.

ತುಳುನಾಡಿನುದ್ದಕ್ಕೂ ಅಸ್ತಿತ್ವದಲ್ಲಿದ್ದ ಗುಲಾಮಗಿರಿಯ ಉಗಮದ ಬಗ್ಗೆ ನಿಖರವಾಗಿ ಪರಾಮರ್ಶಿಸಲು ಸಾಧ್ಯವಾಗದೆ ಹೋದರೂ, ಅದರ ಉಗಮಕ್ಕೆ ಕಾರಣವನ್ನಂತೂ ನೀಡಲು ಸಾಧ್ಯವಿದೆ. ಮೊದಲನೆಯದಾಗಿ ಆಕ್ರಮಣ, ತಾನು ಆಕ್ರಮಿಸಿಕೊಂಡ ಪ್ರದೇಶದ ಜನರನ್ನು ಜೀತದಾಳುಗಳನ್ನಾಗಿ ಪರಿವರ್ತಿಸುವುದು ಸಾಮಾನ್ಯವಾದ ಅಂಶವಾಗಿತ್ತು. ಎರಡನೆಯದಾಗಿ ಕೃಷಿ ಕಾರ್ಮಿಕರು ತಮ್ಮ ಭದ್ರತೆ ಮತ್ತು ಸುರಕ್ಷತೆಯ ದೃಷ್ಟಿಯಿಂದ ಪ್ರಬಲ ಜಮೀನುದಾರರ

ಕೆಲಸದಾಳುಗಳಾಗಿ ಸೇರಿ, ಯಜಮಾನನೊಂದಿಗೆ ನಡೆಸುವ ಒಪ್ಪಂದದ ಶರತ್ತುಗಳು ನಂತರ ಜೀತಪದ್ಧತಿಗೆ ನಾಂದಿಯಾಯಿತು. ಹಾಗೆಯೇ ಕೃಷಿ ಕಾರ್ಮಿಕರಲ್ಲಿ ವಿಶೇಷವಾಗಿ ಇರುವ ಮೂಢನಂಬಿಕೆ, ಬಡತನ ಮತ್ತು ಅವರಲ್ಲಿರುವ ಮೌಢ್ಯವೂ ಕೂಡಾ ಆರ್ಥಿಕ ಶೋಷಣೆಗೆ ಅವಕಾಶ ನೀಡಿತು.[೮] ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಗೆ ಇಂತಹ ಕೆಳವರ್ಗದವರ ಕೊಡುಗೆಯೇ ಕಾರಣ ಎಂಬುವುದನ್ನು ಕ್ರಿ.ಶ ೧೮ನೇ ಶತಮಾನದ ಕೊನೆಯ ಹೊತ್ತಿಗೆ ದಕ್ಷಿಣ ಕನ್ನಡ ಜಿಲ್ಲೆಗೆ ಸರ್ವೇಕ್ಷಣೆ ಮಾಡಲು ಬಂದ ಫ್ರಾನ್ಸಿಸ್ ಬುಕಾನನ್ ಇದನ್ನು ಬಹಳ ಸ್ಪಷ್ಟವಾಗಿ ದಾಖಲಿಸಿದ್ದಾನೆ. ಇಲ್ಲಿನ ಜಾತಿ, ಜನಾಂಗ, ಅದರ ಸ್ಥಾನಮಾನಗಳ, ಅವರ ವೃತ್ತಿಗಳ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಬದುಕಿನ ಚಿತ್ರಣವನ್ನು ಬಹಳ ಸೂಕ್ಷ್ಮವಾಗಿ ನೀಡಿದ್ದಾನೆ. 

ದಕ್ಷಿಣ ಕನ್ನಡ ಜಿಲ್ಲೆಯ ಗಿರಿಜನ ಪಂಗಡಕ್ಕೆ ಸೇರಿದ ಉಪಜಾತಿಯಾದ ಕೊರಗರು ಹೆಚ್ಚಾಗಿ ಗುಡ್ಡಗಾಡುಗಳಲ್ಲಿ, ಗಿರಿಕಂದರಗಳಲ್ಲಿ ವಾಸಮಾಡುತ್ತಿದ್ದರು. ಕಾಡುಪ್ರಾಣಿಗಳನ್ನು ಬೇಟೆಯಾಡಿ, ಪ್ರಾಣಿಗಳ ಚರ್ಮವನ್ನೂ , ಎಲುಬುಗಳನ್ನೂ ಸಂಗ್ರಹಿಸಿ ಮಾರಿ ಜೀವನ ಮಾಡುತ್ತಿದ್ದರು. ಕಾಡಿನ ಬೀಳಲುಗಳಿಂದ ಕಾಲಿನ ಚಾಪೆ, ಬುಟ್ಟಿ, ಕುಕ್ಕೆ ಹಾಗೂ ಹಗ್ಗ, ಸೊಪ್ಪು, ಕಲ್ಲುಗಳನ್ನು ತಯಾರಿಸಿ ವಿಕ್ರಯಿಸಿ ಜೀವನ ಮಾಡುತ್ತಿದ್ದರು. ಇವರಿಗೆ ಸಾರ್ವಜನಿಕ ಸ್ಥಳಕ್ಕೆ ಪ್ರವೇಶ ನಿಷಿದ್ಧವಿತ್ತು. ಬಹಳ ಹಿಂದೆ ನಿಕೃಷ್ಟ ಸ್ಥಿತಿಯಲ್ಲಿದ್ದು ಕೊಳಕರಾಗಿದ್ದ ಇವರನ್ನು ಸಮಾಜದಿಂದಲೇ ದೂರಿಕರಿಸಿದ್ದರು. ಸಾರ್ವಜನಿಕ ರಸ್ತೆಯಲ್ಲಾಗಲೀ, ಸ್ಥಳದಲ್ಲಾಗಲೀ ಉಗುಳಬಾರದು ಎಂಬ ನಿಷೇಧ ಇದ್ದುದರಿಂದ ಇವರು ತಮ್ಮ ಕುತ್ತಿಗೆಯಲ್ಲಿ ಒಂದು ಮಣ್ಣಿನ ಗಡಿಗೆಯನ್ನು ಇಟ್ಟುಕೊಳ್ಳುತ್ತಿದ್ದರು. ಉಗುಳುವ ಸಂದರ್ಭ ಬಂದಾಗ ಕುತ್ತಿಗೆಯ ಗಡಿಗೆಯಲ್ಲಿ ಉಗುಳುತ್ತಿದ್ದರು. ಹೆಚ್ಚಾಗಿ ಶವಕ್ಕೆ ಹಾಕುವ ವಸ್ತ್ರವನ್ನು ಇವರು ಧರಿಸುತ್ತಿದ್ದರು. ಜಿಲ್ಲೆಯ ಮೂಲನಿವಾಸಿಗಳಾದ ಕೊರಗರು ಅವಿದ್ಯಾವಂತ ಹಾಗೂ ಅನಾಗರಿಕರಾಗಿದ್ದು, ಸಂಸ್ಕೃತಿಯ ಅರಿವೇ ಇವರಿಗೆ ಬಲು ದೂರದ ಮಾತಾಗಿತ್ತು.[೨೦]

ತುಳುನಾಡನ್ನು ಆಳಿದ ಪ್ರಭುಗಳಾದ 'ಹಬಶಿಕ' ವಂಶದವರೆಂದು ಹೇಳಿಕೊಳ್ಳುವ ಇವರು ಒಂದು ರೀತಿಯಲ್ಲಿ ಅಸ್ಪೃಶ್ಯರೂ, ಜೀತದಾಳುಗಳೂ ಆಗಿದ್ದಾರೆ. ಇವರ ಮೂರು ಮುಖ್ಯ ಉಪವಿಭಾಗಗಳು - ೧. ಕಪ್ಪಡ ಕೊರಗರು:- ಇವರು ಬಟ್ಟೆ ಧರಿಸುತ್ತಿದ್ದರು. ೨. ಚಿಪ್ಪಿ ಕೊರಗರು:- ಇವರು ತಮ್ಮ ಆಭರಣಗಳನ್ನು ತೆಂಗಿನ ಗೆರಟೆ ಹಾಗೂ ಸತ್ತ ಪ್ರಾಣಿಗಳ ಎಲುಬುಗಳಿಂದ ಮಾಡಿ ಧರಿಸುತ್ತಿದ್ದರು. ೩. ವಂಟೆ ಕೊರಗರು:- ಇವರು ಬೃಹತ್ ಗಾತ್ರದ ಕಿವಿಯೋಲೆಯನ್ನು ಧರಿಸುತ್ತಿದ್ದರು.[೨೧] ಒಡೆಯರು ಅವರನ್ನು ಕೂಲಿ ಆಳಾಗಿಟ್ಟು ಗಂಡಾದರೆ ಒಂದಾಣೆಯ ಅಕ್ಕಿ, ಹೆಣ್ಣಾದರೆ ೧/೩ಆಣೆ ಕೊಡುತ್ತಿದ್ದರು. ಒಡೆಯರಿಗೆ ಅವರಿಂದ ಕೆಲಸವಿಲ್ಲದಾಗ, ತೆಂಗಿನ ನಾರಿನಿಂದ ಹಗ್ಗ, ಕಲಾತ್ಮಕ ಬುಟ್ಟಿಗಳನ್ನು ಹೆಣೆಯುತ್ತಿದ್ದರು. ಹೆಣ್ಣು ಮಕ್ಕಳು ಮೇಲ್ವರ್ಗದವರಿಂದ ಕಾಡಿ ಬೇಡಿ ಬಟ್ಟೆ ಪಡೆದು ದೇಹಕ್ಕೆ

ಸುತ್ತಿಕೊಳ್ಳುತ್ತಾರೆ. ಹೆಣ್ಣು ಮಕ್ಕಳು ವಯಸ್ಸಿಗೆ ಬಂದ ನಂತರ ಅವರಿಗೆ ವಿವಾಹ ಮಾಡುವ ಇವರಲ್ಲಿ ವಿಧವೆಯರೂ ಮರು ಮದುವೆಯಾಗಬಹುದು. ಬೇರೆ ಜಾತಿಯ ಹೆಣ್ಣನ್ನು ವಿವಾಹವಾದರೆ ಬಹಿಷ್ಕಾರ ಹಾಕುತ್ತಾರೆ. ಹೆಣ್ಣು ಗಂಡ ಸತ್ತರೆ ತವರುಮನೆಗೆ ಬಂದು ತಂದೆ ತಾಯಂದಿರ, ಒಡೆಯರ ಮನೆಕೆಲಸ ಮಾಡುತ್ತಾ ಇರುತ್ತಿದ್ದರು. ಜಿಲ್ಲೆಯ ಇನ್ನೊಂದು ಶ್ರಮಿಕ ವರ್ಗವೆಂದರೆ ಮೊಗೇರರು ಮೀನುಗಾರ ವರ್ಗ ಎಂದು ಕರೆಯಲ್ಪಡುವ ಇವರು ನಾವಿಕರು, ಹೊರೆಯಾಳುಗಳಾಗಿ ಪಲ್ಲಕ್ಕಿದೂತರಾಗಿ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಹೆಚ್ಚಾಗಿ ಈ ಜನ ದೋಣಿಗಳಲ್ಲಿ ಮೀನು ಹಿಡಿದು ವ್ಯಾಪಾರ ಮಾಡಿ ಜೀವಿಸುತ್ತಾರೆ. ಇವರು ತುಳುವನಾಡಿನ ಸ್ಥಳೀಯರೇ ಆಗಿದ್ದು ಮಲಯಾಳದ ಜನಾಂಗವನ್ನು ಹೋಲುತ್ತಾರೆ. ಜಾತಿ ನಿಯಮದ ವಿರುದ್ಧ ಹೋದವರನ್ನು ಶಿಕ್ಷಿಸುತ್ತಾರೆ.

ಕೆಳಜಾತಿಯವರೊಂದಿಗೆ ವ್ಯಭಿಚಾರಮಾಡಿದ ಸ್ತ್ರೀಯರನ್ನು ಬಹಿಷ್ಕರಿಸುತ್ತಾರೆ. ಮೇಲ್ಜಾತಿಯವರೊಡನೆ ಸಂಪರ್ಕವಿಟ್ಟುಕೊಂಡರೆ ಅದು ಮಹಾಪರಾಧವಲ್ಲವೆಂಬಂತೆ ಕೆಲವೊಮ್ಮೆ ತ್ಯಜಿಸುತ್ತಾರೆ ಅಥವಾ ಉಪೇಕ್ಷಿಸುತ್ತಾರೆ. ಆಗ ಆ ಹೆಣ್ಣು ತಾಯಿಯ ಮನೆಗೆ ಬರಬಹುದು ಅಥವಾ ಮತ್ತೆ ವಿವಾಹವಾಗಬಹುದು. ಪುರುಷರು ಬಹುಪತ್ನಿತ್ವ ಹೊಂದಬಹುದಾಗಿತ್ತು. ತುಳುನಾಡಿನ ಉತ್ತರಕ್ಕೆ ಇರುವ ಎರಡು ಶ್ರಮಿಕ ವರ್ಗದವರು ಬಚ್ಚದವರು ಮತ್ತು ಬಾಟದವರು ಒಂದೇ ರೀತಿಯ ಸಂಪ್ರದಾಯಗಳನ್ನು ಆಚರಿಸುತ್ತಾದರೂ, ಒಂದೇ ಶ್ರೇಣಿಯುಳ್ಳವರಾದರೂ ಒಬ್ಬರಲೊಬ್ಬರು ಸಂಬಂಧ ಬೆಳೆಸುವುದಿಲ್ಲ. ಇವರು ಕೊರವರಗಿಂತಲೂ ಬಡವರಾಗಿದ್ದು ಬೇರೆ ಬೇರೆ ಗುಡಿಸಲುಗಳಲ್ಲಿ ವಾಸ ಮಾಡುತ್ತಾರೆ. ಹೆಣ್ಣು ವ್ಯಭಿಚಾರ ಮಾಡಿದರೆ ಶುದ್ಧ ಮಾಡಿಸಿ ಒಳಗೆ ಕರೆದುಕೊಳ್ಳುತ್ತಾರೆ. ವಯಸ್ಸಿಗೆ ಬಂದ ಹೆಣ್ಣುಮಕ್ಕಳನ್ನು ವಿವಾಹ ಮಾಡುವ ಇವರಲ್ಲಿ ವಿಧವೆಯರು, ವಿಚ್ಛೇದಿತರು ಮರುಮದುವೆಯಾಗಬಹುದು.[೫೨]

ತುಳುನಾಡಿನ ದೇವಾಲಯಗಳಲ್ಲಿ ಮಾತ್ರವೇ ಇರುವ ಒಂದು ವಿಶೇಷ ಪದ್ಧತಿಯಿಂದ ಸೃಷ್ಟಿಯಾದ ವರ್ಗವೇ ಮೊಯ್ಲರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಅಥವಾ ಶೂದ್ರ ಸ್ತ್ರೀಯರುಗಳು ತಮ್ಮ ಗಂಡನಿಂದ ಯಾವುದೋ ಕಾರಣಗಳಿಂದ ಶೋಷಣೆಗೊಳಗಾಗಿದ್ದರೆ, ನೊಂದಿದ್ದರೆ, ವಿಧವೆಯಾಗಿದ್ದರೆ ಅಥವಾ ವಿವಾಹವಾಗಲು ಇಷ್ಟವಿಲ್ಲದಿದ್ದರೆ ಅವರು ದೇವಾಲಯಗಳಲ್ಲಿ ದೇವರ ಸೇವೆ ಮಾಡಿಕೊಂಡು ಇರಬಹುದಾದ ಅವಕಾಶ ಅವರಿಗಿತ್ತು. ಬ್ರಾಹ್ಮಣ ಹೆಂಗಸರು ಅಥವಾ ಕೆಳವರ್ಗದವರು ದೇವಾಲಯವನ್ನು ಆರಿಸಿಕೊಳ್ಳದಿದ್ದಾಗ ಅವರು ಆ ಸ್ಥಳದ ಒಬ್ಬ ಕುಲೀನ ಪುರುಷನ ಜೊತೆ ಕೂಡಿಕೆ ಮಾಡಿಕೊಂಡು ಇರಬಹುದು. ಅವರ ಮಕ್ಕಳು ಮೊಯ್ಲರುಗಳೆಂದು ಕರೆಯುತ್ತಿದ್ದರು.[೫೩] ಮಲೆಯರು ಅಥವಾ ಮಲೆಕುಡಿಯರು ದಕ್ಷಿಣ ಕನ್ನಡ ಜಿಲ್ಲೆಯ ಇನ್ನೊಂದು ಶ್ರಮಿಕ ವರ್ಗವಾಗಿದೆ. ಜಮೀನಿನ ಒಡೆಯರಾದ ಮೂಲಕಾರ್ ಇವರು ಬುಡಕಟ್ಟಿನ ಈ ಜನಾಂಗದವರಿಗೆ ತಮ್ಮ ಭೂಮಿಯಲ್ಲಿ

ಬೆಳೆಯುವ ಒಪ್ಪಂದ ಮಾಡಿಕೊಂಡು, ಬೆಳೆದುಕೊಳ್ಳುವ ಅಧಿಕಾರ ಕೊಡುತ್ತಾರೆ. ಕೆಳವರ್ಗದವರೆಂದು ಪರಿಗಣಿಸಲಾಗಿದ್ದ ಅವರ ಸಮಾಜದ ಒಳರಚನೆ ಸಂಪ್ರದಾಯಗಳು ಮೇಲ್ವರ್ಗದಲ್ಲಿದ್ದ ಆಚರಣೆಗಳಿಂದ, ಸಂಪ್ರದಾಯಗಳಿಗಿಂತ ಎಷ್ಟೋ ಮಾನವೀಯವಾಗಿದೆ. ವಿಧವೆಯರಿಗೆ ಮರುಮದುವೆ, ಸ್ತ್ರೀಯರನ್ನು ವಯಸ್ಸಿಗೆ ಬಂದ ನಂತರ ವಿವಾಹ ಮಾಡುವುದು, ಸ್ತ್ರೀ ಶೀಲದ ಅಥವಾ ವ್ಯಭಿಚಾರದ ಬಗ್ಗೆ ಉಗ್ರಶಿಕ್ಷೆಗಳು ಇಲ್ಲದ ಆಚರಣೆಗಳು, ಧಾರ್ಮಿಕ ಶೋಷಣೆ ಇಲ್ಲದಿರುವುದು - ಇವೆಲ್ಲ ಅಚ್ಚರಿ ಹುಟ್ಟಿಸುತ್ತದೆ. ಅಳಿಯಸಂತಾನ ಪದ್ಧತಿಯನ್ನು ಆಚರಿಸುವ ಇವರು ಯಾವುದೇ ಪ್ರಮುಖ ಕಾರ್ಯವನ್ನು ಗುರಿಕಾರನ ನೇತೃತ್ವದಲ್ಲಿ ನಡೆಸುತ್ತಿದ್ದರು.[xiv] ಕೆಳವರ್ಗಗಳಲ್ಲಿ ಬಾಲ್ಯವಿವಾಹ ಅಂದರೆ ತೊಟ್ಟಿಲ ಮದುವೆಗಳು ಇಲ್ಲವೆಂದೇ ಹೇಳಬಹುದು. ಹೆಣ್ಣು ಮಗಳು ಪ್ರಾಯಕ್ಕೆ ಬರುವ ಮೊದಲೇ ಮದುವೆ ಮಾಡಿಕೊಡಬೇಕೆಂಬ ಪದ್ಧತಿ ಮೇಲ್ವರ್ಗದಲ್ಲಿ ಇದ್ದುದರಿಂದ ಅವರ ಕ್ರಮಗಳನ್ನೇ ಅನುಸರಿಸಲು ಪ್ರಯತ್ನಗಳು ನಂತರದಲ್ಲಿ ನಡೆದಿರಬೇಕು. ಮಗಳ ಮಕ್ಕಳು ತಾಯಿಯ ಆಸ್ತಿಯಲ್ಲಿ ಪಾಲುದಾರರಾಗುತ್ತಾ, ಮಗನ ಮಕ್ಕಳಿಗೆ ತಮ್ಮ ತಾಯಿಯ ಕುಟುಂಬದ ಆಸ್ತಿಯಲ್ಲಿ ಮಾತ್ರ ಹಕ್ಕು ಇತ್ತು. ವಿಧವೆಯು ಸಹಗಮನ ಮಾಡುವಂತಹ ಸಂಪ್ರದಾಯವು ಇಲ್ಲಿನ ಕುಟುಂಬ ಪದ್ಧತಿಯಲ್ಲಿ ಇರಲೇ ಇಲ್ಲವೆಂದು ಹೇಳಬಹುದು. ಆದರೆ ಪತಿಯ ಮೇಲಿನ ಪ್ರೇಮದ ನಿಷ್ಠೆಯಿಂದ ಸತಿಯಾದ ಶೋಷಣೆಯ ವಿರುದ್ಧ ಧ್ವನಿಯೆತ್ತುವ ಸಾಮರ್ಥ್ಯವಿಲ್ಲದೆ ಪ್ರತಿಭಟನಾ ರೂಪದಲ್ಲಿ ಸಹಗಮನಕ್ಕೆ ಶರಣಾದವರನ್ನು ಜಾನಪದ ಕಥೆಗಳಲ್ಲಿ ಕಾಣಬಹುದು. ವಿಧವೆಯ ತಲೆಬೋಳಿಸುವ ಸಂಪ್ರದಾಯ ಮೇಲ್ವರ್ಗದಲ್ಲಿತ್ತೇ ವಿನಃ ಕೆಳವರ್ಗದಲ್ಲಿರಲಿಲ್ಲ.[xv]

ಹೊಲೆಯರು ಶ್ರಮಿಕ ವರ್ಗದವರಾಗಿದ್ದು, ಸವರ್ಣೀಯರಿಂದ ಹೊಲೆಯರು ಅಥವಾ ಅಪವಿತ್ರರು ಎಂದು ಕರೆಯಲ್ಪಟ್ಟಿದ್ದರು. ವಿವಾಹ ಸಂಬಂಧಿತ ರೀತಿ ರಿವಾಜುಗಳು ಇನ್ನಿತರ ಕೆಳವರ್ಗದ ಪಂಗಡಗಳಂತೆ ಸರಳವಾಗಿದ್ದು, ವಿವಾಹ ಸಮಾರಂಭ ನಾಲ್ಕು ದಿನಗಳವರೆಗೆ ನಡೆಯುತ್ತಿದ್ದವು. ಕಂಗಿನ ಹಾಳೆಯ ತಲೆಕವಚವನ್ನು ಮಹಿಳೆಯರು ಧರಿಸುತ್ತಿದ್ದರು. ಹೊಲೆಯರಂತೆ ವರ್ಗೀಕರಿಸಲ್ಪಟ್ಟ ಪಂಗಡವಾದ ಹೊಲೆಯರು ಬಾಕುಡರು, ತಮ್ಮನ್ನು ಐಪತ್ತುಕುಲದವರು ಎಂದು ಸಂಭೋಧಿಸುತ್ತಿದ್ದರು. ಸ್ತ್ರೀಯರು ವ್ಯಭಿಚಾರ ಮಾಡಿದರೂ ಬಹಿಷ್ಕಾರದಂತಹ ಶಿಕ್ಷೆ ನೀಡಲಾಗುತ್ತಿರಲಿಲ್ಲ. ಹೆಣ್ಣು ವಯಸ್ಸಿಗೆ ಬಂದ ನಂತರ ವಿವಾಹ ಮಾಡಿಸುತ್ತಿದ್ದರು. ವಿಧವೆಯರು, ವಿಚ್ಛೇದಿತರಿಗೆ ಮರುಮದುವೆಯಾಗುವ ಅವಕಾಶವಿತ್ತು.

ತುಳುನಾಡಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವ ಬಿಲ್ಲವರು, ಪೂರ್ವಕಾಲದಲ್ಲಿ ಬಿಲ್ಲುಬಾಣ ಹಿಡಿದುಕೊಂಡು ಮೃಗಬೇಟೆ ಹಾಗೂ ಯುದ್ಧದಲ್ಲಿ ಭಾಗವಹಿಸುತ್ತಿದ್ದ ಕಾರಣದಿಂದ ಇವರಿಗೆ ಬಿಲ್ಲವರು ಎಂಬ ಹೆಸರು ಬಂದಿದೆ. ಬೈದ್ಯ, ಪೂಜಾರಿ ಎಂಬ ಉಪನಾಮವನ್ನು ಹೆಚ್ಚಾಗಿ ಬಳಸುವುದು

ರೂಢಿಯಲ್ಲಿದೆ. ಬಿಲ್ಲವರು ತಮ್ಮ ಸಮುದಾಯದ ವೀರರಾದ ಕೋಟಿ ಚೆನ್ನಯ್ಯರನ್ನು ಆರಾಧಿಸುತ್ತಾರೆ. ಇವರಿಗೆ ದೇವಾಲಯ ಪ್ರವೇಶ ನಿಷಿದ್ಧವಿತ್ತು. ಹೆಣ್ಣು ಋತುಮತಿಯಾದ ನಂತರ ವಿವಾಹ ನೆರವೇರಲ್ಪಡುತ್ತಿತ್ತು. ವಿಧವಾ ಪುನರ್ವಿವಾಹ ಮತ್ತು ವಿಚ್ಛೇದನಕ್ಕೆ ಅವಕಾಶವಿತ್ತು.[81] ಇನ್ನೊಂದು ವರ್ಗವಾದ ನಲಿಕೆ ಪಂಗಡದವರು ಭೂತ ದೈವಗಳ ಕೋಲಕಟ್ಟಿ ಕುಣಿಯುವುದರಲ್ಲಿ ಹಾಗೂ ನಾಟ್ಯ ನಟನೆಯಲ್ಲಿ ನಿಪುಣರಾದ ಕಾರಣ ಇವರನ್ನು ನಾಟ್ಯದವರೆಂದೂ ಕರೆಯುತ್ತಾರೆ. ತುಳುವಿನಲ್ಲಿ ನಾಟ್ಯಕ್ಕೆ ನಲಿಕೆ ಎಂಬುವುದಾಗಿ ಹೇಳುವುದರಿಂದ ಮುಂದೆ 'ನಲಿಕೆಯವರು' ಎಂದು ಕರೆಯುವ ವಾಡಿಕೆ ಬಂದಿರುವುದಾಗಿ ಪೂರ್ವಿಕರ ಅಭಿಪ್ರಾಯವಾಗಿದೆ. ಪುರುಷರು ಭೂತಗಳಿಗೆ ಕೋಲಕಟ್ಟುವ ಸಮಯ ಅವರ ಜೊತೆ ಪಾಡ್ದನ ಹಾಡುವುದು ಹಾಗೂ ಇನ್ನಿತರ ಕೆಲಸಗಳಲ್ಲಿ ಹೆಂಗಸರು ನೆರವಾಗುತ್ತಿದ್ದರು. ವಿಧವೆಯರು ಪುನರ್ವಿವಾಹವಾಗಲು ಅವಕಾಶವಿತ್ತು.

ಅತೀ ಪುರಾತನ ಕಾಲದಿಂದಲೂ ಜಿಲ್ಲೆಯಲ್ಲಿ ಜೀವಿಸಿಕೊಂಡು ಬಂದ ತೋಟಿ ಸಮುದಾಯವು ಹೀನಾಯವಾದ ಕಾಯಕದಲ್ಲಿ ತೊಡಗಿದ್ದು ಕಠಿಣ ಪರಿಶ್ರಮದ ಜೀವನ ಸಾಗಿಸುತ್ತಿದ್ದರು. ಪಾಯಖಾನೆ ಸ್ವಚ್ಛ ಮಾಡುವ ಕೆಲಸಕ್ಕೆ ತುಳುವಿನಲ್ಲಿ 'ತೊಟ್ಟೆ'ಯೆಂದು ಹೇಳುವ ಸುಮಾರು ಎರಡು ಅಡಿ ಉದ್ದನೆಯ ತಗಡಿನ (ಕನ್ನಡದಲ್ಲಿ ಬಾಲ್ದಿ ಎಂದು ಹೇಳುವ) ಪಾತ್ರೆಯನ್ನು ಉಪಯೋಗಿಸಿ, ಅದನ್ನು ತಲೆಯ ಮೇಲೆ ಹೊತ್ತುಕೊಂಡು ಮಲವನ್ನು ಸಾಗಿಸುತ್ತಿದ್ದುದರಿಂದಾಗಿ ಇವರನ್ನು 'ತೊಟ್ಟೆಯವರು' ಎಂಬುವುದಾಗಿ ಕರೆಯಲಾಯಿತು. ಹಿಂದೆ ಇವರಲ್ಲಿ ಹೆಂಗಸರು ಸೊಂಟದಿಂದ ಮೇಲೆ ವಸ್ತ್ರತೊಡುವ ಕ್ರಮ ಇಲ್ಲವಾಗಿತ್ತು. ಗಂಡಸರಿಗೆ ಸರಿಸಮಾನರಾಗಿ ದುಡಿಯುವ ತೋಟಿ ಸಮುದಾಯದ ಹೆಂಗಸರು ಶ್ರಮಜೀವಿಗಳಾಗಿರುವರು.[82] ಕೆಳಸ್ತರದ ಮಹಿಳೆಯರ ಸ್ಥಿತಿಗತಿಗಳ ಕುರಿತು ಕ್ಷೇತ್ರ ಕಾರ್ಯ ಕೈಗೊಂಡ ಸಂದರ್ಭ ವಿವಿಧ ಪಂಗಡದವರು ನೀಡಿದ ದಾರುಣ ಬದುಕಿನ ಚಿತ್ರಣ ಇಂತಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲೂಕಿನ ಮಣಿನಾಲ್ಕೂರು ಗ್ರಾಮದ ಎಂಭತ್ತಮೂರು ವರ್ಷದ ಚಿಂಗು ಇವರಿಗೆ ಚಿಕ್ಕಂದಿನಿಂದಲೇ ಕಿತ್ತು ತಿನ್ನುವ ಬಡತನವಿದ್ದುದರಿಂದ ಶಿಕ್ಷಣವೆಂಬುವುದು ಮರೀಚಿಕೆಯಾಗಿತ್ತು. ಧರಿಸಲುಬಟ್ಟೆ ಇಲ್ಲದೆ ಇದ್ದಾಗ, ಒಂದು ಸೀರೆಯನ್ನು ಅರ್ಧ ತುಂಡು ಮಾಡಿ ಮೈ ಮುಚ್ಚಿಕೊಳ್ಳಬೇಕಾದ ಪರಿಸ್ಥಿತಿ ಇತ್ತು. ತೋಟದ ಕೆಲಸ ಮಾಡುತ್ತಿದ್ದ ಇವರು ಮೇಲ್ವರ್ಗದವರು ದಲಿತ ಸ್ತ್ರೀಯರಿಗೆ ನೀಡುತ್ತಿದ್ದ ಲೈಂಗಿಕ ಕಿರುಕುಳದ ಕುರಿತು ತಿಳಿಸುವಂತೆ, 'ಮೂಡಬಿದ್ರೆಯ ಗುತ್ತು ಮನೆಯಾದ ಜೈನ ಮನೆಯ ಯಜಮಾನನು ತನ್ನ ಊರಿನಲ್ಲಿ ವಿವಾಹವಾದ ನವವಧುವಿನೊಂದಿಗೆ ಮೊದಲ ಮೂರು ದಿನಗಳನ್ನು ಹಂಚಿಕೊಳ್ಳುತ್ತಿದ್ದನು ಎಂಬ ನೈಜ ಸಂಗತಿಯನ್ನು ತನ್ನ ತಾಯಿ ಮುದರು

ತನಗೆ ತಿಳಿಸಿರುವುದಾಗಿದೆ ಎನ್ನುತ್ತಾರೆ'.[೫೮] ಇದು ಕೆಳಸ್ತರದ ದಾರುಣ ಬದುಕಿಗೊಂದು ಉದಾಹರಣೆಯಾಗಿದೆ. ಬಂಟ್ವಾಳ ತಾಲೂಕಿನ ಅಜ್ಜಿಬೆಟ್ಟು ಗ್ರಾಮದ ಕೊರಗ ಸಮುದಾಯದ ಎಂಭತ್ತು ವರ್ಷದ ಪೊಡಿ ಎಂಬ ಮಹಿಳೆಯನ್ನು ಸಂದರ್ಶಿಸಿದಾಗ ಅವರು, 'ಶಿಕ್ಷಣವೆಂಬುದು ಕನಸಾಗಿತ್ತು. ಅನಕ್ಷರಸ್ಥರಾಗಿಯೇ ಉಳಿದು ಕೆಲಸದಾಳುಗಳಾಗಿ ದುಡಿಯಬೇಕಾಯಿತು. ದೇವಾಲಯ ಪ್ರವೇಶಕ್ಕೆ ನಿರ್ಬಂಧವಿದ್ದು, ಸಾರ್ವಜನಿಕ ಬಾವಿ ಮುಟ್ಟುವಂತಿರಲ್ಲಿಲ್ಲ. ಮೇಲ್ವರ್ಗದ ಬ್ರಾಹ್ಮಣರ ತೋಟಕ್ಕೆ ಕೆಲಸಕ್ಕೆ ಹೋಗುತ್ತಿದ್ದ ಇವರಿಗೆ ಶ್ರಮಪೂರಿತ ಕೆಲಸ ನೀಡಲಾಗುತ್ತಿತ್ತು. ಊಟದ ನೆಪದಲ್ಲಿ ಮೊದಲ ದಿನದ ಬಾಕಿ ಅನ್ನವನ್ನು ಸೆಗಣಿ ಹಾಸಿದ ನೆಲದ ಮೇಲೆ ತಿನ್ನಬೇಕಾದ ಪರಿಸ್ಥಿತಿ ಇತ್ತು. ಕೆಲವೊಮ್ಮೆ ಊಟವನ್ನು ಅಡಿಕೆಯ ಹಾಳೆಯಲ್ಲಿ ಎಸೆಯಲಾಗುತ್ತಿತ್ತು'. ಒಮ್ಮೆ ತಾನು ಕೆಲಸ ಮಾಡಲು ಹೋದ ಸ್ಥಳದಲ್ಲಿ ಸುಮಾರು ನೂರುವರ್ಷ ಪ್ರಾಯದ ಬ್ರಾಹ್ಮಣ ಮುದುಕಿಯೊಬ್ಬರು ಕಾಲು ಜಾರಿ ಬಿದ್ದನ್ನು ಕಂಡೆ. ಬೇಸರಗೊಂಡ ನಾನು ಅವರನ್ನು ಮೇಲಕ್ಕೆತ್ತಲು ಹೋದಾಗ ಆಕೆ 'ನನ್ನ ಬಳಿ ನೀನು ಬರಬೇಡ, ಮೈಲಿಗೆಯಾಗುತ್ತದೆ ಎಂದು ಏರುಧ್ವನಿಯಲ್ಲಿ ಉದ್ಗರಿಸಿರುವುದು ನನಗೆ ಮರೆಯಲಾರದ ಆಘಾತ ತಂದಿದೆ' ಎಂದು ತಿಳಿಸಿದರು.[೫೯]

ಕಾಸರಗೋಡು ಜಿಲ್ಲೆಯ ಮಂಜೇಶ್ವರದ ಕೊರಗ ಸಮುದಾಯದ ಭವಾನಿ ತೆಕ್ಕಿ ಗುಡ್ಡೆಯವರ ತಾಯಿಯವರಾದ ಸೋಮು ಗದ್ದೆ ಕೆಲಸಕ್ಕಾಗಿ ಕುಂಜತ್ತೂರಿನ ಸಂಕಪ್ಪ ಶೆಟ್ಟಿಯವರ ಒಡೆತನದ ಕೃಷಿ ತೋಟಕ್ಕೆ ಹೋಗುತ್ತಿದ್ದರು. ಮುಳಿ (ಹುಲ್ಲಿನ ಛಾವಣಿ) ಮನೆಯಲ್ಲಿ ವಾಸಿಸುತ್ತಿದ್ದ ಇವರಿಗೆ ಮೇಲುಸ್ತರದವರ ಮನೆಯ ಒಳಗೆ ಪ್ರವೇಶವಿರಲಿಲ್ಲ. ದಿನವಿಡೀ ದುಡಿದರೂ ಹೊಟ್ಟೆ ತುಂಬ ಉಣಲು ದೊರಕುತ್ತಿರಲಿಲ್ಲ ಎನ್ನುತ್ತಾರೆ.[೬೦] ಕಾಸರಗೋಡು ಜಿಲ್ಲೆಯ ನಲಿಕೆ ಪಂಗಡದ ಪೊಸೋಟು ದಯಾನಂದರ ಮಡದಿಯಾದ ಸೀತಾರವರನ್ನು ಭೇಟಿ ಮಾಡಿ ಸಂಗ್ರಹಿಸಿದ ಮಾಹಿತಿಯಂತೆ ಕಿತ್ತು ತಿನ್ನುವ ಬಡತನದಿಂದ ಮನೆಮಂದಿಯ ಹೊಟ್ಟೆ ತುಂಬಿಸಲು ಗುತ್ತಿನ ಮನೆಯ ಗದ್ದೆ ಕೆಲಸ ಅನಿವಾರ್ಯವಾಯಿತು. ಸವರ್ಣೀಯರ ಶೋಷಣೆ ಭಯದ ವಾತಾವರಣ ಸೃಷ್ಟಿ ಮಾಡಿತ್ತು ಎನ್ನುತ್ತಾರೆ. ಬಹಳ ನಿಕೃಷ್ಟವಾದ ಬದುಕನ್ನು ಕಂಡ ಕುಟುಂಬ ಅವರದಾಗಿದ್ದು ಚಾಪೆ ಹಾಗೂ ಬುಟ್ಟಿಯನ್ನು ತಯಾರಿಸಿ ಅದರಿಂದ ದೊರಕಿದ ಕಿಂಚಿತ್ತು ಹಣದಿಂದ ಕುಟುಂಬ ನಿರ್ವಹಿಸಬೇಕಾದ ಪರಿಸ್ಥಿತಿ ಇತ್ತು ಎಂದರು.[೬೧]

ಬೆಳ್ತಂಗಡಿ ತಾಲೂಕಿನ ಗೇರುಕಟ್ಟೆಯ ಕೊರಗ ಸಮುದಾಯದ ಎಂಭತ್ತ ನಾಲ್ಕು ವರ್ಷದ ಅಕ್ಕು ಎಂಬುವವರು ತಿಳಿಸುವಂತೆ, ಬಾಲ್ಯದಲ್ಲಿ ಶಾಲೆಯ ಕಲ್ಪನೆಯೇ ಇಲ್ಲದೆ ಬೆಳೆದುದರಿಂದ ದನ ಕಾಯುವುದು, ಸೆಗಣಿಯಿಂದ ರೊಟ್ಟಿ ತಟ್ಟುವುದು ಹಾಗೂ ಇನ್ನಿತರ ಕೆಲಸಗಳು ಅನಿವಾರ್ಯವಾಗಿ

ಮಾಡಬೇಕಾಯಿತು. ದಲಿತರೆಂದು ದೇವಾಲಯ ಪ್ರವೇಶ ನಿಷಿದ್ಧವಾಗಿದ್ದ ಕಾಲದಲ್ಲಿ ಮೇಲ್ವರ್ಗದವರು ಇವರನ್ನು ಮೈಲಿಗೆಯ ಹೆಸರಿನಲ್ಲಿ ಹಲವು ರೀತಿಯಲ್ಲಿ ಶೋಷಿಸುತ್ತಿದ್ದು, ಕೊರಗ ಸಮುದಾಯದ ಹೆಣ್ಣುಮಕ್ಕಳನ್ನು ಕಾಮತೃಷೆಗಾಗಿ ಬಳಸಿಕೊಳ್ಳುತ್ತಿದ್ದರು ಎನ್ನುತ್ತಾರೆ. ಬಂಟರು, ಜೈನರು, ಬ್ರಾಹ್ಮಣರ ಮನೆಯ ಹೊಲಸು ತೆಗೆಯುವ ಕೆಲಸ ಮಾಡಿದ ಇವರಿಗೆ ಸಿಗುತ್ತಿದ್ದ ಸಂಬಳವೆಂದರೆ ತಿಂಗಳಿಗೆ ಒಂದು ಸೇರು ಅಕ್ಕಿ ಮಾತ್ರ ಹೊಟ್ಟೆಗೆ ಸರಿಯಾಗಿ ಉಣ್ಣಲು ಕೊಡದೆ ದಾರುಣವಾದ ಬದುಕನ್ನು ಕಂಡ ಇವರು ತಾವು ಪಟ್ಟ ಸಂಕಷ್ಟವನ್ನು ದುಃಖದಿಂದ ಹಂಚಿಕೊಂಡಿದ್ದಾರೆ.[೬೨]

ಕೊರಗ ಸಮುದಾಯದ ವಾಣಿಜ್ಯ ತೆರಿಗೆ ಇಲಾಖೆಯ ಶ್ರೀ ಜನಾರ್ಧನರು ತಿಳಿಸುವಂತೆ, 'ಕಾಸರಗೋಡು ಜಿಲ್ಲೆಯ ಮಂಗಲ್ಪಾಡಿ ಗುತ್ತು ಮನೆಗೆ ಸಂಬಂಧಪಟ್ಟ ಭಾಗದಲ್ಲಿ ಯಾವುದೇ ಕೆಳಸ್ತರದವರ ವಿವಾಹ ನಡೆದ ದಿನ ಮದುವಣಗಿತ್ತಿ ಮಂಗಲ್ಪಾಡಿಯ ಗುತ್ತು ಮನೆಯ ಶೆಟ್ಟಿಗೆ ತನ್ನ ಮೈಯನ್ನು ಬತ್ತಲೆ ಮಾಡಿ ತೋರಿಸುವ ಹೀನಾಯ ಪದ್ಧತಿ ಜಾರಿಯಲ್ಲಿತ್ತು'. ಈ ಮಾಹಿತಿಯನ್ನು ತನ್ನ ತಾಯಿಯಾದ ಚೋಮಿ ನೀಡಿರುವರು ಎಂದರು.[೬೩] ಕಾಸರಗೋಡು ಜಿಲ್ಲೆಯ ಮಂಜೇಶ್ವರದ ಗುಡ್ಡೆಕೇರಿಯಲ್ಲಿ ವಾಸಿಸುತ್ತಿದ್ದ ತೋಟಿ ಸಮುದಾಯದ ಲೀಲಾ ಎಂಬುವವರ ಕುಟುಂಬ ಶ್ರೀಮಂತರ ಮನೆಯ ಒಳಚರಂಡಿ ಸ್ವಚ್ಚ ಮಾಡುವ ಕಾರ್ಯ ನಿರ್ವಹಿಸುತ್ತಿತ್ತು. ಇವರು ಅನ್ಯಧರ್ಮೀಯ ಮುಸಲ್ಮಾನರಾದ ಅಬ್ದುಲ್ ಎಂಬುವವರನ್ನು ವಿವಾಹವಾಗಿ ಇಸ್ಲಾಂಧರ್ಮಕ್ಕೆ ಮತಾಂತರಗೊಂಡರು. ಆ ಮೂಲಕ ನಾನು ಹೊಸತನಕ್ಕೆ ತೆರೆದುಕೊಂಡೆ ಎನ್ನುತ್ತಾರೆ.[೬೪]

ಮಂಜೇಶ್ವರದ ಗೇರುಕಟ್ಟೆಯಲ್ಲಿ ವಾಸಿಸುವ ಜುವೆನ್ನಾ (ವಯಸ್ಸು: ೫೦) ಎಂಬುವವರನ್ನು ಭೇಟಿ ಮಾಡಿ ಸಂಗ್ರಹಿಸಲಾದ ಮಾಹಿತಿಯ ಪ್ರಕಾರ ಇವರ ಅಜ್ಜಿ ಸೋಣೆ ಮತ್ತು ಅಜ್ಜ ಚನಿಯ ಎಂಬುವವರು ಎಣ್ಮಕಜೆ ಎಂಬ ಪ್ರದೇಶದಲ್ಲಿ ಬುಟ್ಟಿ ನೇಯುವ ಕೆಲಸ ಮಾಡಿಕೊಂಡಿದ್ದರು. ಕೊರಗ ಸಮುದಾಯಕ್ಕೆ ಸೇರಿದವರಾದ ಇವರು ಕಡು ಬಡವರಾಗಿದ್ದು, ಕಾಡಿನಲ್ಲಿ ವಾಸವಾಗಿದ್ದರು. ಅನಕ್ಷರಸ್ಥರಾದ ಇವರು ಮುಗ್ಧರಾಗಿದ್ದರು. ಆ ಸಂದರ್ಭ ಅವರಿಗೆ ಸಹಾಯಹಸ್ತ ನೀಡಿದ ರೋಮನ್ ಕ್ಯಾಥೋಲಿಕ್ ಪಾದ್ರಿಯವರಾದ ಫಾದರ್ ಅಲೆಗ್ಸಾಂಡರ್ ಕಮೀಜ್ ಎಂಬುವವರಿಂದ ಪ್ರಭಾವಿತರಾಗಿ ಕ್ರೈಸ್ತಧರ್ಮಕ್ಕೆ ಮತಾಂತರಗೊಂಡರು. ಜಾತಿ ನಿಂದನೆಯಿಂದ ಬೇಸತ್ತ ಇವರು ಮತಾಂತರದ ನಿರ್ಧಾರ ಕೈಗೊಂಡರು.[೬೫] ಹೆಚ್ಚಿನ ಕೆಳವರ್ಗಗಳಲ್ಲಿ ವಿಧವೆಯರಿಗೆ ಮರುಮದುವೆಯಾಗುವ ಅವಕಾಶವಿತ್ತು. ಉದ್ದನೆಯ ಪಂಚೆಯನ್ನು ವಧುವರರ ನಡುವೆ ಅಡ್ಡಲಾಗಿ ಇಟ್ಟ ಬಳಿಕ ನವವಧುವರರು ತಮ್ಮ ಕೈಗಳನ್ನು ಸೇರಿಸುವ ಮೂಲಕ ವಿಧವಾ ಪುನರ್ವಿವಾಹ ವಿಧಿಗಳು ನಡೆಯುತ್ತಿದ್ದವು. ವಿಧವೆಯು ವಿಧುರನಾಗಿರದ ವರನನ್ನು ವಿವಾಹವಾದರೆ ಸಮಾಜವು ಆತನನ್ನು ದೂಷಿಸಿ ಮಾನಸಿಕ ಹಿಂಸೆ ನೀಡುತ್ತಿತ್ತು ಎಂಬುವುದು ತಿಳಿದು ಬರುತ್ತದೆ.

ವಸಾಹತು ಕಾಲಘಟ್ಟದಲ್ಲೂ ತಳಸ್ತರದ ಸಮುದಾಯದ ಸ್ಥಿತಿಗತಿಗಳಲ್ಲಿ ಗಣನೀಯ ಬದಲಾವಣೆ ಕಂಡು ಬರದಿರುವುದು ವಿಪರ್ಯಾಸವೇ ಸರಿ. ಉದಾಹರಣೆಗೆ ಮಂಗಳೂರಿನ ಪೋಲಿಸ್ ವಸತಿಗೃಹದಲ್ಲಿ ತನ್ನ ಬಾಲ್ಯವನ್ನು ಕಳೆದಿರುವ ನಿವೃತ್ತ ಶಿಕ್ಷಕಿಯಾಗಿರುವ ವನಜ. ಕೆ (ವಯಸ್ಸು ೬೮) ಇವರು ಸಂದರ್ಶನದ ವೇಳೆ ತಾವು ಕಣ್ಣಾರೆ ಕಂಡ ತೋಟಿ ಸಮುದಾಯದವರ ವಿಷಾದನೀಯ ಬದುಕಿನ ಚಿತ್ರಣ ನೀಡಿದರು. ಅವರು ತಿಳಿಸುವಂತೆ 'ಮಂಗಳೂರಿನ ಪೋಲಿಸ್ ವಸತಿ ಗೃಹದ ನಿವಾಸಿಗಳು, ಪಕ್ಕದಲ್ಲಿದ್ದ ಕಟ್ಟಡದಲ್ಲಿ ಮಲ ಮೂತ್ರ ವಿಸರ್ಜನೆ ಮಾಡುತ್ತಿದ್ದು, ತೋಟಿ ಸಮುದಾಯದವರು ಅದನ್ನು ಹೊರುತ್ತಿದ್ದರು. ಇವರಲ್ಲಿ ಮುದರು, ಚೋಮು ಎಂಬುವವರ ಹೆಸರನ್ನು ಇವರು ಸ್ಮರಿಸುತ್ತಾರೆ'.[೬೬] ವಸಾಹತು ಕಾಲಘಟ್ಟದಲ್ಲಿ ಮತ್ತು ಸ್ವಾತಂತ್ರ್ಯೋತ್ತರ ಭಾರತದಲ್ಲಿಯೂ ಈ ಪದ್ಧತಿ ಜಾರಿಯಲ್ಲಿದ್ದುದು ಕೆಳಸ್ತರದ ಸಮುದಾಯಗಳ ಅಸಹನೀಯ ಸ್ಥಿತಿಗೆ ಸಾಕ್ಷಿಯಾಗಿದೆ. ಹೀಗೆ ಸಂಪ್ರದಾಯ ಮತ್ತು ಕಟ್ಟುಪಾಡುಗಳ ಚೌಕಟ್ಟು ಕೆಳವರ್ಗದವರ ಚಿಂತಾಜನಕ ಬದುಕಿಗೆ ಕಾರಣವಾಯಿತು.

## ಸಂದರ್ಭ ಸೂಚಿ


೧. ಎ.ಎಸ್ ಅಲ್ಟೇಕರ್ : ೧೯೫೫, ದಿ ಪೊಜಿಶನ್ ಆಫ್ ವಿಮೆನ್ ಇನ್ ಹಿಂದು ಸಿವಿಲೈಜೇಶನ್, ಮೋತಿಲಾಲ್ ಬನಾರಸೀದಾಸ್, ಮದ್ರಾಸ್, ಪುಟ ೫.

೨. ಗಾಯತ್ರಿ ನಾವಡ: ೧೯೯೧, ಮಹಿಳೆ ಬಿಡುಗಡೆಯ ಹಾದಿಯಲ್ಲಿ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ಪುಟ ೧೧.

೩. ನಿರಂತರ: ೨೦೦೯, ಬಿ. ವಿ. ಕಕ್ಕಿಲ್ಲಾಯ ಸಂಭಾವನಾ ಗ್ರಂಥ, ಎಂ ಎಸ್. ಕೃಷ್ಣನ್ ಸ್ಮರಣ ಸಂಸ್ಥೆ ಬೆಂಗಳೂರು, ಪುಟಗಳು ೨೯೦- ೨೯೧.

೪. ಪೀಟರ್ ಕ್ಲಾಸ್: ೧೯೮೨, ತುಳುವ ದರ್ಶನ, ಅನು: ಎ.ವಿ.ನಾವಡ, ಸುಭಾಶ್ಚಂದ್ರ, ಪ್ರಾದೇಶಿಕ ವ್ಯಾಸಾಂಗ, ಕುಂದಾಪುರ, ಪುಟ ೪೩.

೫. ಕೆ. ಸಾವಿತ್ರಿ: ೨೦೦೬, ನಂಬಿದ ಸತ್ಯಗಳು, ಕೃಷ್ಣಾಪುರ ದೊಡ್ಡಿ ಬೆಂಗಳೂರು, ಪುಟ ೧೬೫.

೬. ಮೋಹನ್ ಕೃಷ್ಣ ರೈ. ಕೆ. ೨೦೧೦, ತುಳುನಾಡ ಸಿರಿ ಬದುಕು-ಹೋರಾಟದ ಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೨.

೭. ಅಮೃತ ಸೋಮೇಶ್ವರ: ೧೯೮೪, ತುಳು ಬದುಕು ಪ್ರಕೃತಿ ಪ್ರಕಾಶನ, ದ.ಕ, ಪುಟಗಳು ೨ ಮತ್ತು ೨೮.

೮. ಬಿ.ಎ ವಿವೇಕ ರೈ: ೧೯೮೦, ತುಳುವ ಅಧ್ಯಯನ: ಕೆಲವು ವಿಚಾರಗಳು, ತುಳುವ ಪ್ರಕಾಶನ, ಮಂಗಳೂರು, ಪುಟ ೧೬.

೯. ರಾಮಕೃಷ್ಣ ಆಚಾರ್ ಪಾಲ್ತಾಡಿ: ೧೯೯೮, ಪಾಡ್ದನಗಳಲ್ಲಿ ಮೂಡಿ ಬಂದ ವೀರ ವನಿತೆಯರು, ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ಪುಟ iii.

೧೦. ಅಮೃತ ಸೋಮೇಶ್ವರ: ಪೂರ್ವೋಕ್ತ, ಪುಟ ೬೫.

೧೧. ಚಿನ್ನಪ್ಪ ಗೌಡ: ೧೯೯೦, ಭೂತಾರಾಧನೆ ಜನಪದೀಯ ಅಧ್ಯಯನ, ಮದಿಪು ಪ್ರಕಾಶನ, ಮಂಗಳ ಗಂಗೋತ್ರಿ, ಪುಟಗಳು ೧೭-೭೭.

೧೨. ಅಮೃತ ಸೋಮೇಶ್ವರ : ಪೂರ್ವೋಕ್ತ, ಪುಟ ೪೬.

೧೩. ಬಿ.ಎ ವಿವೇಕ ರೈ (ಸಂ): ೨೦೦೭, ತುಳು ಸಾಹಿತ್ಯ ಚರಿತ್ರೆ. ಕನರಾಡಿ ವಾದಿರಾಜ ಭಟ್‌ರವರ ಲೇಖನ -ಪಾಡ್ದನ: ನಿಷ್ಪತ್ತಿ ಮತ್ತು ಸ್ವರೂಪ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೪೪೨.

೧೪. ಚಿನ್ನಪ್ಪ ಗೌಡ: ೨೦೦೩, ಸಂಸ್ಕೃತಿ ಸಿರಿ, ಮದಿಪು ಪ್ರಕಾಶನ, ಮಂಗಳಗಂಗೋತ್ರಿ, ಪುಟಗಳು ೧೪- ೧೫.

೧೫. ಕೆ. ಸಾವಿತ್ರಿ : ಪೂರ್ವೋಕ್ತ, ಪುಟ ೮೮.

೧೬. ಗಾಯತ್ರಿ ನಾವಡ: ೧೯೯೭, ವಿರಚನೆ, ಎನ್.ಆರ್.ಎ.ಎಮ್.ಹೆಚ್. ಪ್ರಕಾಶನ, ಕೋಟೇಶ್ವರ, ದ.ಕ, ಪುಟ ೯೫.

೧೭. ಎ.ವಿ ನಾವಡ (ಸಂ): ೧೯೯೯, ಸಿರಿಪಾಡ್ದನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟಗಳು ೭೨-೭೩.

೧೮. ಕೆ. ಸಾವಿತ್ರಿ : ಪೂರ್ವೋಕ್ತ, ಪುಟ ೧೬೭.

೧೯. ಎ.ವಿ ನಾವಡ (ಸಂ): ಪುಟ ೫೩.

೨೦. ವಾದಿರಾಜ ಭಟ್ಟ, ಕನರಾಡಿ: ೧೯೭೪, ಯುಗಪುರುಷ ಪ್ರಕಟಣಾಲಯ, ಕಿನ್ನಿಗೋಳಿ, ಪುಟ ೩೨-೪೦.

೨೧. ಸಾವಿತ್ರಿ. ಕೆ: ಪೂರ್ವೋಕ್ತ, ಪುಟ ೬೪.

೨೨. ಅದೇ, ಪುಟ, ೧೬.

೨೩. ವಾದಿರಾಜ ಭಟ್ಟ, ಪೂರ್ವೋಕ್ತ, ಪುಟ ೨೮.

೨೪. ರಾಮಕೃಷ್ಣ ಆಚಾರ್ ಪಾಲ್ತಾಡಿ: ಪೂರ್ವೋಕ್ತ, ಪುಟ ೧೦೧.

೨೫. ಉಷಾ ಪಿ. ರೈ: ಪೂರ್ವೋಕ್ತ, ಮಧ್ಯಂತರ, ಪುಟ ೨೪.

೨೬. ಬಿ.ಎ ವಿವೇಕ ರೈ. (ಸಂ): ಪೂರ್ವೋಕ್ತ, ಪುಟ ೪೪೪.

೨೭. ವಾದಿರಾಜ ಭಟ್ಟ ಕನರಾಡಿ, ಪೂರ್ವೋಕ್ತ, ಪುಟಗಳು ೫೨-೫೪.

೨೮. ಉಷಾ ಪಿ. ರೈ: ಪೂರ್ವೋಕ್ತ, ಪುಟಗಳು ೨೫-೩೦.

೨೯. ಕೆ.ವಿ.ರಮೇಶ: ೧೯೬೮, ತುಳುನಾಡಿನ ಇತಿಹಾಸ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಪುಟ ೨೧.

೩೦. ಗೋಪಾಲ್. ಆರ್ (ಸಂ): ೨೦೦೭, ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಪುಟ ೨೪೪.

೩೧. ಶೈಲಾ ಟಿ. ವರ್ಮ: ೨೦೦೨, ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಜ್ಞಾನೋದಯ ಪ್ರಕಾಶನ, ಬೆಂಗಳೂರು, ಪುಟ ೪.

೩೨. ಗೋಪಾಲ್. ಆರ್: ಪೂರ್ವೋಕ್ತ, ಲೇಖನ: ಬಿ. ಜಗದೀಶ ಶೆಟ್ಟಿ, ತುಳುನಾಡಿನ ಶಾಸನಗಳಲ್ಲಿ ಸಾಮಾಜಿಕ ಅಧ್ಯಯನ, ಪುಟ ೭೭.

೩೩. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್, VII ಸಂ, ನಂಬ್ರ ೧೮೫.

೩೪. ವಸಂತ ಮಾಧವ ಕೆ.ಜಿ: ೨೦೦೧, ಕರಾವಳಿ ಕರ್ನಾಟಕದ ಕನ್ನಡ ಶಾಸನಗಳ ಅಧ್ಯಯನ, ನಾನ ಪಬ್ಲಿಕೇಶನ್ಸ್, ಹಳೆಯಂಗಡಿ, ಪುಟಗಳು ೭- ೯, ೧೭.

೩೫. ಬಿ.ಎ ವಿವೇಕ ರೈ: ೧೯೮೫, ತುಳು ಜನಪದ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟಗಳು ೧೪-೧೬.

೩೬. ರಮೇಶ ಕೆ.ವಿ: ಪೂರ್ವೋಕ್ತ, ಪುಟ ೨೬.

೩೭. ಅದೇ, ಪುಟಗಳು ೫೫ - ೫೬.

೩೮. ಗಣಪತಿರಾವ್ ಐಗಳ್ : ಪೂರ್ವೋಕ್ತ, ಪುಟಗಳು ೧೭೯- ೧೯೨.

೩೯. ನಿರ್ಮಲ್ ಕುಮಾರ್ ಎಂ.ಕೆ: ೨೦೦೮, ಉಳ್ಳಾಲದ ಅಳಿಯದ ರಾಣಿಯರು, ಉಳ್ಳಾಲ, ಭ। ಆದಿನಾಥ ಸ್ವಾಮಿ, ಭ। ಪಾರ್ಶ್ವನಾಥ ಸ್ವಾಮಿ ಬಸದಿ ಜೀರ್ಣೋದ್ಧಾರ ಸಮಿತಿ, ಮಂಗಳೂರು, ಪುಟಗಳು ೧೬-೧೯.

೪೦. ಗಣಪತಿರಾವ್ ಐಗಳ್ : ಪೂರ್ವೋಕ್ತ, ಪುಟಗಳು ೧೯೬-೧೯೮.

೪೧. ಹೆಚ್.ಎಲ್ ನಾಗೇಗೌಡ: ೧೯೭೨, ಪ್ರವಾಸಿ ಕಂಡ ಇಂಡಿಯಾ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪುಟಗಳು ೨೬೮-೨೭೯.

೪೨. ನಿರ್ಮಲ್ ಕುಮಾರ್ ಎಂ.ಕೆ: ಪೂರ್ವೋಕ್ತ, ಪುಟ ೧೪.

೪೩. ಗಣಪತಿರಾವ್ ಐಗಳ್: ಪೂರ್ವೋಕ್ತ ಪುಟಗಳು ೧೯೯-೨೦೬.

೪೪. ರಮೇಶ ಕೆ.ವಿ: ಪೂರ್ವೋಕ್ತ, ಪುಟ ೧೦೩.

೪೫. ಗೋಪಾಲ್. ಆರ್: ಪೂರ್ವೋಕ್ತ, ಪುಟ ೨೪೫.

೪೬. ವಸಂತ ಮಾಧವ ಕೆ.ಜಿ: ಪೂರ್ವೋಕ್ತ, ಪುಟ ೯೦.

೪೭. ಚಿನ್ನಸ್ವಾಮಿ ಸೋಸಲೆ : ೨೦೧೨, ದಲಿತರ ಬದುಕು ಮೆಲುಕು, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ ೩೦.

೪೮. ಕಮಲಾಕ್ಷ ಪಿ: ೧೯೯೪, ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ, ಪ್ರಕಾಶಕರು ಪಿ. ಕಮಲಾಕ್ಷ, ಅಂಬೇಡ್ಕರ್ ನಗರ, ಮಂಗಳೂರು, ಪುಟ ೮.

೪೯. ಬಿ. ಎ ವಿವೇಕ ರೈ : ತುಳು ಸಾಹಿತ್ಯ ಚರಿತ್ರೆ, ಪೂರ್ವೋಕ್ತ, ಲೇಖನ - ಬಾರ್ಕೂರು ಉದಯ - ತುಳುನಾಡಿನ ಸಾಮಾಜಿಕ ಚರಿತ್ರೆ: ಗುಲಾಮಗಿರಿ ಪದ್ಧತಿಯನ್ನು ಅನುಲಕ್ಷಿಸಿ, ಪುಟಗಳು ೯೪ - ೯೫.

೫೦. ಕಮಲಾಕ್ಷ ಪಿ: ಪೂರ್ವೋಕ್ತ, ಪುಟ ೩೬- ೩೯.

೫೧. ಜೆ. ಸ್ಟರಕ್: ೧೮೯೪, ಮದ್ರಾಸ್ ಡಿಸ್ಟ್ರಿಕ್ಟ್ ಮ್ಯಾನುವಲ್ಸ್, ಸೌತ್ ಕೆನರಾ, ಗವರ್ನಮೆಂಟ್ ಪ್ರೆಸ್, ಮದ್ರಾಸ್, ಪುಟ ೧೭೬.

೫೨. ಫ್ರಾನ್ಸಿಸ್ ಬುಕನನ್: ೧೯೮೮, ಎ ಜರ್ನಿ ಫ್ರಾಂ ಮದ್ರಾಸ್ ಥ್ರೂ ದ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆಂಡ್ ಮಲಬಾರ್, ಏಷಿಯನ್ ಎಡುಕೇಶನಲ್ ಸರ್ವೀಸಸ್ ನೂಡೆಲ್ಲಿ, ಸಂಪುಟ ೩, ಪುಟಗಳು ೬೫-೬೬.

೫೩. ಫ್ರಾನ್ಸಿಸ್ ಬುಕನನ್: ಪೂರ್ವೋಕ್ತ, ಪುಟ ೧೦೬.

೫೪. ಜೆ. ಸ್ಟರಕ್: ಪೂರ್ವೋಕ್ತ, ಪುಟ ೧೭೬.

೫೫. ರೋಹಿಣಿ ಬಿ. ಎಂ, ಶಶಿಲೇಖಾ. ಬಿ: ೨೦೧೦, ತುಳುನಾಡಿನ ಮಾಸ್ತಿಕಲ್ಲುಗಳು - ವೀರಗಲ್ಲುಗಳು, ದೇವಕಿ ಕೃಷ್ಣಾ ಪ್ರಕಾಶನ, ಮಂಗಳೂರು, ಪುಟಗಳು ೪೩, ೪೪.

೫೬. ಜೆ. ಸ್ಟರಕ್: ಪೂರ್ವೋಕ್ತ, ಪುಟಗಳು ೧೭೧ - ೧೭೫ .

೫೭. ಕಮಲಾಕ್ಷ ಪಿ: ಪೂರ್ವೋಕ್ತ, ಪುಟ ೧೨೧.

೫೮. ಬಂಟ್ವಾಳ ತಾಲೂಕಿನ ಮಣಿನಾಲ್ಕೂರು ಗ್ರಾಮದ ಎಂಭತ್ತಮೂರು ವರ್ಷದ ಚಿಂಗು ಇವರ ಸಂದರ್ಶನ, ಅಕ್ಟೋಬರ್ ೧೬, ೨೦೧೬.

೫೯. ಬಂಟ್ವಾಳ ತಾಲೂಕಿನ ಅಜ್ಜಿ ಬೆಟ್ಟು ಗ್ರಾಮದ ಕೊರಗ ಪಂಗಡದ ಎಂಭತ್ತು ವರ್ಷದ ಪೊಡಿ ಇವರ ಸಂದರ್ಶನ, ಅಕ್ಟೋಬರ್ ೧೭, ೨೦೧೬.

೬೦. ಕಾಸರಗೋಡು ಜಿಲ್ಲೆಯ ಮಂಜೇಶ್ವರದ ಕೊರಗ ಸಮುದಾಯದ ಭವಾನಿ ತೆಕ್ಕಿ ಗುಡ್ಡೆ ಇವರ ಸಂದರ್ಶನ, ನವೆಂಬರ್ ೨೦, ೨೦೧೬.

೬೧. ಕಾಸರಗೋಡು ಜಿಲ್ಲೆಯ ನಲಿಕೆ ಸಮುದಾಯದ ಪೊಸೋಟು ಪ್ರದೇಶದ ಸೀತಾ ಇವರ ಸಂದರ್ಶನ, ನವೆಂಬರ್ ೨೨, ೨೦೧೬.

೬೨. ಬೆಳ್ತಂಗಡಿ ತಾಲೂಕಿನ ಗೇರುಕಟ್ಟೆಯ ಕೊರಗ ಪಂಗಡದ ಎಂಭತ್ತ ನಾಲ್ಕು ವರ್ಷದ ಅಕ್ಕು ಇವರ ಸಂದರ್ಶನ, ನವೆಂಬರ್ ೨೨, ೨೦೧೬.

೬೩. ಕೊರಗ ಸಮುದಾಯದ ವಾಣಿಜ್ಯ ತೆರಿಗೆ ಇಲಾಖೆಯ ನಿವೃತ್ತ ಅಧಿಕಾರಿ ಶ್ರೀ ಜನಾರ್ಧನ ಇವರ ಸಂದರ್ಶನ, ನವೆಂಬರ್ ೨೭, ೨೦೧೬.

೬೪. ಕಾಸರಗೋಡು ಜಿಲ್ಲೆಯ ಮಂಜೇಶ್ವರದ ಗುಡ್ಡೆಕೇರಿಯ ಲೀಲಾ ಇವರ ಸಂದರ್ಶನ, ಡಿಸೆಂಬರ್ ೧೫, ೨೦೧೬.

೬೫. ಮಂಜೇಶ್ವರದ ಗೇರುಕಟ್ಟೆಯಲ್ಲಿ ವಾಸಿಸುವ ಜುವೆನ್ನಾ ಇವರ ಸಂದರ್ಶನ, ಡಿಸೆಂಬರ್ ೨೧, ೨೦೧೬.

೬೬. ವನಜ ಕೆ, ನಿವೃತ್ತ ಮುಖ್ಯೋಪಾಧ್ಯಾಯಿನಿ ಇವರ ಸಂದರ್ಶನ, ಜನವರಿ ೧, ೨೦೧೭.

# ಅಧ್ಯಾಯ: ಮೂರು

## ಮಿಷನರಿಗಳು ಮತ್ತು ಮಹಿಳೆ

೩.೧ ಬ್ರಿಟಿಷ್ ಆಡಳಿತದಲ್ಲಿ ಬಾಸೆಲ್ ಮಿಷನ್ ಮತ್ತು ರೋಮನ್ ಕ್ಯಾಥೋಲಿಕರ ಶೈಕ್ಷಣಿಕ ಚಟುವಟಿಕೆಗಳು

೩.೨ ಮಹಿಳಾ ಶಿಕ್ಷಣ ಮತ್ತು ಸ್ಥಳೀಯ ಶಿಕ್ಷಣ ಸಂಸ್ಥೆಗಳು

೩.೩ ಬ್ರಿಟಿಷ್ ಆಡಳಿತದಲ್ಲಿ ಮಿಷನರಿಗಳು ಮತ್ತು ಆರೋಗ್ಯಸೇವೆಗಳು

# ಅಧ್ಯಾಯ : ಮೂರು

## ಮಿಷನರಿಗಳು ಮತ್ತು ಮಹಿಳೆ

೧೫ನೇ ಶತಮಾನದ ಅಂತ್ಯದಲ್ಲಿ ಪೋರ್ಚುಗೀಸರ ಆಗಮನದಿಂದ ಭಾರತದಲ್ಲಿ ಪಾಶ್ಚಿಮಾತ್ಯ ವಸಾಹತುಗಳ ಕಾಲವು ಪ್ರಾರಂಭವಾಯಿತು. ಅಂತೆಯೇ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವವು ಅತೀ ದೊಡ್ಡ ಪ್ರಮಾಣದಲ್ಲಿ ಭಾರತೀಯ ಸಮಾಜದ ಮೇಲೆ ಬೀಳುವಂತಾಯಿತು. ಕ್ರೈಸ್ತಧರ್ಮವು ಅಂದರೆ ರೋಮನ್ ಕ್ಯಾಥೋಲಿಕ್ ಮತ್ತು ಪ್ರೊತೆಸ್ತಾಂತಗಳೆಂಬ ಎರಡು ಸಂಪ್ರದಾಯಗಳು, ಈ ಪ್ರಭಾವದ ಪಾಲುಗಾರರು ಎಂದು ಟಿ. ವಿ. ಫಿಲಿಪ್ ರವರ ಅಭಿಪ್ರಾಯವಾಗಿದೆ.[1] ಪೋರ್ಚುಗೀಸರು ಭಾರತದಲ್ಲಿ ಕ್ರೈಸ್ತಧರ್ಮ ಪ್ರಚಾರ ಮಾಡುವುದಕ್ಕೆ ಸಾಧ್ಯವಾದ ಎಲ್ಲಾ ವಿಧಾನಗಳನ್ನು ಉಪಯೋಗಿಸಿದರು. ಕ್ರೈಸ್ತರಾದವರಿಗೆ ಮಾತ್ರ ಸಾರ್ವಜನಿಕ ಕಾರ್ಯಾಲಯಗಳಲ್ಲಿ ಕೆಲಸ ಕೊಡುವುದು ಇಲ್ಲವೇ ಪೋರ್ಚುಗೀಸರೊಂದಿಗೆ ಸಮಾನಹಕ್ಕು ಕೊಡುವುದು ಈ ಮುಂತಾದ ಪ್ರಚೋದನಾತ್ಮಕ ವಿಧಾನಗಳನ್ನು ಬಳಸಿದುದರಿಂದ ಸುವಾರ್ತೆಯ ಮೂಲಕ ಪರಿವರ್ತನೆ ಹೊಂದಿ ಕ್ರೈಸ್ತರಾದಾವರಿಗಿಂತಲೂ, ಲೌಕಿಕ ಕಾರಣಗಳಿಗಾಗಿ ಕ್ರೈಸ್ತರಾದವರೇ ಹೆಚ್ಚಾಗಿದ್ದರು. ಅವರ ಧಾರ್ಮಿಕ ನೀತಿಯು ಒಂದು ರೀತಿಯಲ್ಲಿ 'ಅಸಹಿಷ್ಣುತೆ'ಯ ನೀತಿಯೇ ಆಗಿತ್ತೆಂದು ಹೇಳಬಹುದು.

ಪೋರ್ಚುಗೀಸರ ಕಾಲದಲ್ಲಿ ವಸಾಹತೀಕರಣ, ಸಾಮ್ರಾಜ್ಯಶಾಹೀಕರಣ ಹಾಗೂ ಕ್ರೈಸ್ತ ಧರ್ಮೀಕರಣ ಒಟ್ಟೊಟ್ಟಿಗೆ ನಡೆದವು. ಭಾರತಕ್ಕೆ ಡಚ್ಚರು ಪೋರ್ಚುಗೀಸರ ಹಾಗೆ ವ್ಯಾಪಾರ ಹಾಗೂ ಲಾಭದ ಉದ್ದೇಶದಿಂದ ಬಂದವರಾದರೂ ಧಾರ್ಮಿಕ ವಿಷಯದಲ್ಲಿ ಪೋರ್ಚುಗೀಸರಿಗಿಂತ ಭಿನ್ನವಾಗಿದ್ದು ಧರ್ಮ ಪ್ರಸರಣೆಯಲ್ಲಿ ಯಾವುದೇ ಆಸಕ್ತಿ ತೋರಿಸಲಿಲ್ಲ. ಆದರೆ ನಂತರದಲ್ಲಿ ಭಾರತಕ್ಕೆ ಬಂದ ಫ್ರೆಂಚರ ಅರಸನಾಗಿದ್ದ ಹದಿನಾಲ್ಕನೆಯ ಲೂಯಿಸನು ತನ್ನ ವಸಾಹತು ರಾಷ್ಟ್ರಗಳಲ್ಲಿ ಕ್ರೈಸ್ತಧರ್ಮ ಪ್ರಸಾರಣೆ ಮಾಡುವಂತೆ ಮಿಷನರಿಗಳನ್ನು ಪ್ರೋತ್ಸಾಹಿಸಿದನು. ೧೬೨೦ರಲ್ಲಿ ಭಾರತದ ಪೂರ್ವ ಕರಾವಳಿಗೆ ಬಂದ ಡೇನರು ಲೂಥರನ್ ಸಂಪ್ರದಾಯಕ್ಕೆ ಸಂಬಂಧಪಟ್ಟಿದ್ದು ಧರ್ಮ ಪ್ರಸಾರಣೆಯಲ್ಲಿ ಆಸಕ್ತಿಯುಳ್ಳವರಾಗಿದ್ದರು.[2] ಭಾರತದಲ್ಲಿ ಪ್ರೊತೆಸ್ತಾಂತ ಕ್ರಿಸ್ತಿಯನ್ ಮಿಷನ್ ಪರಿಚಯಿಸಿದವರು ಸಣ್ಣ ರಾಷ್ಟ್ರವಾದ ಡೆನ್ಮಾರ್ಕಿಗೆ ಸೇರಿದವರಾಗಿದ್ದರು.[3] ಯುರೋಪಿನಲ್ಲಿ ಸಾಕಷ್ಟು ಸಭೆಗಳನ್ನು ಸ್ಥಾಪಿಸಿದ ಇವಾಂಜೆಲಿಕಲ್ ಮಿಷನರಿ ಸಂಘವು ತನ್ನ ಆರ್ಥಿಕ ಸ್ಥಿತಿಯು ಉತ್ತಮಗೊಂಡಾಗ ಭಾರತದಲ್ಲಿ ಪ್ರೊತೆಸ್ತಾಂತ ಸಭೆಗಳು ಇಲ್ಲದ ಸ್ಥಳಗಳಲ್ಲಿ ತಮ್ಮ ಮಿಷನರಿಗಳನ್ನು ಕಳುಹಿಸಲು ಮನಸ್ಸು

ಮಾಡಿತು. ಆದುದರಿಂದ ೧೮೩೪ರ ಫೆಬ್ರವರಿ ೧೨ರಂದು ಬಾಸೆಲ್ ಮಿಷನರಿ ಸೊಸೈಟಿಯಿಂದ ಮೂವರು ಮಿಷನರಿಗಳಾದ ಯೂಹಾನ್ ಕ್ರಿಸ್ಟೋಫರ್, ಕ್ರಿಸ್ಟೋಫರ್ ಲೆನ್ಹಾರ್ಡ್ ಗೇನರ್ ಹಾಗೂ ಸಾಮುವೆಲ್ ಹೆಬಿಕ್ ಎಂಬುವವರು ಭಾರತಕ್ಕೆ ಕಳುಹಿಸಲ್ಪಟ್ಟರು.[೪] ಹೀಗೆ ಅವರು ೧೮೩೪ರ ಅಕ್ಟೋಬರ್ ೩೦ರಂದು ಮಂಗಳೂರಿನ ಬೊಕ್ಕಪಟ್ನ ಪ್ರದೇಶಕ್ಕೆ ಬಂದರು.[೫] ೧೬ನೇ ಶತಮಾನಕ್ಕೆ ಮುನ್ನ ದಕ್ಷಿಣ ಕನ್ನಡ ಜಿಲ್ಲೆಯ ಕ್ಯಾಥೋಲಿಕ್ ಧರ್ಮದ ಕುರಿತಾಗಿ ಯಾವುದೇ ಐತಿಹಾಸಿಕ ದಾಖಲೆಗಳು ಲಭ್ಯವಿಲ್ಲ. ಆದರೆ, ೧೬ನೇ ಶತಮಾನದ ಆರಂಭದಿಂದ ಭಾರತದ ಪಶ್ಚಿಮ ಕರಾವಳಿಯಲ್ಲಿ ಪೋರ್ಚುಗೀಸರ ಪ್ರಭಾವ ಹೆಚ್ಚುತ್ತಾ ಬಂದಿತು. ಎಲ್ಲೆಲ್ಲಿ ಪೋರ್ಚುಗೀಸ್ ನಾಯಕರು, ದಳವಾಯಿಗಳು ತಮ್ಮ ರಾಷ್ಟ್ರದ ನಿಶಾನಿಯನ್ನು ನೆಟ್ಟರೋ ಅವರ ಹಿಂದೆಯೇ ಪೋರ್ಚುಗೀಸ್ ಧರ್ಮಗುರುಗಳು, ಕ್ರೈಸ್ತ ಮತ ಪ್ರಚಾರದ ಧ್ವಜವನ್ನು ನೆಟ್ಟರು.[೬]

ಕ್ರೈಸ್ತ ಮತವು ದಕ್ಷಿಣ ಕನ್ನಡ ಜಿಲ್ಲೆಗೆ ಪ್ರವೇಶಿಸಿರುವ ಕುರಿತು ಗಣಪತಿ ರಾವ್ ಐಗಳ್ ನೀಡಿರುವ ಮಾಹಿತಿಯಂತೆ ಕ್ರಿ.ಶ. ೧೪೭೩ರಲ್ಲಿ ಕೆಲವು ಮೊಗೇರರು ಮಂಗಳೂರಿನ ಬಳಿಯ ಸಮುದ್ರಕ್ಕೆ ಮೀನು ಹಿಡಿಯಲು ಹೋದಾಗ ಮರದ ಕ್ರೂಜೆ ಸಿಕ್ಕಿತು. ಅವರು ಅದನ್ನು ತಮ್ಮ ದೇಶದ ರಾಜನಾದ ಕಾಮರಾಯ ಬಂಗರಾಜನಿಗೆ ನೀಡಿದಾಗ ಆತನು ತನ್ನ ವಿಚಿತ್ರವಾದ ವಸ್ತುಗಳನ್ನು ಇಡುವ ಮಂದಿರದಲ್ಲಿ ಅದನ್ನು ಇಟ್ಟನು. ಒಲಿವ್ ಮರದಿಂದ ಮಾಡಲ್ಪಟ್ಟ ಈ ಕ್ರೂಜೆಯನ್ನು ಕ್ರಿ.ಶ. ೧೬೧೧ರಲ್ಲಿ ಗೋವಾದ ಶ್ರೀಮಂತನಾದ ಮಿಕಾಯೇಲ್ ಡಿ ಅಲ್ಮಿಡಾ ಎಂಬುವವನು ವೀರನರಸಿಂಹ ಕಾಮರಾಯ ಬಂಗರಾಜನಿಂದ ಹೆಚ್ಚು ಬೆಲೆಯುಳ್ಳ ವಸ್ತುಗಳನ್ನು ಕೊಟ್ಟು ಪಡಕೊಂಡನು. ಕ್ರಿ.ಶ.೧೫೦೫ರಲ್ಲಿ ಆಲ್ಮಿಡಾ ಜೊತೆಯಲ್ಲಿ ಫ್ರಾ.ಲೂಯಿಸ್ ಎಂಬುವವನು ವಿಜಯನಗರದ ರಾಜನಾದ ನರಸಿಂಗನಿಂದ ಕರಾವಳಿಯಲ್ಲಿ ವ್ಯಾಪಾರ ಮಾಡುವುದಕ್ಕೂ ಹಾಗೂ ತಮ್ಮ ಮತವನ್ನು ಭೋಧಿಸಲು ಅನುಮತಿಯನ್ನು ಪಡೆದನು.

ಕ್ರಿ.ಶ ೧೫೧೦ರಲ್ಲಿ ಗೋವೆಯನ್ನು ಅಲ್ಬುಕರ್ಕನು ವಶಪಡಿಸಿದ ಬಳಿಕ ಪೋರ್ಚುಗೀಸರ ಪ್ರಾಬಲ್ಯ ಹೆಚ್ಚಿತು. ಪೋರ್ಚುಗೀಸರು ಕ್ರಿ.ಶ ೧೫೨೭ರಲ್ಲಿ ಮಂಗಳೂರನ್ನು ವಶಪಡಿಸಿಕೊಂಡಾಗ ಗೋವೆಯ ಅನೇಕ ಕ್ರೈಸ್ತ ಕುಟುಂಬಗಳು ಇಲ್ಲಿಗೆ ಬಂದು ನೆಲೆಸಿದವು. ನಂತರ ಪೋರ್ಚುಗೀಸ್ ವೈಸರೊಯಿಯಾಗಿದ್ದ ಡೊನ್ ಆಂಟಾವೊ - ಡಿ- ನೊರೆಂಞ ಮತ್ತು ಕೆಲವು ಮತಭೋಧಕರು ಉಳ್ಳಾಲದ ಚೌಟರ ರಾಣಿಯಾದ ಅಬ್ಬಕ್ಕದೇವಿಯಿಂದ ಕಪ್ಪವನ್ನು ಪಡೆದುಕೊಳ್ಳಲಿಕ್ಕಾಗಿ ದೊಡ್ಡ ಸೈನ್ಯದ ಮೂಲಕ ರಾಣಿಯನ್ನು ಸೋಲಿಸಿ ಉಳ್ಳಾಲದಲ್ಲಿಯೂ ಕ್ರೈಸ್ತಮತವನ್ನು ಬೋಧಿಸಲಾರಂಭಿಸಿದರು. ಆ ಬಳಿಕ ಬಿದನೂರು ಅರಸನಾದ ಶಿವಪ್ಪನಾಯಕನ ಮೂಲಕ ಮತೋಪದೇಶಕರನ್ನು ನೇಮಿಸುವ ಅಪ್ಪಣೆಯನ್ನು ಪಡೆದುಕೊಂಡರು. ೧೬೮೧ರಲ್ಲಿ ಫಾದರ್ ವಾಸ್ ಎಂಬ ಪಾದ್ರಿಯು ಮಂಗಳೂರಿಗೆ ಬಂದಾಗ ರುಜೇರಿಯೋ ಇಗರ್ಜಿಯು ಒಂದು ಫೆಕ್ಟರಿ ಇಗರ್ಜಿಯಾಗಿತ್ತು. ಇವನು ಉಳ್ಳಾಲ, ಕುಂದಾಪುರ ಮತ್ತು ಗಂಗೊಳ್ಳಿ ಪ್ರದೇಶಗಳಲ್ಲಿ ಹೊಸ ಇಗರ್ಜಿಗಳನ್ನು ಕಟ್ಟಿಸಿದನು. ೧೬೭೮ರಲ್ಲಿ ರಾಣಿ ಚೆನ್ನಮ್ಮಾಜಿ ಮತ್ತು ಪೋರ್ಚುಗೀಸರಿಗೆ ಆದ ಕರಾರಿನ ಪ್ರಕಾರ

ಫೆಕ್ಟರಿಗಳನ್ನು, ಇಗರ್ಜಿಗಳನ್ನು ಕಟ್ಟಲು ಅನುಮತಿ ದೊರೆತು, ಮಂಗಳೂರಿನ ಹಂಪನಕಟ್ಟೆ ಮಿಲಾಗ್ರಿಸ್ ಇಗರ್ಜಿಯನ್ನು ಕಟ್ಟಲು ಸ್ಥಳವೂ ಉಂಬಳಿಯಾಗಿ ಸಿಕ್ಕಿತು. ಬಿಶೋಪ್ ಕಸ್ತೊರಿವಿನ ಮರಣಾನಂತರ ರಾಣಿ ಚೆನ್ನಾಮ್ಮಾಜಿಯು ಮಿಲಾಗ್ರಿಸ್ ಇಗರ್ಜಿಯು ಇರುವ ಸ್ಥಳವನ್ನು ಸ್ವಾಧೀನಪಡಿಸಿಕೊಂಡಾಗ, ರಾಣಿಯನ್ನು ಸಮಾಧಾನಪಡಿಸಿ ಸ್ಥಳವನ್ನು ಹಿಂಪಡೆಯಲಾಯಿತು. ೧೭೫೮ರಲ್ಲಿ ಮಿಲಾಗ್ರಿಸ್ ಇಗರ್ಜಿಯನ್ನು ಕಟ್ಟಲಾಯಿತು. ಕ್ರಿ.ಶ ೧೭೬೮ರಲ್ಲಿ ಇಂಗ್ಲಿಷ್ ಎಡ್ಮಿರಲ್ ವಾಟ್ಸನನು ಮಂಗಳೂರು ಕೋಟೆಯನ್ನು ವಶಪಡಿಸಿದಾಗ ಕ್ರೈಸ್ತರು ಇಂಗ್ಲಿಷರ ಕಡೆಗೆ ಸೇರಿರಬಹುದೆಂದು ಹೈದರನಿಗೆ ಸಂಶಯ ಬಂದರೂ ಹೈದರನ ಮಗನಾದ ಟಿಪ್ಪುವಿನ ಕಾಲದಲ್ಲಿ ಕ್ರೈಸ್ತರನ್ನು ಅನುಮಾನಿಸಿ ಅವರನ್ನು ಸೆರೆಹಿಡಿಯಲು ರಾಜಮುದ್ರೆ ಇರುವ ಪರವಾನೆಗಳು ಜಿಲ್ಲೆಯಲ್ಲಿರುವ ಎಲ್ಲಾ ಸೇನಾಧಿಪತಿಗಳಿಗೆ ಕಳುಹಿಸಲ್ಪಟ್ಟವು.[೭] ಟಿಪ್ಪು ಸುಲ್ತಾನನು ಕ್ರೈಸ್ತ ಪ್ರಜೆಗಳನ್ನು ಧಾರ್ಮಿಕವಾಗಿ ಚಿತ್ರಹಿಂಸೆಗೆ ಗುರಿಪಡಿಸಿದ್ದನೆಂಬ ಆಪಾದನೆ ಇದ್ದರೂ ಹಿಂದೂ ಪ್ರಜೆಗಳ ಬಗ್ಗೆ ತಳೆದಿರುವ ಅವನ ಧೋರಣೆಯಂತೆ, ಕ್ರೈಸ್ತರ ವಿಚಾರವಾಗಿಯೂ ರಾಜಕೀಯ ಕಾರಣವೇ ಹೊರತು ಧಾರ್ಮಿಕ ಕಾರಣಗಳಾಗಿರಲಿಲ್ಲ.[೮] ೧೭೯೯ರಲ್ಲಿ ಟಿಪ್ಪುಸುಲ್ತಾನ್ ಯುದ್ಧದಲ್ಲಿ ಹತನಾದ ನಂತರ ಕೊಂಕಣಿ ಕ್ರೈಸ್ತರು ಶ್ರೀರಂಗಪಟ್ಟಣ ಬಂಧನದಿಂದ ಬಿಡುಗಡೆಯಾಗಿ ತಾಯ್ನಾಡಿಗೆ ಹಿಂದಿರುಗಿದರು.[೯] ಅದುವರೆಗೆ ಬಿದನೂರು ಮತ್ತು ಮೈಸೂರು ರಾಜ್ಯದ ಕೈಕೆಳಗೆ ಇದ್ದ ಕೆನರಾ ಜಿಲ್ಲೆ ಇಂಗ್ಲೀಷರ ಅಧೀನವಾಯಿತು.[೧೦]

೧೯ನೇ ಶತಮಾನದ ಕೊನೆಯಲ್ಲಿ ಈಸ್ಟ್ ಇಂಡಿಯಾ ಕಂಪೆನಿಯು ಭಾರತದ ಹಲವು ಪ್ರಾಂತ್ಯಗಳನ್ನು ಸ್ವಾಧೀನಪಡಿಸಿಕೊಂಡು ಆಡಳಿತದ ಜವಾಬ್ದಾರಿಯನ್ನು ಹೊತ್ತುಕೊಂಡ ಮೇಲೆ ಅದರ ಧಾರ್ಮಿಕ ನೀತಿಯಲ್ಲಿ ಬದಲಾವಣೆಯಾಯಿತು. ಭಾರತೀಯರ ವಿಶ್ವಾಸಗಳು ಹಾಗೂ ಸಾಂಪ್ರದಾಯಿಕ ಸಂಸ್ಕೃತಿಗಳಲ್ಲಿ ಇಲ್ಲವೇ ಆಚಾರಗಳಲ್ಲಿ ಹಸ್ತಕ್ಷೇಪ ಮಾಡದಿರುವ ಹೊಸ ಧೋರಣೆಯನ್ನು ಹೊಂದಿದ ನಂತರ ಕಂಪೆನಿಯು ಕ್ರೈಸ್ತಧರ್ಮ ಪ್ರಸಾರಣೆಯ ಎಲ್ಲಾ ಬಗೆಯ ಕಾರ್ಯವನ್ನೂ ನಿಷೇಧಿಸಿತು. ೧೮೧೩ರಲ್ಲಿ ಕಂಪೆನಿಯ ಸನ್ನದ್ದಿನ ತಿದ್ದುಪಡಿಯ ಕುರಿತು ಪುನರ್ವಿಮರ್ಶೆಯಾಗುತ್ತಿರುವ ಹಿನ್ನಲೆಯಲ್ಲಿ ಉದಾರವಾದಿಗಳು ಭಾರತದಲ್ಲಿ ಸಾಮಾಜಿಕ ಸುಧಾರಣೆಯಾಗಬೇಕೆಂಬ ಬೇಡಿಕೆಯನ್ನು ಮಂಡಿಸಿದರು. ಸತಿಸಹಗಮನ ಪದ್ಧತಿ, ಹೆಣ್ಣು ಶಿಶುಹತ್ಯೆ, ಜಾತಿಪದ್ಧತಿ ಮುಂತಾದ ಸಾಮಾಜಿಕ ಕೆಡುಕುಗಳ ನಿರ್ಮೂಲನಕ್ಕಾಗಿ ಕ್ರೈಸ್ತಧರ್ಮದ ಅಗತ್ಯತೆಯನ್ನು ಇಂಗ್ಲಿಷರ ಈ ಗುಂಪು ಒತ್ತಿ ಹೇಳಿತು.[೧೧] ೧೯೩೩ರಲ್ಲಿ ಆದ ಶಾಸನ ತಿದ್ದುಪಡಿಯಲ್ಲಿ ಇಂಗ್ಲಿಷ್ ಸಂಘ ಮಾತ್ರವಲ್ಲದೆ ಇತರರೂ ಭಾರತದಲ್ಲಿ ಕ್ರೈಸ್ತ ಸುವಾರ್ತಿಕ ಸೇವೆಯನ್ನು ನಡೆಸಬಹುದೆಂಬ ಅನುಮತಿಯನ್ನು ನೀಡಿದರು.[೧೨] ಅಲ್ಲಿಯವರೆಗೆ ಪ್ರೊತೆಸ್ತಾಂತರ ಎಲ್ಲಾ ಕಾರ್ಯಗಳನ್ನು ಇಂಗ್ಲಿಷ್ ಸೊಸೈಟಿಗಳು, ದಿ ಚರ್ಚ್ ಮಿಷನರಿ ಸೊಸೈಟಿ, ಲಂಡನ್ ಮಿಷನರಿ ಸೊಸೈಟಿ ಮತ್ತು ವೆಸ್ಲಿಯನ್ ಮೆಥೋಡಿಸ್ಸ್ ನಿರ್ವಹಿಸುತ್ತಿತ್ತು, ೧೮೩೪ರ ನಂತರ ಹಲವು ರಾಷ್ಟ್ರಗಳ ಮಿಷನರಿಗಳು ಕಾರ್ಯಕ್ಷೇತ್ರಕ್ಕೆ ಬರತೊಡಗಿ, ವೈವಿಧ್ಯಮಯವಾದ ರೀತಿಯಲ್ಲಿ ಮಿಷನರಿಗಳಾಗಲು ತಮ್ಮ ಪ್ರಯತ್ನಗಳನ್ನು ಪ್ರದರ್ಶಿಸಿದರು. ಹೊಸ

ಯುರೋಪಿಯನ್ ಸೊಸೈಟಿಗಳಲ್ಲಿ ಬಾಸೆಲ್ ಮಿಷನ್ ಸೊಸೈಟಿಯು ಲೂತರನ್ ಮತ್ತು ಸುಧಾರಕ ಅಂಶಗಳನ್ನು ಹೊಂದಿದ್ದು ಭಾರತದಲ್ಲಿ ಜರ್ಮನ್ ಮಿಷನ್ ಸ್ಥಾಪನೆ ಮಾಡಲು ತೀರ್ಮಾನಿಸಿತು.[೧೩] ಐರೋಪ್ಯ ಮಾದರಿಯ ಶಿಕ್ಷಣದ ಮೂಲಕ ಕ್ರೈಸ್ತಧರ್ಮವನ್ನು ಪ್ರಚಾರಮಾಡುವುದು ಮಿಷನರಿಗಳ ಮುಖ್ಯ ಉದ್ದೇಶವಾಗಿತ್ತು. ಶಿಕ್ಷಣವು ಕ್ರೈಸ್ತಧರ್ಮವನ್ನು ಹರಡಲು ಬಳಸಿದ ವಿಧಾನವಾಗಿತ್ತು. ಈ ವಿನ್ಯಾಸವನ್ನು ಕಾರ್ಯಗತಗೊಳಿಸಲು ಅವರು ಪ್ರಾಥಮಿಕ ಶಾಲೆಗಳನ್ನು ತೆರೆಯುವುದರೊಂದಿಗೆ ಭಾರತೀಯ ಭಾಷೆಗಳನ್ನು ಕಲಿತು, ಕ್ರಿಸ್ತನ ಭೋಧನೆಗಳನ್ನು ಭೋಧಿಸಿ, ಬೈಬಲನ್ನು ದೇಶೀಯ ಭಾಷೆಗಳಿಗೆ ತರ್ಜುಮೆ ಮಾಡಿದರು. ಆದರೆ ನಂತರದಲ್ಲಿ ಕಂಪೆನಿ ತನ್ನ ರಾಜಕೀಯ ಹಿತಾಸಕ್ತಿಗಳಿಗಾಗಿ ಧಾರ್ಮಿಕ ತಟಸ್ಥತೆಯನ್ನು ಕಾಯ್ದುಕೊಂಡಿತು.[೧೪] ಕ್ರೈಸ್ತ ಮತೇತರರಿಗೆ ಕ್ರಿಸ್ತನ ಭೋಧನೆಗಳನ್ನು ಭೋಧಿಸಲು ಮಿಷನರಿಗಳು ಹತಾಶೆಗೊಳಪಡುತ್ತಿದ್ದರು. ಮಿಷನರಿಗಳ ಪ್ರಕಾರ ಕ್ರೈಸ್ತಧರ್ಮೇತರರು ಆಧ್ಯಾತ್ಮಿಕ ಸುಖಕ್ಕಿಂತ ಹೆಚ್ಚಾಗಿ ದೈಹಿಕ ಅಗತ್ಯಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡುತ್ತಿದ್ದು, ಸುವಾರ್ತೆ ಸಾರುವಾಗ ಬಡಜನರು ಅದನ್ನು ಸಂತೋಷದಿಂದ ಸ್ವೀಕರಿಸಿದರೆ ಮೇಲ್ವರ್ಗದವರು ಅಂತರವನ್ನು ಕಾಯ್ದು ಕೊಂಡಿರುವ ಮಾಹಿತಿ ಮಿಷನರಿಗಳ ವರದಿಗಳಲ್ಲಿ ಕಂಡುಬರುತ್ತದೆ.[೧೫]

ಭಾರತದಲ್ಲಿ ಸ್ತ್ರೀಯರಿಗೆ ಶಿಕ್ಷಣ ನೀಡಲು ಮಾಡಿರುವ ಪ್ರಯತ್ನಗಳಲ್ಲಿ ವಾಸಸ್ಥಾನ ಭೋಧನೆಯೂ ಒಂದಾಗಿದೆ. ೧೮೮೬-೮೭ರಲ್ಲಿ ಮದ್ರಾಸ್ ಕಲೆಕ್ಟರ್ ತನ್ನ ವರದಿಯಲ್ಲಿ 'ವಾಸಸ್ಥಾನ ಬೋಧನೆ ಭಾರತ ದೇಶದ ಮಹಿಳೆಯರ ಏಳಿಗೆಗೆ ಸ್ತುತ್ಯವಾಗಿದೆ. ಹೆಚ್ಚಿನ ಉನ್ನತ ವರ್ಗಗಳಲ್ಲಿ ಹೆಣ್ಣು ಮಕ್ಕಳು ಶಿಕ್ಷಣದಿಂದ ವಂಚಿತರಾಗುತ್ತಿದ್ದು, ಈ ನಿಟ್ಟಿನಲ್ಲಿ ಬಾಲ್ಯವಿವಾಹ ಕೂಡಾ ಇದಕ್ಕೆ ಕಾರಣವಾಗಿದೆ. ವಾಸಸ್ಥಾನ ಭೋಧನೆ ಸ್ತ್ರೀಯರಿಗೆ ಉನ್ನತ ಶಿಕ್ಷಣಕ್ಕೆ ಅವಕಾಶ ನೀಡದಿದ್ದರೂ, ಅವರನ್ನು ಶಿಕ್ಷಿತರನ್ನಾಗಿಸಬಹುದು. ಮಾತ್ರವಲ್ಲದೆ ಹೆಣ್ಮಕ್ಕಳಿಗೆ ಕಲಿತ ವಿದ್ಯೆಯನ್ನು ಮನಸ್ಸಿನಲ್ಲಿಟ್ಟು ಕರಗತ ಮಾಡಲು ಸಹಾಯಕವಾಗುವುದು' ಎಂದು ಅಭಿಪ್ರಾಯ ಪಟ್ಟಿದ್ದಾರೆ.

೧೮೪೦ರಲ್ಲಿ ರೆವೆ.ಟಿ ಸ್ಮಿತ್ ರವರು ಸಮಾಜದ ಉನ್ನತ ವರ್ಗದವರಿಗಾಗಿ ವಾಸಸ್ಥಾನ ಭೋಧನೆ (ZENANA TEACHING) ಕುರಿತು ಪ್ರಸಾಪ ಮಾಡಿದರೂ, ಪ್ರಾಯೋಗಿಕವಾಗಿ ಅದು ಜಾರಿಗೆ ಬಂದಿರಲಿಲ್ಲ. ಈ ನಿಟ್ಟಿನಲ್ಲಿ ೧೮೮೫ರಲ್ಲಿ ರೆವೆ. ಜೆ. ಫೋರ್ಡೈಸ್ ರವರು ಸ್ಮಿತ್ ರವರ ಜೊತೆ ಸೇರಿ ಬಂಗಾಳದ ಜ್ಞಾನಿಗಳಾದ ಬಾಬೂಗಳ ಒಪ್ಪಿಗೆ ಪಡೆದರು. ಹೀಗೆ ಐರೋಪ್ಯ ಬೋಧಕಿ ಹಾಗೂ ಒಬ್ಬ ದೇಶೀಯ ಸಹಾಯಕಳೊಂದಿಗೆ ವಾಸಸ್ಥಾನ ಭೋಧನೆಗೆ ಚಾಲನೆ ನೀಡಿದರು. ಇದಕ್ಕೆ ಧನಾತ್ಮಕವಾದ ಪ್ರತಿಕ್ರಿಯೆ ಬಂದಾಗ ಮಿಷನರಿ ಮಹಿಳೆಯರು ಈ ಸೇವೆಯನ್ನು ಮುಂದುವರಿಸಿದರು. ಉದಾಹರಣೆಗೆ ಶ್ರೀಮತಿ ಸೇಲ್ ಮತ್ತು ಶ್ರೀಮತಿ ಮುಲ್ಲೆನ್ಸ್ ಇವರು ಪ್ರಾರಂಭದಲ್ಲಿ ಬೋಧನಾ ಕಾರ್ಯ ಕೈಗೊಂಡರು. ೧೮೮೧ರ ಪ್ರೊತೆಸ್ತಾಂತ ಮಿಷನರಿ ಜನಗಣತಿಯ ಪ್ರಕಾರ, ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ೨೦೨೯ ಮನೆಗಳನ್ನು ಹಾಗೂ ೧೯೨೦ ಮಂದಿ

ವಿದ್ಯಾರ್ಥಿಯರನ್ನು ಮಿಷನರಿ ಮಹಿಳೆಯರು ಭೇಟಿಯಾಗಿದ್ದರು ಎಂಬುದು ದಾಖಲಾಗಿದೆ. ಮೈಲ್ಡ್ ಮೇ ಸಮ್ಮೇಳನದಲ್ಲಿ ರವೆ. ಜೆ. ಯಿ. ಪಾಯ್ನೆಯವರು ತಿಳಿಸುವಂತೆ 'ಭಾರತಕ್ಕೆ ಹೋಗುವ ಮಿಷನರಿಗಳೆಲ್ಲರೂ ಮೊದಲ ಮತ್ತು ದ್ವಿತೀಯ ವರ್ಷದ ಕೊನೆಯಲ್ಲಿ ಭಾರತದ ಭಾಷೆಗಳ ಕುರಿತು ಪರೀಕ್ಷೆಗೆ ತಯಾರಿ ನಡೆಸಬೇಕು. ಎಲ್ಲಾ ಘಟಕದ ಮಿಷನರಿಗಳನ್ನು ಪರೀಕ್ಷಿಸಿ ಅನುತ್ತೀರ್ಣರಾದವರನ್ನು ಹಿಂದಕ್ಕೆ ಬರಹೇಳಲಾಗುವುದು' ಎಂಬ ಹೇಳಿಕೆಯಿಂದ ಮಿಷನರಿಗಳಿಗೆ ತಮ್ಮ ಕಾರ್ಯಗಳಲ್ಲಿ ಯಶಸ್ವಿ ಪಡೆಯಲು ಭಾಷೆಯೂ ಮುಖ್ಯವಾದ ಮಾನದಂಡವಾಗಿತ್ತು ಎಂಬುವುದು ಸ್ಪಷ್ಟವಾಗುತ್ತದೆ. ೧೮೮೨ರಲ್ಲಿ ಭಾರತದಲ್ಲಿ ತರಬೇತಿ ನೀಡಲು ಬರುವ ವಿದೇಶಿ ಮಹಿಳೆಯರಿಗಾಗಿ ಲೇಡೀಸ್ ಮಿಷನರಿ ಕಾನ್ಫರೆನ್ಸ್ ಮೂಲಕ ಒಂದು ಕಮಿಟಿಯನ್ನು ಸ್ಥಾಪಿಸಿ ವಾಸಸ್ಥಾನ ಬೋಧಕರು ಮತ್ತು ಬೈಬಲ್ ವಿಮೆನ್ ಇವರಿಗೆ ಕೆಲವು ಅರ್ಹತೆಗಳನ್ನು ನಿಗದಿಪಡಿಸಲಾಯಿತು.[೧೬]

## ೩.೧ ಬ್ರಿಟಿಷ್ ಆಡಳಿತದಲ್ಲಿ ಬಾಸೆಲ್ ಮಿಷನ್ ಮತ್ತು ರೋಮನ್ ಕ್ಯಾಥೋಲಿಕರ ಶೈಕ್ಷಣಿಕ ಚಟುವಟಿಕೆಗಳು

ಭಾರತದಲ್ಲಿ ಬ್ರಿಟಿಷ್ ಆಡಳಿತ ಹೊಸ ಪ್ರದೇಶಗಳಿಗೆ ವಿಸ್ತರಿಸಲ್ಪಟ್ಟ ಕಾರಣ, ಹೊಸಬಗೆಯ ಸಮಸ್ಯೆಗಳು, ನಿರೀಕ್ಷೆಗಳು, ಅನುಭವಗಳು ಮತ್ತು ಹೊಸ ಆಲೋಚನೆಗಳು ಹತ್ತೊಂಭತ್ತನೆಯ ಶತಮಾನದ ಆಡಳಿತದಲ್ಲಿ ಮೂಲಭೂತ ಬದಲಾವಣೆಗಳಿಗೆ ದಾರಿ ಮಾಡಿಕೊಟ್ಟವು. ಆದರೆ, ಬ್ರಿಟಿಷರು ಮುಖ್ಯವಾದ ಸಾರ್ವಭೌಮತೆಯ ಉದ್ದೇಶಗಳನ್ನು ಮಾತ್ರ ಮರೆಯಲಿಲ್ಲ.[೧೭] ೧೮೧೩ರಲ್ಲಿ ಬ್ರಿಟಿಷ್ ಪಾರ್ಲಿಮೆಂಟ್, ಈಸ್ಟ್ ಇಂಡಿಯಾ ಕಂಪೆನಿಯ ಶೈಕ್ಷಣಿಕ ನೀತಿಯಲ್ಲಿ ಭಾರತದ ಶಿಕ್ಷಣಕ್ಕೆ ಸಂಬಂಧಿಸಿದಂತೆ ಪ್ರಮುಖ ಅಂಶಗಳನ್ನು ರೂಪಿಸಿತು. [೧೮] ಲಾರ್ಡ್ ಮೆಕಾಲೆಯ ಶಿಕ್ಷಣ ವರದಿಯನ್ನಾಧರಿಸಿ ಲಾರ್ಡ್ ವಿಲಿಯಂ ಬೆಂಟಿಕನು ಆಧುನಿಕ ಶಿಕ್ಷಣವನ್ನು ಭಾರತದಲ್ಲಿ ಜಾರಿಗೆ ತಂದನು.

ಲಾಭ ಮಾಡುವ ಉದ್ದೇಶದ ವ್ಯಾಪಾರಿ ಸಂಸ್ಥೆಯಾದ ಬ್ರಿಟಿಷ್ ಇಂಡಿಯಾ ಕಂಪೆನಿಯು, ತನ್ನ ಆಳ್ವಿಕೆಯ ಮೊದಲ ಅರವತ್ತು ವರ್ಷಗಳಲ್ಲಿ ತನ್ನ ಪ್ರಜೆಗಳ ಶಿಕ್ಷಣದ ವಿಷಯದಲ್ಲಿ ಯಾವುದೇ ಆಸಕ್ತಿ ವಹಿಸಲಿಲ್ಲ. ಆದರೆ ಮಿಷನರಿಗಳು ಆಧುನಿಕ ಶಿಕ್ಷಣವು ಜನರಲ್ಲಿ ಅವರ ಧರ್ಮದ ಬಗೆಗಿರುವ ಶ್ರದ್ಧೆಯನ್ನು ನಾಶಗೊಳಿಸಿ, ಅವರನ್ನು ಕ್ರೈಸ್ತ ಧರ್ಮದತ್ತ ಆಕರ್ಷಿಸುತ್ತದೆ ಎಂದು ನಂಬಿದ್ದರು. ಪಾಶ್ಚಿಮಾತ್ಯ ಶಿಕ್ಷಣವನ್ನು ವಿಸ್ತರಿಸಬೇಕು ಎಂಬುವವರಲ್ಲಿ ಆಧುನಿಕ ಶಾಲೆಗಳು ಮತ್ತು ಕಾಲೇಜುಗಳಲ್ಲಿ ಯಾವ ಭಾಷಾ ಮಾಧ್ಯಮದಲ್ಲಿ ಬೋಧಿಸಬೇಕು ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯ ಕಾಣಿಸಿಕೊಂಡಾಗ ಗವರ್ನರ್ ಜನರಲ್ ಸಲಹಾ ಮಂಡಳಿಯ ಕಾನೂನು ಸದಸ್ಯನಾಗಿದ್ದ ಲಾರ್ಡ್ ಮೆಕಾಲೆಯು ಭಾರತೀಯ ಭಾಷೆಗಳು ತಮ್ಮ ಉದ್ದೇಶವನ್ನು ಸಫಲಗೊಳಿಸುವಷ್ಟರ ಮಟ್ಟಿಗೆ ಬೆಳೆದಿಲ್ಲ ಮತ್ತು 'ಪ್ರಾಚ್ಯ ವಿದ್ಯೆಯು ಯುರೋಪಿನ ವಿದ್ಯೆಗಿಂತ ಕೆಳಮಟ್ಟದ್ದು'

ಎಂದು ವಾದಿಸಿದ. ಭಾರತ ಸರಕಾರವು ೧೮೩೫ರ ನಿರ್ಧಾರದ ಮೇಲೆ, ತಕ್ಷಣ ಕಾರ್ಯಪ್ರವೃತ್ತವಾಗಿ ಬಂಗಾಳದಲ್ಲಿ ಶಾಲಾ, ಕಾಲೇಜುಗಳಲ್ಲಿ ಇಂಗ್ಲಿಷನ್ನು ಶಿಕ್ಷಣವನ್ನು ಮಾಧ್ಯಮವನ್ನಾಗಿ ಮಾಡಿತು.[೧೯] ಭಾರತದಲ್ಲಿ ಬ್ರಿಟಿಷರು ಇಂಗ್ಲಿಷ್ ಶಿಕ್ಷಣ ಜಾರಿಗೆ ತರಲು ಬಹಳ ಮುಖ್ಯವಾದ ಕಾರಣವೆಂದರೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಗೆ ಗುಮಾಸ್ತರ ಬೇಡಿಕೆ.[೨೦] ೧೭೯೨ರಲ್ಲಿ ಚಾರ್ಲ್ಸ್ ಗ್ರ್ಯಾಂಟ್ಸ್ ಪ್ರಕಟಿಸಿದ 'ಅಬ್ಸರ್ವೇಶನ್ ಆನ್ ದಿ ಸ್ಟೇಟ್ ಆಫ್ ಸೊಸೈಟಿ ಅಮಾಂಗ್ ದಿ ಏಸಿಯಾಟಿಕ್ ಸಬ್ಜೆಕ್ಟ್ಸ್ ಆಫ್ ಗ್ರೇಟ್ ಬ್ರಿಟನ್' ಎಂಬ ಕರಪತ್ರದಲ್ಲಿ 'ಬೆಳಕಿನ ಪರಿಚಯದಿಂದ ಅಂಧಕಾರ ಕಳೆಯಲು ಸಾಧ್ಯ. ಹಿಂದೂಗಳು ಅಜ್ಞಾನಿಗಳಾಗಿರುವುದರಿಂದ ಅವರು ತಪ್ಪು ಎಸಗುತ್ತಿದ್ದಾರೆ' ಎಂದಿದ್ದಾನೆ. ಭಾರತೀಯರ ಸುಧಾರಣೆಗಳಿಗೆ ಸಲಹೆಗಳನ್ನು ನೀಡಿದ ಈತ ಇಂಗ್ಲಿಷ್ ಮಾಧ್ಯಮದ ಶಿಕ್ಷಣದಿಂದ ಮಾತ್ರ ಅಜ್ಞಾನ ಮತ್ತು ಮೂಢನಂಬಿಕೆಯನ್ನು ಹೋಗಲಾಡಿಸಬಹುದು. ಕ್ರೈಸ್ತಧರ್ಮದ ತತ್ವಗಳು ಮತ್ತು ಶಿಕ್ಷಣ ಮಾತ್ರವೇ ಭಾರತೀಯರ ಕುಸಿದ ನೈತಿಕತೆಯನ್ನು ಅಭಿವೃದ್ಧಿ ಪಡಿಸಲು ಸಾಧ್ಯ ಎಂದಿದ್ದಾನೆ.[೨೧]

೧೮೫೦ರಲ್ಲಿ ಜೆ.ಇ.ಡಿ ಬೆಥೂನ್ ರವರು ಮಾರ್ಕ್ವಿಸ್ ಡಾಲ್‌ಹೌಸಿಗೆ ಬರೆದ ಪತ್ರದಲ್ಲಿ ಉಲ್ಲೇಖಿಸಿದಂತೆ 'ಮಿಷನರಿ ಶಾಲೆಗಳಿಗೆ ಗೌರವಾನ್ವಿತ ಸ್ಥಳೀಯರು ತಮ್ಮ ಮಕ್ಕಳನ್ನು ಕಳುಹಿಸಲು ಇರುವ ಹಿಂಜರಿಕೆ, ಎಲ್ಲಾ ಪ್ರಯತ್ನಗಳನ್ನು ವಿಫಲಗೊಳಿಸಿವೆ. ಅದಕ್ಕಾಗಿ ದೃಢನಿಶ್ಚಯದಿಂದ ಸ್ಥಾಪಿತವಾದ ಸರಕಾರಿ ಶಾಲೆಗಳಿಗೆ ದೇಶದೆಲ್ಲೆಡೆ ಒಳ್ಳೆಯ ಪ್ರತಿಕ್ರಿಯೆ ಕಂಡು ಬಂದಿರುತ್ತದೆ'. ಕಲ್ಕತ್ತಾದಲ್ಲಿ ತನ್ನ ನೇತೃತ್ವದಲ್ಲಿ ಸ್ಥಾಪಿತವಾದ ಶಾಲೆಗಳು ಧಾರ್ಮಿಕ ಭೋಧನೆಗಳಿಂದ ಹೊರತಾಗಿದೆ' ಎಂದು ತನ್ನ ಅನುಭವವನ್ನು ತೆರೆದಿಡುತ್ತಾರೆ.[೨೨] ಭಾರತದ ಗವರ್ನರ್ ಜನರಲ್ ಆಗಿದ್ದ ಡಾಲ್‌ಹೌಸಿಯ ಅಭಿಪ್ರಾಯದಂತೆ 'ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡದೆ ಯಾವುದೇ ಬದಲಾವಣೆ ಸಾಧ್ಯವಿಲ್ಲ, ಮಹಿಳೆಯರನ್ನು ಅಂಧಕಾರದಲ್ಲಿಡುವುದು ಸಾಮಾನ್ಯವಾದ ಅಭ್ಯಾಸ ಕ್ರಮವಾಗಿದ್ದು ಇದನ್ನು ಅವರ ಧರ್ಮದಲ್ಲಿ ಅನುಮೋದಿಸಲಾಗಿಲ್ಲ. ಆದರೆ, ಶಿಕ್ಷಣದ ಖರ್ಚು ಭರಿಸಲು ಸಾಧ್ಯವಿದ್ದವರು ತಮ್ಮ ಮನೆಗಳಲ್ಲಿಯೇ ವಿಶೇಷ ತರಬೇತಿದಾರರನ್ನು ನೇಮಿಸಿ ಶಿಕ್ಷಣ ನೀಡುತ್ತಿದ್ದಾರೆ.

ಇದೊಂದು ಅಪ್ರಾಯೋಗಿಕವಾದ ವಿದ್ಯಾಭ್ಯಾಸ ಕ್ರಮವಾಗಿದ್ದು ಗವರ್ನರ್ ಜನರಲ್ ಪ್ರಕಾರ ಭಾರತದ ಸಾಮಾಜಿಕ ವ್ಯವಸ್ಥೆಯಂತೆ ನಿಕಟವಾದ ಏಕಾಂತತೆಯನ್ನು ಕಾಯ್ದುಕೊಂಡು ಬಾಲಕಿಯರ ಶಿಕ್ಷಣ ಸಂಸ್ಥೆಗಳನ್ನು ತೆರೆಯಬಹುದು. ಪ್ರಾಯೋಗಿಕವಾಗಿ ಬೆತೂನ್ ಅವರಿಂದ ಬಂಗಾಳದಲ್ಲಿ ಸ್ಥಾಪಿಸಲ್ಪಟ್ಟ ಶಾಲೆಗಳಿಗೆ ಪ್ರೋತ್ಸಾಹದಾಯಕ ಪ್ರತಿಕ್ರಿಯೆಗಳು ಕಂಡುಬಂದಿರುವುದರಿಂದ ದೇಶದ ಎಲ್ಲೆಡೆಯಲ್ಲೂ ಬಾಲಕಿಯರ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಬಹುದು' ಎಂಬುದಾಗಿದೆ. ೧೮೫೪ರ ವುಡ್ಸ್ ನಮೂದು ಭಾರತದಲ್ಲಿ ಶಿಕ್ಷಣದ ಅಭಿವೃದ್ಧಿಗೆ ತೆಗೆದುಕೊಂಡ ಮತ್ತೊಂದು ಹೆಜ್ಜೆ. ಈ ನಮೂದು ಭಾರತ ಸರಕಾರದ ಜನಸಮೂಹದ ವಿದ್ಯಾಭ್ಯಾಸದ ಜವಾಬ್ದಾರಿಯನ್ನು ವಹಿಸಿಕೊಳ್ಳುವಂತೆ ಸೂಚಿಸಿತು. ೧೮೫೪ರ ಚಾರ್ಲ್ಸ್ ವುಡ್ಸ್ ವರದಿಯ

ಅನ್ವಯ ಸ್ತ್ರೀ ಶಿಕ್ಷಣಕ್ಕೆ ಒತ್ತು ನೀಡಿ, ಪ್ರಾಥಮಿಕ ಶಿಕ್ಷಣ, ಆಂಗ್ಲೋವರ್ನಾಕ್ಯುಲರ್ ಪ್ರೌಢಶಾಲೆಗಳು ಮತ್ತು ಕಾಲೇಜುಗಳನ್ನು ಜಿಲ್ಲಾಮಟ್ಟದಲ್ಲಿ ಸ್ಥಾಪಿಸಲಾಯಿತು. ಭಾರತದಲ್ಲಿ ಲಂಡನ್ ಮಾದರಿಯಲ್ಲಿ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಬೇಕೆಂಬ ನಿಲುವು ಕೂಡಾ ಇದರದಾಗಿತ್ತು. ಅದೇ ರೀತಿ ಡೈರೆಕ್ಟರ್ ಜನರಲ್ ನೇತೃತ್ವದಲ್ಲಿ ಶಿಕ್ಷಣ ಇಲಾಖೆಯನ್ನು ಸ್ಥಾಪಿಸಲು ಸೂಚಿಸಲಾಯಿತು. ಕಲ್ಕತ್ತ, ಬೊಂಬೈ ಮತ್ತು ಮದ್ರಾಸ್ ಪ್ರೆಸಿಡೆನ್ಸಿಗಳಲ್ಲಿ ವಿಶ್ವವಿದ್ಯಾಲಯಗಳ ಸ್ಥಾಪನೆಯನ್ನು ಪ್ರಸ್ತಾಪಿಸಿತು.[೨೩]

೧೮೭೧ರ ಜನಗಣತಿಯ ವರದಿಯಲ್ಲಿ ಕಂಡುಬರುವಂತೆ, 'ಭಾರತದಲ್ಲಿ ಸ್ತ್ರೀ ಶಿಕ್ಷಣವೆಂಬುವುದು ಇತ್ತೀಚೆಗಿನ ಬೆಳವಣಿಗೆಯಾಗಿದ್ದು, ಮಿಷನರಿಗಳ ಪ್ರಭಾವದಿಂದ ಉಂಟಾದ ಜಾಗೃತಿಯಾದುದರಿಂದ ಭಾರತೀಯ ಸಂಪ್ರದಾಯಕ್ಕೆ ಹೊರತಾಗಿದೆ. ಮಹಿಳೆಯು, ಗೃಹಿಣಿ ಕರ್ತವ್ಯವನ್ನು ನಿರ್ವಹಿಸಬೇಕೇ ಹೊರತು ವೈದಿಕಜ್ಞಾನದಿಂದ ದೂರವಿರಬೇಕು, ಮಹಿಳೆಯರಿಗೆ ಶಿಕ್ಷಣ ನೀಡುವುದೆಂದರೆ ಜನರ ಸಾಂಸಾರಿಕ ಜೀವನದಲ್ಲಿ ಕ್ರಾಂತಿಯೇ ಸರಿ' ಎಂಬ ನಂಬಿಕೆಯ ನ್ಯೂನ್ಯತೆಯನ್ನು ಅರ್ಥೈಸಿಕೊಂಡ ಸ್ತ್ರೀ ಶಿಕ್ಷಣದ ಪ್ರತಿಪಾದಕರು, ಶಿಕ್ಷಣದ ಕುರಿತಂತೆ ಉತ್ತಮ ಫಲಿತಾಂಶ ದೊರೆಯಲು ಜ್ಞಾನದ ದಾಹ ಮಹಿಳೆಯರಲ್ಲಿಯೇ ಪ್ರಾರಂಭವಾಗಬೇಕು ಹಾಗೂ ಕುಟುಂಬದಲ್ಲಿ ಸ್ತ್ರೀ ಶಿಕ್ಷಣದ ಬಗ್ಗೆ ಜಾಗೃತಿ ಮೂಡದಿದ್ದರೆ ಬದಲಾವಣೆ ಸಾಧ್ಯವಿಲ್ಲ ಎಂದು ಅಭಿಪ್ರಾಯ ಪಟ್ಟರು.

ಕೇವಲ ಪಾಕಶಾಲೆಗಷ್ಟೇ ಸೀಮಿತವಾಗಿದ್ದ ಮಹಿಳೆ, ಹೆಚ್ಚು ಕಾಳಜಿಯುಕ್ತ ಕೆಲಸಗಳಿಗೆ ಆಕೆ ಯಾವುದೇ ಪ್ರತಿಧ್ವನಿ ನೀಡುವಂತಿರಲಿಲ್ಲ.[೨೪] ಮಾತ್ರವಲ್ಲದೆ, ಬಾಲ್ಯವಿವಾಹ ಸಾರ್ವತ್ರಿಕವಾಗಿದ್ದು, ಸ್ತ್ರೀ ಶಿಕ್ಷಣವೆಂದರೆ ಮಹಿಳೆಯ ಗೃಹಕೃತ್ಯದ ಜೀವನದಲ್ಲಿ ಮಾರ್ಪಾಡೇ ಆಗಿದೆ. ಈ ನಿಟ್ಟಿನಲ್ಲಿ ಏನಾದರೂ, ಸಾಧಿಸಬೇಕಾದರೆ ಮಹಿಳೆಯರಲ್ಲಿ ಸ್ತ್ರೀ ಶಿಕ್ಷಣದ ಕುರಿತು ಜಾಗೃತಿ ಮೂಡಬೇಕು. ಮಹಿಳೆ ಬದಲಾವಣೆ ಬಯಸದಿದ್ದರೆ ಪುರುಷರಿಗೆ ಸರಿಸಮಾನಳಾಗಿ ಪರಿಗಣಿಸಲು ಸಾಧ್ಯವಿಲ್ಲ ಎಂದು ಪ್ರತಿಪಾದಿಸಿದರೂ ಪೂರ್ವಕಾಲದ ಸಂಪ್ರದಾಯಗಳಲ್ಲಿ ತಕ್ಷಣದ ಬದಲಾವಣೆಯ ತೊಂದರೆಯನ್ನು ಮನಗಂಡರು.[೨೫] ೧೮೮೨ರ ಹಂಟರ್ ಕಮಿಷನ್ ಕೂಡಾ ಪ್ರಾಥಮಿಕ ಶಿಕ್ಷಣಕ್ಕೆ ಮನ್ನಣೆ ನೀಡಿತು. ಆದರೆ ಪ್ರಾಥಮಿಕ ಹಂತದಲ್ಲಿ ನಿರೀಕ್ಷಿದಷ್ಟು ಮಹಿಳೆಯರಿಗೆ ಶಿಕ್ಷಣ ನೀಡಲು ಸಾಧ್ಯವಾಗಲಿಲ್ಲ. ಪಾಶ್ಚಾತ್ಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ಮೊದಲ ಪ್ರಯತ್ನ ಮಿಷನರಿಗಳಿಂದ ಪ್ರಾರಂಭವಾಯಿತು.

ಮೊದಮೊದಲಿಗೆ ಬಾಲಕರಿಗಾಗಿ ಸ್ಥಾಪಿತವಾದ ಶಾಲೆಗಳು, ಬಾಲಕರ ಪ್ರಗತಿಯ ಅವಕಾಶಗಳನ್ನು ಹೆಚ್ಚಾಗಿಸುವ ಅಭಿಪ್ರಾಯವನ್ನಷ್ಟೇ ಹೊಂದಿದ್ದವು. ಬಾಲಕರ ಶೈಕ್ಷಣಿಕ ಪ್ರಗತಿಯಾಗುತಿದ್ದಂತೆ ವಿದ್ಯಾವಂತ ವಧುಗಳಿಗಾಗಿ ಬೇಡಿಕೆಯೂ ಹೆಚ್ಚಿತು. ಸಾಮಾಜಿಕ ಸುಧಾರಣೆಯ ಬೆಂಬಲಿಗರು ಈ ಸದವಕಾಶವನ್ನು ಮನಗಂಡು ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ನೀಡಿದರು. ಪಾಶ್ಚಾತ್ಯ ಶಿಕ್ಷಣ ಪಡೆದ ಹಲವು ಬಂಗಾಲಿ ತರುಣರು ತಮ್ಮ ಹೆಂಡತಿಯರನ್ನೂ, ಹೆಣ್ಣು ಮಕ್ಕಳನ್ನೂ ಕಠಿಣವಾದ ಕೌಟುಂಬಿಕ ನಿರ್ಬಂಧಗಳಿಂದ

ಬಿಡುಗಡೆಗೊಳಿಸಿದರು. ಮಹಿಳೆಯರ ಪ್ರವೇಶ ಅಸಂಸ್ಕೃತವೆಂದೂ, ಅಸಭ್ಯವೆಂದೂ ಈವರೆಗೆ ಉನ್ನತ ಕುಟುಂಬಗಳಲ್ಲಿ ಪರಿಗಣಿತವಾಗಿದ್ದ ಅನೇಕ ಜನಪ್ರಿಯ ಸಂಸ್ಕೃತಿ ಪ್ರಸಂಗಗಳಲ್ಲಿ ಪ್ರವೇಶ ಪಡೆಯುವುದು ಮಹಿಳೆಯರಿಗೆ ಸಾಧ್ಯವಾಯಿತು. ಇದರಿಂದ ಈ 'ಕಲಿತ ಹೊಸ ಹೆಣ್ಣು ಹಾಗೆಯೇ ಕಲಿಯದ ಉಳಿದ ಹೆಣ್ಣು' ಇವರ ನಡುವೆ ಒಂದು ಸಾಮಾಜಿಕ ಅಂತರವೇ ನಿರ್ಮಾಣವಾಗತೊಡಗಿತು.[೨೬]

ಆದರೂ ದೇಶೀಯರು ತಮ್ಮ ಹೆಣ್ಣುಮಕ್ಕಳ ಶಿಕ್ಷಣದ ಕುರಿತಂತೆ ನಿರಾಸಕ್ತಿ ವಹಿಸುತ್ತಿರುವ ವಿಷಯ ಹಾಗೂ ಮಹಿಳೆಯ ಹೀನಾಯದ ಸ್ಥಿತಿಗಳು ಇಂಗ್ಲೆಂಡಿನ ಗಮನ ಸೆಳೆಯಿತು.[೨೭] ಮದ್ರಾಸಿನ ಮೊದಲ ಗವರ್ನರ್ ಆಗಿದ್ದ ಥೋಮಸ್ ಮುನ್ರೊ ಮದ್ರಾಸ್ ಪ್ರೆಸಿಡೆನ್ಸಿಯ ಶೈಕ್ಷಣಿಕ ಸ್ಥಿತಿಗತಿಯ ಕುರಿತು ವಿಚಾರಣೆ ಕೈಗೊಂಡನು. ಆ ಸಂದರ್ಭ, ಸರಕಾರದ ವರ್ತನೆ ಮತ್ತು ಜನರ ಬಡತನವೇ ಶಿಕ್ಷಣ ಪದ್ಧತಿಯ ವಿಫಲತೆಗೆ ಕಾರಣವೆಂದು ತಿಳಿದು, ಈಗಾಗಲೇ ಅಸ್ತಿತ್ವದಲ್ಲಿದ್ದ ಶಿಕ್ಷಣ ಸಂಸ್ಥೆಗಳಿಗೆ ಹಣಕಾಸಿನ ನೆರವು ನೀಡಲು ಮತ್ತು ಹೊಸ ಶಿಕ್ಷಣ ಸಂಸ್ಥೆಗಳನ್ನು ತೆರೆಯಲು ತೀರ್ಮಾನಿಸಿದನು. ೧೮೨೬ರಲ್ಲಿ ಮಿನ್ಯೂಟ್ಸ್ (Minutes) ಹೊರಡಿಸಿ ಆ ಮೂಲಕ ಶಾಲೆಗಳಿಗೆ ಪಠ್ಯಪುಸ್ತಕಗಳ ಮುದ್ರಣ ಮತ್ತು ಶಿಕ್ಷಕರಿಗೆ ತರಬೇತಿ ನೀಡುವ ಕುರಿತು ಪ್ರಸ್ತಾಪಿಸಲಾಯಿತು.

ಮದ್ರಾಸ್ ಪ್ರೆಸಿಡೆನ್ಸಿಯ ಇಪ್ಪತ್ತು ಜಿಲ್ಲೆಗಳಲ್ಲಿ ಉನ್ನತ ಶ್ರೇಣಿಯ ತಲಾ ಎರಡು ಶಾಲೆಗಳನ್ನು ಒಂದು ಹಿಂದೂಗಳಿಗೆ ಮತ್ತು ಒಂದು ಮುಸಲ್ಮಾನರಿಗೆ) ತೆರೆಯಲು ಒತ್ತಾಯಿಸಿದನು. ಈ ಯೋಜನೆಯು ಪ್ರೆಸಿಡೆನ್ಸಿಯ ಮುನ್ನೂರು ಉಪವಿಭಾಗಗಳಲ್ಲಿ (Tehsil) ಹಿಂದೂಗಳಿಗೆ ದೇಶೀಯ ಶಾಲೆ ಸ್ಥಾಪಿಸುವುದನ್ನೂ ಒಳಗೊಂಡಿತ್ತು. ಇದರ ಸಾಕಾರಕ್ಕಾಗಿ ಕೋರ್ಟ್ ಆಫ್ ಡೈರೆಕ್ಟರ್ಸ್ ಇವರನ್ನು ಸಮೀಪಿಸಿ ರೂಪಾಯಿ ೪೮,೦೦೦ರಷ್ಟು ವಾರ್ಷಿಕ ಅನುದಾನದ ಮನವಿಯನ್ನಿತ್ತನು. ಆದರೆ ೧೮೨೮ರಲ್ಲಿ ಅನುದಾನ ಬಿಡುಗಡೆಯಾದಾಗ ಮುನ್ರೋ ಮರಣಿಸಿದ್ದನು. ಆದುದರಿಂದ ದುರಾದೃಷ್ಟವಶಾತ್ ಈ ಯೋಜನೆ ಸಾಕಾರಗೊಳ್ಳಲಿಲ್ಲ.[೨೮] ಬ್ರಿಟಿಷರ ನಿಯಂತ್ರಣದಲ್ಲಿದ್ದ ಜಿಲ್ಲೆಯಲ್ಲಿ, ನಂತರ ಅರ್ಧಶತಮಾನದವರೆಗೆ ಹಿಂದಿನ ವ್ಯವಸ್ಥೆಯೇ ವಿದ್ಯಾಕ್ಷೇತ್ರದಲ್ಲಿ ಮುಂದುವರಿಯಿತು.

ಬಾಸೆಲ್ ಮಿಷನರಿಗಳು ಮಂಗಳೂರಿಗೆ ಆಗಮಿಸಿದ ಪ್ರಾರಂಭದಲ್ಲಿ ಕನ್ನಡ ಮಾಧ್ಯಮ ಹಾಗೂ ನಂತರದಲ್ಲಿ ಇಂಗ್ಲಿಷ್ ಮಾಧ್ಯಮಗಳ ಶಾಲೆಗಳನ್ನು ತೆರೆದು ಆಧುನಿಕ ವಿದ್ಯಾಭ್ಯಾಸಕ್ಕೆ ಅಸ್ತಿವಾರವನ್ನೇ ಹಾಕಿದರು. ವಿದ್ಯಾಭ್ಯಾಸ ಕೇವಲ ಮೇಲ್ಜಾತಿಯವರಿಗೂ, ಪುರುಷವರ್ಗಕ್ಕೂ ಸೀಮಿತವಾಗಿದ್ದ ಕಾಲದಲ್ಲಿ ಬಾಸೆಲ್ ಮಿಷನರಿಗಳು ಜಾತಿಬೇಧವಿಲ್ಲದೆ, ಲಿಂಗಬೇಧವಿಲ್ಲದೆ ಶಾಲೆಗಳನ್ನು ತೆರೆದು ಆ ಮೂಲಕ ಸ್ತ್ರೀಯರಿಗೆ ಹಾಗೂ ಸಮಾಜದ ತಳಸ್ತರದ ಸಮುದಾಯಗಳಿಗೆ ವಿದ್ಯಾಭ್ಯಾಸದ ಅವಕಾಶ ದೊರಕಿಸಿಕೊಟ್ಟರು.[೨೯] ೧೯೧೧ರಲ್ಲಿ ಪಂಚಮರಿಗೆ ಶಾಲೆಗಳನ್ನು ತೆರೆಯಲು ತೀರ್ಮಾನಿಸಲಾಯಿತು. ದಕ್ಷಿಣ ಕನ್ನಡ ಜಿಲ್ಲೆಯ ಹಲವೆಡೆ ಹರಿಜನರು ಅಥವಾ ಪಂಚಮರಿಗಾಗಿ ತೆರೆದ ಶಾಲೆಗಳಲ್ಲಿ ಒಂದು ಶಾಲೆಯನ್ನು ಪುತ್ತೂರಿನಲ್ಲೂ

ತೆರೆಯಲಾಯಿತು. ಶಾಲೆಗಳಲ್ಲಿ ಪಠ್ಯಪುಸ್ತಕಗಳು, ಉಪಾಧ್ಯಾಯರುಗಳಿಗೆ ಅವಶ್ಯವಾದ ಕೈಪಿಡಿ ಗ್ರಂಥಗಳನ್ನೂ ಪ್ರಕಾಶನಗೊಳಿಸಲಾಯಿತು. ಪ್ರತಿ ಸಭಾ ಪ್ರಾಂತ್ಯಗಳಲ್ಲಿ ಮತ್ತು ಹೊರ ಠಾಣೆಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆದು, ಜಾತ್ಯಾತೀತ ವಿಷಯಗಳ ಕಲಿಸುವಿಕೆಯ ಜೊತೆಗೆ ಕ್ರೈಸ್ತಧರ್ಮದ ಪ್ರವಚನವನ್ನೂ ನೀಡಿದರು. ಪ್ರಾಥಮಿಕ ಶಾಲೆಗಳಲ್ಲಿ ಬೈಬಲ್ ಮತ್ತು ಇತಿಹಾಸ ಭೋದಿಸಲಾಗುತ್ತಿತ್ತು ಹಾಗೂ ಮಾಧ್ಯಮಿಕ ಶಾಲೆಗಳಲ್ಲಿ ಹಳೆಯ ಮತ್ತು ಹೊಸ ಒಡಂಬಡಿಕೆಗಳನ್ನು ಓದಿಸಿ ವಿವರಿಸಲಾಗುತ್ತಿತ್ತು. ಶಾಲೆಗಳಲ್ಲಿ ದೈನಂದಿನ ಚಟುವಟಿಕೆಗಳು ಪ್ರಾರ್ಥನೆಯೊಂದಿಗೆ ಪ್ರಾರಂಭವಾಗುತ್ತಿದ್ದವು.[೩೦]

೧೮೫೮ರಲ್ಲಿ ಬಾಸೆಲ್ ಮಿಷನ್ ಪರೋೀಯಿಯಲ್ ಶಾಲೆಗಳನ್ನು ಸ್ಥಾಪಿಸಿತು.[೩೧] ಸ್ಥಳೀಯ ಇಗರ್ಜಿಗೆ ಸೇರಿದ ಬಾಲಕ ಹಾಗೂ ಬಾಲಕಿಯರಿಗೆ ದೇವರ ವಾಕ್ಯವನ್ನು ಓದುವ  ಮತ್ತು ಅರ್ಥೈಸುವ ಉದ್ದೇಶದಿಂದ ಈ ಶಾಲೆಗಳನ್ನು ತೆರೆಯಲಾಗಿತ್ತು. [೩೨] ಕ್ರೈಸ್ತೇತರರಿಗೆ ಶಿಕ್ಷಣ ಹಾಗೂ ಕ್ರೈಸ್ತಧರ್ಮದ ಜ್ಞಾನ ನೀಡುವ ನಿಟ್ಟಿನಲ್ಲೂ ಬಾಸೆಲ್ ಮಿಷನರಿಗಳು ಜಿಲ್ಲೆಯಲ್ಲಿ ಶಾಲೆಗಳನ್ನು ತೆರೆದರು.[೩೩] ೧೮೬೫ರ   ಚಾರ್ಲ್ಸ್ ವುಡ್ ವರದಿಯಂತೆ ಖಾಸಗಿ ಶಾಲೆಗಳಿಗೆ ಅನುದಾನ ದೊರೆತ ನಂತರ ಬಾಸೆಲ್ ಮಿಷನ್ ಕೂಡಾ ಅದರ ಲಾಭ ಪಡೆದುಕೊಂಡಿತು.[೩೪] ೧೮೬೬ರಲ್ಲಿ ಬ್ರಾಹ್ಮಣ ಹೆಣ್ಮಕ್ಕಳಿಗಾಗಿ ಪ್ರತ್ಯೇಕವಾಗಿ ಮಂಗಳೂರಿನಲ್ಲಿ ಶಾಲೆಯನ್ನು ತೆರೆಯಲಾಯಿತು.

೧೮೬೭ರ ಹೊತ್ತಿಗೆ ೧೭ ಮಂದಿ ಬ್ರಾಹ್ಮಣ ಬಾಲಕಿಯರು ವಿದ್ಯಾರ್ಜನೆಗೈಯುತ್ತಿದ್ದು, ಅವರಿಗೆ ಓದು, ಬರಹ, ಅಂಕ ಗಣಿತ ಮತ್ತು ಕುಸುರಿ ಕೆಲಸವನ್ನು ಕಲಿಸಲಾಗುತ್ತಿತ್ತು. ಹಾಗೆಯೇ, ೧೮೬೭ರಲ್ಲಿ ಮಂಗಳೂರಿನಲ್ಲಿ ಮತ್ತೊಂದು ಬ್ರಾಹ್ಮಣ ಹೆಣ್ಣುಮಕ್ಕಳ ಶಾಲೆಯನ್ನು ತೆರೆಯುವ ಪ್ರಸ್ತಾಪನೆ ಮಾಡಲಾಯಿತು.[೩೫] ೧೮೮೨ರಲ್ಲಿ ಉಡುಪಿಯಲ್ಲಿ ಪ್ರಾರಂಭಿಸಲಾದ ಹೆಣ್ಮಕ್ಕಳ ಬ್ರಾಹ್ಮಣ ಶಾಲೆಯಲ್ಲಿ, ಮಹಿಳಾ ಶಿಕ್ಷಕಿಯರನ್ನು ನೇಮಿಸಲಾಯಿತು. ಪ್ರಾರಂಭದಲ್ಲಿ ಈ ಶಾಲೆಯಲ್ಲಿ ೨೦ ಮಂದಿ ಬ್ರಾಹ್ಮಣ ಬಾಲಕಿಯರಿದ್ದರು. ಮಿಷನರಿಗಳು ಸಮಾಜದ ಉನ್ನತ ವರ್ಗದಲ್ಲಿ ಸುವಾರ್ತೆ ಸಾರಲು ಮತ್ತು ಮಿಷನರಿ ಪ್ರಭಾವವನ್ನು ಬಲಪಡಿಸುವ ಉದ್ದೇಶದಿಂದ ಬ್ರಾಹ್ಮಣ ಹೆಣ್ಮಕ್ಕಳ ಶಾಲೆಗಳನ್ನು ಸ್ಥಾಪಿಸಿದರು.[೩೬]

ಬಾಸೆಲ್ ಮಿಷನ್ ಶಾಲೆಗಳನ್ನು ನಡೆಸಲು ಆರ್ಥಿಕ ಸಂಕಷ್ಟಕ್ಕೀಡಾದಾಗ ಮಂಗಳೂರಿನಲ್ಲಿ ಬ್ರಾಹ್ಮಣ ಹೆಣ್ಮಕ್ಕಳ ಶಾಲೆಯನ್ನು ನಿಲ್ಲಿಸಿತು. ಆಗ  ಹಲವಾರು ಬ್ರಾಹ್ಮಣರು ಸೇರಿ ಬಾಸೆಲ್ ಮಿಷನ್ ಇದರ ಕೇಂದ್ರ ಕಮಿಟಿಗೆ ಅರ್ಜಿ ಸಲ್ಲಿಸಿ ಶಾಲೆಯನ್ನು ಪುನಃ ತೆರೆಯುವಂತೆ ಮನವಿ ಮಾಡಿದರು ಮಾತ್ರವಲ್ಲದೆ, ಹೊಸ ಕಟ್ಟಡದ ರಚನೆಗಾಗಿ ಬ್ರಾಹ್ಮಣರೇ ಹಣ ಸಂಗ್ರಹಿಸಿ ಒಟ್ಟು ರೂಪಾಯಿ ೨೯೭ಯನ್ನು ಅವರಿಗೆ ನೀಡಿದರು.[೩೭] ಜಿಲ್ಲೆಯಲ್ಲಿ ಬ್ರಾಹ್ಮಣರು ಉನ್ನತ ಶಿಕ್ಷಣಕ್ಕೆ ಬಹು ಬೇಗ ತೆರೆದುಕೊಂಡರು. ೧೮೬೮ರಲ್ಲಿ ಬ್ರಾಹ್ಮಣ ವರ್ಗದಲ್ಲಿ ಕೇವಲ ೭ ಮಂದಿಯಷ್ಟೇ ಪ್ರೌಢ ವಿದ್ಯಾಭ್ಯಾಸ ಪಡೆದಿದ್ದು, ೧೮೭೨ರ ವೇಳೆಗೆ ಪ್ರೌಢ ಶಿಕ್ಷಣ ಪಡೆದವರ ಸಂಖ್ಯೆ ೧೫೫ ಕ್ಕೇರಿತು. ಬ್ರಾಹ್ಮಣೇತರ ವರ್ಗಗಳಲ್ಲಿ ಶೂದ್ರರ ಸ್ಥಿತಿ ಹೀನಾಯವಾಗಿದ್ದು ಅವರು ತಮ್ಮ ಮಕ್ಕಳನ್ನು

ಸರಕಾರಿ ಶಾಲೆಗಳಿಗೆ ಕಳುಹಿಸುವಂತಿರಲಿಲ್ಲ. ಮಿಷನರಿ ಶಾಲೆಗಳಲ್ಲಿ ಪ್ರವೇಶ ದೊರೆಯುವವರೆಗೆ ಇವರಿಗೆ ಪ್ರಾಥಮಿಕ ಶಿಕ್ಷಣ ಕನಸೇ ಸರಿ. ಅದೇ ರೀತಿ ದೇಶೀಯ ಕ್ರೈಸ್ತರು ಹೆಚ್ಚಿನ ಸಂಖ್ಯೆಯಲ್ಲಿ ಶಿಕ್ಷಣದ ಪ್ರಯೋಜನ ಪಡೆದುಕೊಂಡರು.[೩೮] ಮದರಾಸಿನಲ್ಲಿ ಘಟಿಕೋತ್ಸವದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರಾದ ಡಾ. ಡಂಕನ್ ರವರು 'ಭಾರತೀಯ ಸಮಾಜದಲ್ಲಿ ಬಾಲಕರ ಶಿಕ್ಷಣಕ್ಕೆ ಪ್ರಾಶಸ್ತ್ಯ ಮತ್ತು ಮಹಿಳಾ ಶಿಕ್ಷಣದ ನಿರ್ಲಕ್ಷಿಸುವಿಕೆ ವಿದೇಶಿಯರಿಗೆ ಎದ್ದು ಕಾಣುವ ವಿಸ್ಮಯವಾಗಿದೆ' ಎಂದಿರುವುದು ಸ್ತ್ರೀ ಶಿಕ್ಷಣದ ಕುರಿತು ಸಮಾಜದ ದೃಷ್ಟಿಕೋನವನ್ನು ಪ್ರತಿಬಿಂಬಿಸುತ್ತದೆ.[೩೯]

**೧೮೮೧ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದ ಮಿಷನರಿ ಶಾಲೆಗಳ ದಾಖಲಾತಿ ಇಂತಿದೆ.[೪೦]**

| ಕ್ರ. ಸಂ | ಕೇಂದ್ರಗಳು | ಶಾಲೆಗಳ ಸಂಖ್ಯೆ | ಒಟ್ಟು ಶಿಕ್ಷಣ ಪಡೆಯುತ್ತಿರುವವರ ಸಂಖ್ಯೆ | |
|---|---|---|---|---|
| | | | ಕ್ರೈಸ್ತರು | ಕ್ರೈಸ್ತೇತರರು |
| | | | ಬಾಲಕಿಯರು | ಬಾಲಕಿಯರು |
| ೧. | ಮಂಗಳೂರು | ೮ | ೧೩೮ | ೧೭೦ |
| ೨. | ಮುಲ್ಕಿ | ೭ | ೯೯ | .... |
| ೩. | ಉಡುಪಿ | ೭ | ೪೦ | .... |
| ೪. | ಹೊನ್ನಾವರ | ೧ | ೫ | ೧೮ |
| ೫. | ಮಡಿಕೇರಿ | ೧ | ... | ೬ |
| ೬. | ಆನಂದಪುರ | ೧ | ೧೨ | ... |
| | ಒಟ್ಟು | ೨೫ | ೨೯೪ | ೧೯೪ |

**೧೯೦೬ ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದ ಮಿಷನರಿ ಶಾಲೆಗಳಲ್ಲಿ ದಾಖಲಾತಿ ಪಡೆದ ಬಾಲಕಿಯರು**[೪೧]

| ಕ್ರ. ಸಂ | ಕೇಂದ್ರಗಳು | ಶಾಲೆಗಳ ಶಾಲೆಗಳ ಸಂಖ್ಯೆ | ಒಟ್ಟು ಶಿಕ್ಷಣ ಪಡೆಯುತ್ತಿರುವವರ ಸಂಖ್ಯೆ | |
|---|---|---|---|---|
| | | | ಕ್ರೈಸ್ತರು | ಕ್ರೈಸ್ತೇತರರು |
| | | | ಬಾಲಕಿಯರು | ಬಾಲಕಿಯರು |
| ೧. | ಮಂಗಳೂರು | ೧೯ | ೨೮೦ | ೧೫೯ |
| ೨. | ಮುಲ್ಕಿ | ೭ | ೯೯ | ೧೦ |
| ೩. | ಉಡುಪಿ | ೧೩ | ೧೧ | ೬೨ |
| ೪. | ಕಾರ್ಕಳ | ೮ | ೧೯ | ೭೯ |
| ೫. | ಬಸ್ರೂರು | ೩ | ೯ | ೪೩ |
| ೬. | ಕಾಸರಗೋಡು | ೧೪ | ೧೯ | ೧೧೨ |
| ೭. | ಪುತ್ತೂರು | ೧ | ೯ | ೧೦ |
| | ಒಟ್ಟು | ೬೫ | ೪೩೬ | ೪೭೫ |

ಮಿಷನರಿ ಮಹಿಳೆಯರು ಹೆಚ್ಚಾಗಿ ಬೈಬಲ್ ಪ್ರತಿಗಳನ್ನು ಮಾರುತ್ತಿದ್ದು ನೇಯ್ಗೆ ಮತ್ತು ಅಲಂಕಾರಿಕ ತರಗತಿಗಳನ್ನು ನಿರ್ವಹಿಸುತ್ತಿದ್ದರು. ಮನೆಗೆಲಸ, ಅನಾಥಾಶ್ರಮಗಳ ವಾಣಿಜ್ಯ ನಿರ್ವಹಣೆ ಹಾಗೂ ಅನಾಥ ಬಾಲಕರಿಗಾಗಿ ಹೊಲಿಗೆ ಕೆಲಸಗಳನ್ನೂ ಮಾಡುತ್ತಿದ್ದರು. ಅನಾರೋಗ್ಯ ಪೀಡಿತ ಕ್ರೈಸ್ತರು, ಮಕ್ಕಳು ಹಾಗೂ ಕ್ರೈಸ್ತೇತರ ನೆರೆಹೊರೆಯವರನ್ನು ಭೇಟಿ ಮಾಡುತ್ತಿದ್ದರು.[೪೨] ಉದಾಹರಣೆಗೆ ಶ್ರೀಮತಿ ಜೆ.ಸಿ.ಸಿ. ಫ್ರೈಡರರ್ ಇವರು ಮಂಗಳೂರಿನಲ್ಲಿ ಮಿಷನ್ ಸಂಸ್ಥೆಯ ಜನರಲ್ ಏಜೆಂಟರಾಗಿದ್ದ ಗೋಟ್ಲೆಬ್ ಫ್ರೈಡರ್‌ರನ್ನು ವಿವಾಹವಾದ ನಂತರ ಭಾರತಕ್ಕೆ ಬಂದರು. ತುಳು ಭಾಷೆಯ ಅಧ್ಯಯನ ಪ್ರಾರಂಭಿಸಿ ಬಾಲಕಿಯರ ಹೊಲಿಗೆ ಕೆಲಸದ ಮೇಲ್ವಿಚಾರಣೆ ಆರಂಭಿಸಿ ನಂತರ ಬ್ರಾಹ್ಮಣ ಹೆಣ್ಣು ಮಕ್ಕಳ ಶಾಲಾ ಕೆಲಸಗಳಲ್ಲಿ ಸಹಾಯ ನೀಡಿರುವರು.

೧೮೮೫ರ ವೇಳೆಗೆ ೧೫ ಮಂದಿ ಬೈಬಲ್ ಸ್ತ್ರೀಯರಿದ್ದು ಅವರಲ್ಲಿ ಕೇವಲ ಮೂವರು ದಕ್ಷಿಣ ಕನ್ನಡ ಜಿಲ್ಲೆಗೆ ನೇಮಕಗೊಂಡವರಾಗಿದ್ದರು. ಇವರು ಬ್ರಿಟಿಷರು ಮತ್ತು ವಿದೇಶಿ ಬೈಬಲ್ ಸೊಸೈಟಿಯಿಂದ ಬೆಂಬಲ ಪಡೆಯುತ್ತಿದ್ದರು.[೪೩] ಶ್ರೀಮತಿ ಲೇಯರ್‌ರವರು ಬರೆಯುವಂತೆ ಬೈಬಲ್ ಸ್ತ್ರೀಯರೆಲ್ಲರೂ ವಿವಾಹಿತರೇ

ಆಗಿದ್ದರು. ದಿನದ ನಾಲ್ಕು ಘಂಟೆ ಕೆಲಸದಲ್ಲಿ ತೊಡಗಿದ್ದು ಮನೆಗಳ ಭೇಟಿ ನಡೆಸುತ್ತಿದ್ದರು. ಮುಖ್ಯವಾಗಿ ಬ್ರಾಹ್ಮಣರ ಮನೆಗಳು, ಔಷಧಿಗಳ ವಿತರಣೆ, ಬೈಬಲ್ ಪಠಣೆ ಮತ್ತು ಮಾರಾಟ ಮುಂತಾದ ಕಾರ್ಯ ಮಾಡುತ್ತಿದ್ದರು.[೪೪] ಬೈಬಲ್ ಮಹಿಳೆಯರ ಕುರಿತು ೧೮೯೫ರ ಮಿಷನ್ ವರದಿಯಲ್ಲಿ ದಾಖಲಾಗಿರುವಂತೆ, 'ಜಿಲ್ಲೆಯಲ್ಲಿ ೨೯ ಮಂದಿ ಬೈಬಲ್ ಮಹಿಳೆಯರಿದ್ದು ಮನೆಮನೆಗೆ ಹೋಗಿ ಸುವಾರ್ತೆಯನ್ನು ಬೋಧಿಸುವ ಕಾರ್ಯವನ್ನು ಮಾಡುತ್ತಿದ್ದರು. ಇವರಲ್ಲಿ ಮಂಗಳೂರಿನಲ್ಲಿ ಪ್ರತಿವಾರ ಶ್ರೀಮತಿ ವಾಲ್ಸ್ ಸುವಾರ್ತೆ ಬೋಧಿಸಲು ಹೋಗುತ್ತಿದ್ದರು. ಈ ಸಂದರ್ಭ ಕೆಲವು ಮನೆಗಳಲ್ಲಿ ಅವರಿಗೆ ಪ್ರೀತಿಯ ಆದರವಿತ್ತು ಆದರೆ ಉಚ್ಛ ಧರ್ಮೀಯರು ದೂರ ನಿಲ್ಲುತ್ತಿದ್ದರು' ಎಂಬುವುದು ಸ್ಥಳೀಯರ ನಿಲುವನ್ನು ಪ್ರತಿಬಿಂಬಿಸುತ್ತದೆ.[೪೫]

ಶಿಕ್ಷಣಕ್ಕೆ ಮಾತ್ರ ಸೀಮಿತವಾಗದ ಮಿಷನರಿಗಳು, ೧೮೬೫ರಲ್ಲಿ ಮಂಗಳೂರಿನಲ್ಲಿ ಪ್ರಥಮ ಹಂಚಿನ ಕಾರ್ಖಾನೆಯನ್ನು ಪ್ರಾರಂಭಿಸಿದರು. ಇಲ್ಲಿ ತಯಾರಾದ ಹಂಚುಗಳು ಬಹಳ ಬೇಗನೆ ಖ್ಯಾತಿಯನ್ನು ಹೊಂದಿದ್ದರಿಂದ ಮಂಗಳೂರಿನ ಕುದ್ರೋಳಿ ಎಂಬಲ್ಲಿ ಇನ್ನೊಂದು ಹಂಚಿನ ಕಾರ್ಖಾನೆಯನ್ನು ೧೮೮೨ರಲ್ಲಿ ಬಾಸೆಲ್ ಮಿಷನ್ ಆರಂಭಿಸಿತು. ಮಂಗಳೂರಿನಲ್ಲಿ ೮ ಹಂಚಿನ ಕಾರ್ಖಾನೆಗಳನ್ನು ತೆರೆಯುವುದರೊಂದಿಗೆ ಉದ್ಯೋಗ ಅವಕಾಶವೂ ದೊರೆಯಿತು. ಇಲ್ಲಿ ದೈನಂದಿನ ಕೆಲಸ ಪ್ರಾರಂಭವಾಗುವ ಮೊದಲು ಬೈಬಲಿನ ಒಂದು ಭಾಗವನ್ನು ಓದಲಾಗುತ್ತಿತ್ತು. ೧೮೭೩ರಲ್ಲಿ ಈ ಕಾರ್ಖಾನೆಯಲ್ಲಿ ಕಾರ್ಯವೆಸಗುತ್ತಿದ್ದವರ ಸಂಖ್ಯೆ ಒಟ್ಟು ೨೬೦, ಅದರಲ್ಲಿ ಸುಮಾರು ೯೦ ಮಂದಿ ಮಹಿಳೆಯರಾಗಿದ್ದರು. ಕಾರ್ಮಿಕರ ಮಡದಿಯರು ಮತ್ತು ವಿಧವಾ ಮಹಿಳೆಯರಿಗೆ ಶಾಶ್ವತ ರೀತಿಯ ಕೆಲಸ ದೊರಕುವುದು ಕ್ಲಿಷ್ಟಕರವಾಗಿದ್ದ ಕಾಲಘಟ್ಟದಲ್ಲಿ ಇದೊಂದು ಮಹತ್ತರವಾದ ಹೆಜ್ಜೆಯಾಗಿದೆ.[೪೬] ದುಡಿಯಲು ಹೋಗುವ ಹೆತ್ತವರ ಪುಟ್ಟ ಮಕ್ಕಳನ್ನು ನೋಡಿಕೊಳ್ಳಲು ಬಾಸೆಲ್ ಮಿಷನ್ ತನ್ನ ಕೈಗಾರಿಕಾ ಕಾರ್ಖಾನೆಗಳ ಬಳಿ ನರ್ಸರಿಗಳನ್ನು ಸ್ಥಾಪಿಸಿತು.[೪೭]

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೊದಲ ಬಾರಿಗೆ ಶಿಶುವಿಹಾರಗಳನ್ನು ತೆರೆಯುವ ಆಲೋಚನೆಯನ್ನು ಮಾಡಿ, ಕಾರ್ಯಗತಗೊಳಿಸಿರುವುದು ಶ್ಲಾಘನೀಯವಾಗಿದೆ. ಮಂಗಳೂರು ಮತ್ತು ಉಡುಪಿಯಲ್ಲಿ ಆರು ವರ್ಷಕ್ಕಿಂತ ಕಡಿಮೆ (ಮೂರು ವರ್ಷಕ್ಕಿಂತ ಹೆಚ್ಚು) ಇರುವ ಮಕ್ಕಳ ತಾಯಂದಿರಿಗಾಗಿ ಶಿಶುಶಾಲೆಗಳನ್ನು ತೆರೆಯಲಾಯಿತು. ದಿನಗೂಲಿ ಕೆಲಸಕ್ಕೆ ತೆರಳುವ ಮತ್ತು ಸ್ವತಃ ಭೋದಿಸಲು ಅಸಾಧ್ಯವಾದ ತಾಯಂದಿರು ತಮ್ಮ ಮಕ್ಕಳನ್ನು ಸೇರಿಸುತ್ತಿದ್ದರು.[೪೮] ನೇಯ್ಗೆ ಕಾರ್ಖಾನೆಯನ್ನು ೧೮೪೪ರಲ್ಲಿ ಸ್ಥಾಪಿಸುವುದರ ಮೂಲಕ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೊದಲ ಬಾರಿಗೆ ಬೃಹತ್ ಪ್ರಮಾಣದಲ್ಲಿ ಬಟ್ಟೆ ತಯಾರಿಸುವ ಸಂಸ್ಥೆಯನ್ನು ಬಾಸೆಲ್ ಮಿಷನರಿಗಳು ಪ್ರಾರಂಭಿಸಿದರು.

೧೮೫೧ರಲ್ಲಿ ಈ ಕಾರ್ಖಾನೆಯು ೨೧ ಯುರೋಪಿಯನ್ ಮಗ್ಗಗಳನ್ನು ಹೊಂದಿತ್ತು. ಬಲ್ಮಠದ ನೇಯ್ಗೆ ಕಾರ್ಖಾನೆಯಲ್ಲಿ ಬಾಸೆಲ್ ಮಿಷನರಿಗಳು ವಿಧವೆಯರಿಗೆ ಮತ್ತು ನಿರ್ಗತಿಕರಿಗೆ ಕೆಲಸ ನೀಡಿದರು. ೧೮೭೨ರ ಹೊತ್ತಿಗೆ ಬಾಸೆಲ್ ಮಿಷನ್ ಸ್ಥಾಪಿಸಿದ ನೇಯ್ಗೆ ಕಾರ್ಖಾನೆಯು ೪೧ ಮಂದಿ ಮಹಿಳೆಯರಿಗೆ ಕೆಲಸ ನೀಡಿತು.[೪೯]

ನೇಯ್ಗೆ ಕಾರ್ಖಾನೆಯ ಸಹಭಾಗಿತ್ವದಲ್ಲಿ ಮಿಸ್ ಗಿಸಿನ್ ಇವರು ಟೈಲರಿಂಗ್ ವಿಭಾಗವನ್ನು ಮತ್ತು ಮಿಸ್. ಜೆ. ಮೆಜರ್ ಇವರು ಕಸೂತಿ ವಿಭಾಗವನ್ನು ಆರಂಭಿಸಿದರು. ೧೯೧೩ರ ವರದಿಯ ಪ್ರಕಾರ ೧೮೯ ಮಂದಿ ಮಹಿಳೆಯರು ಮತ್ತು ಬಾಲಕಿಯರು ಇವುಗಳಲ್ಲಿ ಉದ್ಯೋಗ ನಿರ್ವಹಿಸುತ್ತಿದ್ದರು.[೫೦] ಬಾಸೆಲ್ ಮಿಷನ್ ಸಹಭಾಗಿತ್ವದಲ್ಲಿ ಬಲ್ಮಠದ ಶಾಂತಿ ಚರ್ಚ್ ಸಭೆಯು, ಇಪ್ಪತ್ತನೆಯ ಶತಮಾನದ ಮೊದಲ ಕಾಲಘಟ್ಟದಲ್ಲಿ ಸ್ವಉದ್ಯೋಗದ ಉದ್ಯಮವನ್ನು ಶ್ರೀಮತಿ ಶೋಪರ್ ನೇತೃತ್ವದಲ್ಲಿ ಪ್ರಾರಂಭಿಸಿತು. ಬಲ್ಮಠ ಸಭಾಪ್ರಾಂತ್ಯದ ಹಲವಾರು ಮಹಿಳೆಯರು ಮತ್ತು ಬಾಲಕಿಯರಿಗೆ ನೇಯ್ಗೆ ಹಾಗೂ ನಂತರದಲ್ಲಿ ಅಡ್ಡ ಹೊಲಿಗೆ (cross stitching) ತರಬೇತಿಯನ್ನು ನೀಡಲಾಯಿತು. ಬಡಮಹಿಳೆಯರ ಜೀವನೋಪಾಯಕ್ಕೆ ಇದು ಸಹಕಾರಿಯಾಯಿತು.[೫೧]

ಅನಾಥ ಮಕ್ಕಳಿಗಾಗಿ ೧೮೩೬ರಲ್ಲಿ ರವೆ. ಹೆಬಿಕ್ ಮಂಗಳೂರಿನಲ್ಲಿ ಅನಾಥಾಲಯಗಳನ್ನು ಪ್ರಾರಂಭಿಸಿದರು. ೧೮೮೨ರ ಬಾಸೆಲ್ ಮಿಷನ್ ವರದಿಗಳಲ್ಲಿ ಬಾಲಿಕಾ ಅನಾಥಶ್ರಮ ಶಾಲೆಯು ಶ್ರೀಕೆಪ್ಲರ್ ಹಾಗೂ ಶ್ರೀಮತಿ ಕೆಪ್ಲರವರ ಮೇಲ್ವಿಚಾರಣೆಯಲ್ಲಿದ್ದು ಮೂವರು ಅಧ್ಯಾಪಕರು, ಒಬ್ಬರು ಅಧ್ಯಾಪಿಕೆ ಹಾಗೂ ಇಬ್ಬರು ಪರಿಚಾರಕಿಯರಿದ್ದು, ೬೯ ಮಂದಿ ಬೋರ್ಡಿಂಗ್ ವ್ಯವಸ್ಥೆ ಪಡೆದುಕೊಂಡಿದ್ದರು. ಬೋರ್ಡಿಂಗ್ ಶಾಲೆಗಳು ಮತ್ತು ಅನಾಥಾಲಯಗಳಲ್ಲಿಯೂ ಬಾಲಕಿಯರ ಸೇರ್ಪಡೆ ಕಂಡು ಬರುತ್ತದೆ. ಮುಲ್ಕಿಯಲ್ಲಿದ್ದ ಬಾಲಕಿಯರು ವ್ಯವಸಾಯಕ್ಕೆ ಸಂಬಂಧಿಸಿದ ಕೆಲಸವನ್ನು ಮಾಡುತ್ತಿದ್ದರು ಎಂಬುದನ್ನು ವರದಿಯಲ್ಲಿ ಉಲ್ಲೇಖಿಸಲಾಗಿದೆ.

ಅನಾಥಾಲಯಗಳಲ್ಲೂ ಬಾಲಕಿಯರಿಗೆ ಸುವಾರ್ತೆ ಸಾರಲಾಗುತ್ತಿತ್ತು.[೫೨] ೧೮೬೩ರಲ್ಲಿ ಬಾಲಕಿಯರನ್ನು ಮಂಗಳೂರಿನ ಅನಾಥಾಲಯದಿಂದ ಉಡುಪಿಗೆ ವರ್ಗಾಯಿಸಲಾಯಿಸಿ, ಅವರಿಗೆ ಕುಸುರಿ ಕೆಲಸ ಮತ್ತು ಬಟ್ಟೆ ತಯಾರಿಕೆಯ ತರಬೇತಿಯನ್ನು ನೀಡಲಾಯಿತು. ಬಾಲಕಿಯರನ್ನು ಉತ್ತಮ ಕ್ರೈಸ್ತ ಮಡದಿಯರಾಗಿ ಮತ್ತು ತಾಯಂದಿರಾಗಿ ತರಬೇತಿ ನೀಡುವುದು ಇದರ ಉದ್ದೇಶವಾಗಿತ್ತು.[೫೩] ಬಾಸೆಲ್ ಮಿಷನ್ ಸ್ಥಾಪಿಸಿದ ಸಂಸ್ಥೆಗಳಾದ ಪ್ರಿಂಟಿಂಗ್ ಪ್ರೆಸ್, ನೇಯ್ಗೆ ಕಾರ್ಖಾನೆ, ಬುಕ್ ಬೈಡಿಂಗ್, ಹಂಚಿನ ಕಾರ್ಖಾನೆ ಮತ್ತು ಮಿಷನ್ ಸ್ಥಾಪಿಸಿದ ಮಳಿಗೆಗಳಲ್ಲಿ ಕ್ರೈಸ್ತಧರ್ಮಕ್ಕೆ ಮತಾಂತರಗೊಂಡವರು ಕೆಲಸ ನಿರ್ವಹಿಸುತ್ತಿದ್ದರು.

ಮಿಷನರಿಗಳು ತಮ್ಮ ಮುಖ್ಯ ಉದ್ದೇಶವಾದ ಮತಪ್ರಚಾರ ಕಾರ್ಯವನ್ನು ಜಿಲ್ಲೆಯ ವಿವಿಧೆಡೆ ಕೈಗೊಂಡರು. ಅಂಕಿ ಅಂಶಗಳ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಾತ್ರವೇ ಬ್ರಾಹ್ಮಣರು ಹೆಚ್ಚಿನ ಮಟ್ಟಿಗೆ ಮತಾಂತರಗೊಂಡು ಕ್ರೈಸ್ತಮತೀಯರಾಗಿದ್ದು, ಕ್ಷತ್ರಿಯರೂ ಕೂಡಾ ಅಸಾಮಾನ್ಯ ಸಂಖ್ಯೆಯಲ್ಲಿ ಮತಾಂತರಗೊಂಡಿರುವವರು ಎಂಬುವುದು ದಾಖಲೆಗಳಿಂದ ತಿಳಿದು ಬರುತ್ತದೆ.[೫೪] ತುಳುನಾಡಿನಲ್ಲಿ ಹೆಚ್ಚಿನ ಸಂಖ್ಯೆಯ ಬಿಲ್ಲವರು ಕ್ರೈಸ್ತ ಮಿಷನರಿಗಳಿಂದ ಪ್ರಭಾವಿತರಾದರು. ಮಿಷನ್ ವರದಿಗಳಲ್ಲಿ ಜಿಲ್ಲೆಯ ಬಿಲ್ಲವರ ಮತಾಂತರದ ಕುರಿತು ಮಾಹಿತಿ ಕಂಡುಬರುತ್ತದೆ. ಅದೇ ರೀತಿ ಸಮಾಜದ ಮೇಲ್ವರ್ಗದವರ ಮತಾಂತರದ

ಆಶಯವೂ ವ್ಯಕ್ತವಾಗಿದೆ.[೫೫] ಮಿಷನರಿಗಳು ಸಂಖ್ಯಾತ್ಮಕವಾಗಿ ಕೆಳಜಾತಿಯವರನ್ನು ಗುರಿಯಾಗಿಸಿಕೊಂಡರೂ, ಹೆಚ್ಚಿನ ಪ್ರಮುಖ ಸಮುದಾಯದವರನ್ನು ಒಲಿಸಿಕೊಳ್ಳಲು ಯೋಜಿಸಿದರು. ಶಿಕ್ಷಣವು ಮತಾಂತರಕ್ಕೆ ಒಂದು ಜಾಹಿರಾತು ಹಾಗೂ ಸಾಧನವಾಗಿದ್ದರಿಂದ ರೋಮನ್ ಕೆಥೋಲಿಕ್ ಚರ್ಚ್ ದೊಡ್ಡ ರೀತಿಯಲ್ಲಿ ಅದಕ್ಕೆ ಕೈಹಾಕಿತು.[೫೬] ಮತಾಂತರಗೊಂಡವರಿಗೆ ಮೂಲಭೂತ ಶಿಕ್ಷಣ ನೀಡುವ ಮೂಲಕ ಬೈಬಲ್ ಓದುವ ಮತ್ತು ತಿಳಿದುಕೊಳ್ಳುವ ಹಾಗೂ ಇನ್ನಿತರ ಕಾರ್ಯಗಳನ್ನು ಸುಗಮವಾಗಿ ನಿರ್ವಹಿಸಲು ಸಹಕಾರಿಯಾಗುವ ಉದ್ದೇಶವನ್ನು ಹೊಂದಿದ್ದರು.[೫೭] ಈ ನಿಟ್ಟಿನಲ್ಲಿ ಸಮಾಜದ ಉಚ್ಚಶ್ರೇಣಿಯ ಬ್ರಾಹ್ಮಣ ಮಹಿಳೆಯರ ಶೋಚನೀಯ ಪರಿಸ್ಥಿತಿಯನ್ನು ಕೃತಿಗಳ ಮೂಲಕ ಬಿಂಬಿಸುವ ಕೆಲಸವನ್ನೂ ಮಾಡಲಾಗಿದೆ. ಉದಾಹರಣೆಗೆ ೧೯೨೫ ರಲ್ಲಿ ಬಾಸೆಲ್ ಮಿಷನ್ ಪ್ರೆಸ್ ನಿಂದ ಪ್ರಕಟವಾದ ‘ಒಂದು ಹಿಂದು ಹುಡುಗಿಯ ಕಥೆ’. ಈ ಕೃತಿಯಲ್ಲಿ ಕುಲೀನರೆನಿಸಿಕೊಂಡಿರುವ ಬ್ರಾಹ್ಮಣರು ಇಪ್ಪತ್ತು ಮೂವತ್ತು ಸ್ತ್ರೀಯರನ್ನು ಮದುವೆ ಮಾಡಿಕೊಳ್ಳುವರು ಎಂಬ ಹೇಳಿಕೆ ಬ್ರಾಹ್ಮಣ ಮಹಿಳೆಯರ ದಾರುಣ ಸ್ಥಿತಿಯನ್ನು ಬಿಂಬಿಸುತ್ತದೆ.[೫೮]

ಉಡುಪಿಯಲ್ಲಿ ಮಿಷನರಿಗಳ ಮತಪ್ರಚಾರ ಕಾರ್ಯಕ್ಕೆ ಆರಂಭದಲ್ಲಿ ಪ್ರತಿಕ್ರಿಯೆ ತೀವ್ರವಾದುದರಿಂದ, ೧೮೫೫ ರಲ್ಲಿ ಮಿಷನ್ ಹೌಸ್ ಬೆಂಕಿಗೆ ಆಹುತಿ ಮಾಡಲಾಯಿತು ಹಾಗೂ ೧೮೫೬ ರಲ್ಲಿ ಮಿಷನರಿಗಳ ವಾಸಸ್ಥಾನವಾಗಿದ್ದ ಹೊಸ ಇಗರ್ಜಿ ಕೂಡಾ ಸುಟ್ಟು ಹಾಕಲಾಯಿತು. ಆದರೆ, ೧೮೭೪ರಲ್ಲಿ ಉಡುಪಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮತಾಂತರಗೊಂಡಿರುವುದರ ಕುರಿತು ದೊರೆತಿರುವ ಮಾಹಿತಿಯ ಪ್ರಕಾರ, ಸುಮಾರು ೫೦ ಮಂದಿ ಈಗಾಗಲೇ ಜ್ಞಾನಸ್ನಾನ ಮಾಡಿದ್ದು, ಇನ್ನು ೨೫೩ ಮಂದಿ ಜ್ಞಾನಸ್ನಾನ ಮಾಡಲಿರುವರು ಎಂಬುವುದು ಹಲವು ಸಂದಿಗ್ಧಗಳ ನಡುವೆಯೂ ಹೇಗೆ ಮಿಷನರಿಗಳು ನಿರಂತರವಾಗಿ ಸುವಾರ್ತೆ ಸಾರುವುದನ್ನು ಮುಂದುವರಿಸಿದರು ಎಂಬುವುದಕ್ಕೆ ಉದಾಹರಣೆಯಾಗಿದೆ.[೫೯] ಕುಂದಾಪುರ ಮತ್ತು ಕಾಸರಗೋಡಿನಲ್ಲಿಯೂ ಸುವಾರ್ತೆಗೆ ಸಕಾರಾತ್ಮಕ ಪ್ರತಿಕ್ರಿಯೆಗಳು ದಾಖಲಾಗಿದೆ.[೬೦]

ಮುಲ್ಕಿಯಲ್ಲಿ ರೆವೆ. ಜಿ. ರಿಟ್ಟರ್‌ರವರು ಮುಸಲ್ಮಾನ ಹುಡುಗಿಯೊರ್ವಳಿಗೆ ಸುವಾರ್ತೆ ಬೋಧನೆ ಮಾಡಿದ ವರದಿಯಂತೆ, ಚಿಕ್ಕಂದಿನಲ್ಲಿಯೇ ತನ್ನ ತಾಯಿಯನ್ನು ಕಳಕೊಂಡಿದ್ದ ಬಾಲಕಿಯ ತಂದೆ ಮೂಲತಃ ಬ್ರಾಹ್ಮಣನಾಗಿದ್ದು ನಂತರದಲ್ಲಿ ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡಿದ್ದನು. ವಿಪರೀತ ಕುಡಿತದ ಚಟದಿಂದ ತಂದೆ ತೀರಿದಾಗ, ಆಕೆಯನ್ನು ಮಂಗಳೂರಿನ ಮಿಷನ್ ಹೌಸಿಗೆ ಕರೆತಂದ ರೆವೆ. ಜಿ. ಬ್ರೆಗೆಲ್ ಆಕೆಯನ್ನು ಮುಲ್ಕಿಯ ಬಾಲಕಿಯರ ಶಾಲೆಗೆ ಸೇರಿಸಿ ನಂತರ ಆಕೆಗೆ ಜ್ಞಾನಸ್ನಾನ ಮಾಡಿಸಿದರು. ಆಗ ಸ್ಥಳೀಯ ಮುಸಲ್ಮಾನರ ಪ್ರತಿಕ್ರಿಯೆ ತೀಕ್ಷ್ಣವಾಗಿತ್ತು.

ಮುಲ್ಕಿಯ ಮಿಷನ್‌ಹೌಸಿಗೆ ಸುಮಾರು ಹದಿನೈದು ಮಂದಿ ಮುಸಲ್ಮಾನರು ಬಂದು ಶ್ರೀ ರಿಟ್ಟರ್ ಜೊತೆಗೆ ವಾಗ್ವಾದಕ್ಕಿಳಿದಾಗ ಅವರು ಬಾಲಕಿಯನ್ನು ಸಂಬಂಧಿಕರ ಜೊತೆಗೆ ಮಾತ್ರವೇ ಕಳುಹಿಸುವುದಾಗಿ ಹೇಳಿದರು. ಆದರೆ ಮಂಗಳೂರಿನಲ್ಲಿದ್ದ ಸಂಬಂಧಿಕರು ಬಾರದೆ ಇದ್ದುದರಿಂದ, ನಂತರ ಬಾಲಕಿಗೆ ಜ್ಞಾನಸ್ನಾನ

ಮಾಡಿಸಲಾಯಿತು.[೬೧] ಈ ಘಟನೆಯು ಮಿಷನರಿಗಳ ಮತಪ್ರಚಾರ ಕಾರ್ಯಕ್ಕೆ ಸ್ಥಳೀಯರ ಪ್ರತಿಕ್ರಿಯೆಯನ್ನು ತಿಳಿಸುತ್ತದೆ. ೧೮೪೨ರ ಬಾಸೆಲ್ ಮಿಷನ್ ವರದಿಯಲ್ಲಿ ಮಿಷನ್ ಸಭೆಗಳ ಸಂಖ್ಯೆ ಹೆಚ್ಚಿದರೂ ಬಿಲ್ಲವರೇ ಹೆಚ್ಚಿನ ಸಂಖ್ಯೆಯಲ್ಲಿ ಮತಾಂತರಗೊಂಡಿದ್ದು, ಜಿಲ್ಲೆಯ ಮೇಲ್ವರ್ಗದವರು ಮಾತಾಂತರಗೊಳ್ಳದಿರುವ ಕುರಿತು ವಿಷಾದ ವ್ಯಕ್ತವಾಗಿರುವುದು ಕಂಡು ಬರುತ್ತದೆ.[೬೨] ಮಿಷನ್ ಪ್ರಭಾವಕ್ಕೊಳಗಾಗಿ ಆನಂದರಾವ್ ಕೌಂಡಿನ್ಯ ಎಂಬ ಬ್ರಾಹ್ಮಣನು ೧೮೪೪ರಲ್ಲಿ ಕ್ರೈಸ್ತಧರ್ಮಕ್ಕೆ ಮತಾಂತರಗೊಂಡನು. ಇದು ಮಿಷನರಿಗಳಲ್ಲಿ ಹರ್ಷವನ್ನೂ ಮೇಲುಜಾತಿಯ ಹಿಂದೂಗಳಲ್ಲಿ ಆತಂಕವನ್ನೂ ಸೃಷ್ಟಿಸಿತು. ಆನಂದರಾವ್ ಮತಾಂತರವು ಅನೇಕ ಸಮಕಾಲೀನ ಚರ್ಚೆ ತೀಕ್ಷ್ಣತೆಗಳಿಗೆ ಕಾರಣವಾಯಿತು.[೬೩]

ಮಿಷನ್ ಬಂಟರನ್ನು ಕೂಡಾ ಗುರಿಯಾಗಿಸಿದ ಪರಿಣಾಮವಾಗಿ ಅವರಲ್ಲಿ ಕೆಲವರು ಕ್ರೈಸ್ತಧರ್ಮಕ್ಕೆ ಆಕರ್ಷಿತರಾಗಿ ಶರಣಾದ ಉದಾಹರಣೆಗಳಿವೆ. ೧೮೪೫ರಲ್ಲಿ ಒಕ್ಕಲ್ಮ ಜಾತಿಯ ಯುವಕ [೬೪] ಹಾಗೂ ಬೆಳ್ಮದ ಬಂಟ ಕುಟುಂಬವೊಂದು 'ಕಠಿಣ ಹೋರಾಟ'ದ ಬಳಿಕ ಕ್ರೈಸ್ತಧರ್ಮಕ್ಕೆ ಸೇರಿತು. [೬೫] ಬಸ್ರೂರಿನಲ್ಲಿ ಶಿವರಾಮ ಎಂಬ ಬಂಟನ ಮತಾಂತರವು ಅಲ್ಲಿಗೆ ಮಾತ್ರ ಸೀಮಿತವಾಗದೆ ಉಡುಪಿ - ಮಂಗಳೂರುಗಳಲ್ಲೂ ಬಹಳಷ್ಟು ಪ್ರತಿಭಟನೆಗೆ ಕಾರಣವಾಯಿತು. ಇದನ್ನು ಮಿಷನಿನ ವರದಿಯು ವಿವರವಾಗಿ ಚಿತ್ರಿಸಿದೆ. [೬೬] ಕುಟುಂಬದ ಆಸ್ತಿಯಲ್ಲಿ ಪಾಲನ್ನು ಕಳೆದುಕೊಳ್ಳಬೇಕಾದೀತೆಂಬ ಭಯ ಇಲ್ಲದೆ ಹೋಗಿದ್ದರೆ ಇನ್ನಷ್ಟು ಬಂಟರು ಮತಾಂತರಗೊಳ್ಳುವ ಸಾಧ್ಯತೆ ಇತ್ತು.[೬೭] ಆದುದರಿಂದ ಸಹಜವಾಗಿ ಬಂಟ ಸಮುದಾಯವು ಕ್ರೈಸ್ತ ಪ್ರಚಾರಕರ ಬುಡಮೇಲು ಉಪಸ್ಥಿತಿಯಿಂದ ಗಲಿಬಿಲಿಗೊಂಡಿತ್ತು.

ಮಿಷನರಿಗಳ ಪ್ರಭಾವಕ್ಕೆ ವಶವರ್ತಿಯಾಗುವ ವ್ಯಕ್ತಿಗಳಿದ್ದಂತೆ, ತಮ್ಮ ಪುರಾತನ ನಂಬಿಕೆ-ಧರ್ಮಗಳಿಂದ ಜನರನ್ನು ಆಚೆಗೆ ಸೆಳೆಯುವ ಪ್ರಚಾರಕರ ಕುರಿತು ಧೋರಣೆಯನ್ನು ವಿರೋಧಿಸಿದ ಬಂಟರು ಪ್ರಚಾರಕರನ್ನು ಕಂಡ ಕೂಡಲೇ ಸಿಟ್ಟಿಗೇಳುತ್ತಿದ್ದರು.[೬೮] ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಿಲ್ಲವರು ಹಳೆಪೈಕರಲ್ಲದೆ ಉತ್ತಮ ಕುಲದವರೂ, ಬುದ್ಧಿಜೀವಿಗಳಾದ ಬ್ರಾಹ್ಮಣ, ಸಾರಸ್ವತ, ಜೈನ ಮತ್ತು ಬಂಟರ ಕುಟುಂಬಗಳಿಂದಲೂ ಕ್ರೈಸ್ತ ಮತಾವಲಂಬಿಗಳಾಗಿರುವರು.[೬೯] ಮತಾಂತರಗೊಂಡವರಲ್ಲಿ ಹೆಚ್ಚಿನವರು ತಳಸ್ತರದವರಾಗಿದ್ದು, ತಮಗೆ ಇದ್ದ ಅಲ್ಪ ಸ್ವಲ್ಪ ಆಸ್ತಿಯನ್ನೂ ಬಿಟ್ಟು ಬಂದವರಾಗಿದ್ದರು. ಆ ಸಂದರ್ಭ ಅವರ ಉಪಜೀವನಕ್ಕೆ ಮಾರ್ಗವಾಗುವಂತೆ ಬಾಸೆಲ್ ಮಿಷನರಿಗಳು ಸರಕಾರದಿಂದ ದುರಸ್ತಿಗಾಗಲೀ, ಕ್ರಯಕ್ಕಾಗಲೀ ಭೂಮಿಯನ್ನು ಕೊಂಡು ಸಾಗುವಳಿ ಮಾಡಲು ದಾರಿ ಮಾಡಿಕೊಟ್ಟರು.

ನಂತರದಲ್ಲಿ ಗಡಿಯಾರ ಮಾಡುವುದು, ಬಟ್ಟೆ ನೇಯುವುದು, ಛಾಪಾಖಾನೆ, ಹಂಚು, ಸಾಬೂನು ಮಾಡುವುದು ಮತ್ತು ಬಡಗಿಯ ಕೆಲಸ ಮುಂತಾಗಿ ಅವರ ಜೀವನೋಪಾಯಕ್ಕಾಗಿ ಪರಿಚಯಿಸಿದರು. ಅಂತೆಯೇ, ವಿಧವೆಯರಿಗಾಗಿ ವೃತ್ತಿ ಸೌಲಭ್ಯ, ಮಹಿಳೆಯರಿಗೆ ಸಮಾಜದಲ್ಲಿ ಸಮಾನ ಭಾವ ಇತ್ಯಾದಿ ಮೌಲ್ಯಗಳಿಗಾಗಿ ಬಾಸೆಲ್ ಮಿಷನ್ ಕಾರ್ಯವೆಸಗಿದೆ.[೭೦] ಹೊಸಗನ್ನಡ ಅರುಣೋದಯಕ್ಕೆ ಬಾಸೆಲ್ ಮಿಷನ್ನಿನ

ಕೊಡುಗೆ ಅಪಾರ. ಕನ್ನಡದಲ್ಲಿ ಪತ್ರಿಕೋದ್ಯಮವನ್ನು ಪ್ರಥಮವಾಗಿ ಆರಂಭಿಸಿದ ಇವರು ಕನ್ನಡ ಭಾಷೆಯ ಮೊತ್ತ ಮೊದಲನೆಯ ವಾರ್ತಾ ಪತ್ರಿಕೆಯಾದ 'ಮಂಗಳೂರು ಸಮಾಚಾರ' ವನ್ನು ೧೮೪೩ರಲ್ಲಿ ಪ್ರಾರಂಭಿಸಿದರು. ಪ್ರಕಾಶನ ಕ್ಷೇತ್ರದಲ್ಲಿ ಸಾಹಿತ್ಯ, ಪ್ರಾಚೀನ ಕಾವ್ಯ, ಶಬ್ದ ಕೋಶ, ಛಂದಸ್ಸು, ವ್ಯಾಕರಣ, ನಾನಾರ್ಥ ಕೋಶ ಸಂಕಲನಗಳು, ಚಿತ್ರಮಯ ಪ್ರದೇಶ ಪರಿಚಯ, ಪಠ್ಯಪುಸ್ತಕಗಳು, ಬಾಲಸಾಹಿತ್ಯ ಹೀಗೆ ಹಲವಾರು ಬಗೆಯ ಪ್ರಕಟಣೆಗಳು ಇವರಿಂದ ಹೊರ ಬಂದವು. ತುಳು ಸಾಹಿತ್ಯಾಭಿವೃದ್ಧಿಗೂ ಬಾಸೆಲ್ ಮಿಷನ್ ಅಪೂರ್ವ ಕೊಡುಗೆಯನ್ನಿತ್ತಿದೆ. ಬ್ರಿಗೆಲ್ ಹಾಗೂ ಮ್ಯಾನರ್, ಕ್ರೇಮರರ್ ೧೮೭೨ರಲ್ಲಿ ಪ್ರಥಮ ತುಳು ವ್ಯಾಕರಣ ಗ್ರಂಥವನ್ನು ರಚಿಸಿದರು ಹಾಗೂ ತುಳು - ಇಂಗ್ಲಿಷ್ ನಿಘಂಟನ್ನು ೧೮೮೮ರಲ್ಲಿ ಪ್ರಕಟಿಸಿದರು. ತುಳು ಪಾಡ್ದನದ ಬಗ್ಗೆ ಮ್ಯಾನರ್ ಇವನ ಸಂಶೋಧನೆ ಮತ್ತು ಪ್ರಕಟಣೆ ಅತೀ ಮಹತ್ವವುಳ್ಳದಾಗಿದೆ.

೧೮೫೫ರಲ್ಲಿ ಬ್ರಿಟಿಷರು ಪ್ರಸ್ತುತ ಜಿಲ್ಲೆಯಲ್ಲಿದ್ದ ಶಾಲೆಗಳನ್ನು ಮುಂದುವರಿಸಲು ತೀರ್ಮಾನಿಸಿ, ಸರಕಾರಿ ಶಾಲೆಗಳನ್ನು ೧೮೫೫-೫೬ರ ಅವಧಿಯಲ್ಲಿ ಪ್ರಾರಂಭಿಸಿದರು. ತದನಂತರ ಪ್ರಾಥಮಿಕ, ಮಾಧ್ಯಮಿಕ ಮತ್ತು ಕಾಲೇಜುಗಳು ನಿರ್ದಿಷ್ಟ ರೂಪ ಪಡೆದವು. ೧೮೬೩ರ ಮದ್ರಾಸ್ ಎಲಿಮೆಂಟರಿ ಆಕ್ಟ್ ಮತ್ತು ೧೮೭೧ರ ಲೋಕಲ್ ಫಂಡ್ ಆಕ್ಟ್ ಶಾಲೆಗಳ ನಿರ್ವಹಣೆ ಮತ್ತು ಸ್ಥಳೀಯ ಸಂಸ್ಥೆಗಳಿಂದ ತನಿಖೆಗೆ ಆದೇಶಿಸಿ, ನಗರಗಳಲ್ಲಿ ಮುನಿಸಿಪಾಲಿಟಿಗಳಿಗೆ ಪ್ರಾಥಮಿಕ ಶಿಕ್ಷಣದ ಜವಾಬ್ದಾರಿಯನ್ನು ವಹಿಸಲಾಯಿತು. ಇದರಿಂದ ಪ್ರಾಥಮಿಕ ಶಾಲೆಗಳ ಸಂಖ್ಯೆಯೂ ಹೆಚ್ಚಿದವು. ೧೮೭೦-೭೧ರಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೭೩ ಶಾಲೆಗಳಿದ್ದು, ಅದು ೧೮೮೦-೮೧ರ ವೇಳೆಗೆ ೧೪೮ಕ್ಕೆ ಏರಿತು. ಅವುಗಳಲ್ಲಿ ೧೨೩ ಪ್ರಾಥಮಿಕ ಶಾಲೆಗಳಾಗಿದ್ದವು.

**೧೮೭೧ - ೭೨ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶಿಕ್ಷಣ ಪಡೆಯುತ್ತಿದ್ದ ಬಾಲಕಿಯರ ಸಂಖ್ಯೆ ಮತ್ತು ಸರಾಸರಿ ಇಂತಿವೆ.**

| ಜಿಲ್ಲೆಯ ಹೆಸರು | ಹನ್ನೆರಡು ವರ್ಷಕ್ಕಿಂತ ಮೇಲ್ಪಟ್ಟ ಬಾಲಕಿಯರು | ಒಟ್ಟು ಶಾಲೆಗಳ ಸಂಖ್ಯೆ | ವಿದ್ಯಾರ್ಥಿನಿಯರ ಸಂಖ್ಯೆ | ಸರಾಸರಿ |
|---|---|---|---|---|
| ದಕ್ಷಿಣ ಕನ್ನಡ | ೧೫೭೧೧೦ | ೭ | ೩೬೬ | ೨೩.೨.೯ |

ಆಧಾರ: ೧೮೭೧ರ ಜನಗಣತಿಯ ವರದಿ ಪುಟ ಸಂಖ್ಯೆ ೧೯೪ [೭೧]

೧೮೮೧ ಹಾಗೂ ೧೮೯೧ರಲ್ಲಿ ದಕ್ಷಿಣ ಕನ್ನಡ ಹಾಗೂ ಮದ್ರಾಸ್ ಪ್ರೆಸಿಡೆನ್ಸಿಯಲ್ಲಿದ್ದ ವಿದ್ಯಾರ್ಥಿ/ವಿದ್ಯಾರ್ಥಿನಿಯರು, ಅಕ್ಷರಸ್ಥರು ಮತ್ತು ಅನಕ್ಷರಸ್ಥರ ಸರಾಸರಿ ಇಂತಿದೆ.[೨೨]

| ಬಾಲಕರು | ಬಾಲಕಿಯರು | | | | ಬಾಲಕರು | | | |
|---|---|---|---|---|---|---|---|---|
| | ದಕ್ಷಿಣ ಕನ್ನಡ | | ಮದ್ರಾಸ್ ಪ್ರೆಸಿಡೆನ್ಸಿ | | ದಕ್ಷಿಣ ಕನ್ನಡ | | ಮದ್ರಾಸ್ ಪ್ರೆಸಿಡೆನ್ಸಿ | |
| | ೧೮೯೧ | ೧೮೮೧ | ೧೮೮೧ | ೧೮೯೧ | ೧೮೮೧ | ೧೮೯೧ | ೧೮೮೧ | ೧೮೯೧ |
| ವಿದ್ಯಾಭ್ಯಾಸ ಮಾಡುತ್ತಿರುವವರು | ೩೭೦ | ೨೩೩ | ೩೩೮ | ೩೪೯ | ೪೬ | ೧೮ | ೩೪ | ೨೬ |
| ಅಕ್ಷರಸ್ಥರು | ೯೯೧ | ೮೩೩ | ೧೧೮೫ | ೧೦೨೭ | ೭೦ | ೫೧ | ೬೯ | ೬೨ |
| ಅನಕ್ಷರಸ್ಥರು | ೮೬೩೯ | ೮೯೩೪ | ೮೪೭೭ | ೮೬೨೪ | ೯೮೮೪ | ೯೯೩೧ | ೯೮೯೭ | ೯೯೧೨ |

ಮೇಲಿನ ದತ್ತಾಂಶಗಳ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶಿಕ್ಷಣಕ್ಕೆ ಬಾಲಕರಿಗಿಂತಲೂ ಬಾಲಕಿಯರ ಸ್ಪಂದನೆ ಧನಾತ್ಮಕವಾಗಿರುವುದು ಕಂಡು ಬರುತ್ತದೆ. ೧೮೯೨-೯೩ರಲ್ಲಿ ರೂಪಾಯಿ ೧,೫೯,೨೯೪ ಶಿಕ್ಷಣಕ್ಕಾಗಿ ವ್ಯಯಿಸಲಾಗಿದ್ದು, ಅದರಲ್ಲಿ ೧/೩ಭಾಗದಷ್ಟು ಹಣವನ್ನು ಶಾಲಾ ಶುಲ್ಕದಿಂದ ಸಂಗ್ರಹಿಸಲಾಗಿತ್ತು. ಬಾಲಕ/ಬಾಲಕಿಯರ ಆರೋಗ್ಯವನ್ನು ಗಮನಹರಿಸುವ ನಿಟ್ಟಿನಲ್ಲಿ ೧೮೮೦ರಲ್ಲಿ ಜಿಲ್ಲೆಯ ಶಾಲೆಗಳಲ್ಲಿ ದಾಖಲಾತಿ ಪಡೆಯಲು ಇಚ್ಛಿಸುವವರಿಗೆ ಲಸಿಕೆಯನ್ನು ಕಡ್ಡಾಯ ಮಾಡಿ, ವಿದ್ಯಾರ್ಥಿ ವೇತನ ಪಡೆಯಲು ಹಾಗೂ ಇನ್ನಿತರ ಸೌಲಭ್ಯಗಳಿಗೆ ಇದನ್ನು ಅನ್ವಯವಾಗುವಂತೆ ಜಾರಿಗೆ ತರಲಾಯಿತು. ಹೆಚ್ಚಿನ ಬಾಲಕಿಯರನ್ನು ಶಿಕ್ಷಿತರನ್ನಾಗಿ ಮಾಡುವ ನಿಟ್ಟಿನಲ್ಲಿ ಮಾಡಿದ ಪ್ರಯತ್ನ ಇದಾಗಿದೆ.[೨೩] ಸರಕಾರವು ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿದುದರಿಂದ, ೧೮೯೮ರಲ್ಲಿ ಜಿಲ್ಲೆಯಲ್ಲಿದ್ದ ೨೮೦ ಶಾಲೆಗಳಲ್ಲಿ ೬೭೬೬ ಮಂದಿ ಬಾಲಕರು ಮತ್ತು ೧೧೫೦ ಮಂದಿ ಬಾಲಕಿಯರು ಶಿಕ್ಷಣ ಪಡೆಯುತ್ತಿದ್ದರು. ಆದರೂ, ಶೈಕ್ಷಣಿಕವಾಗಿ ಜಿಲ್ಲೆಯು ಹಿಂದುಳಿದಿರುವುದು ವರದಿಗಳಿಂದ ತಿಳಿದುಬರುತ್ತದೆ.

**೧೮೯೨-೯೩ರಲ್ಲಿ ಜಿಲ್ಲೆಯ ವಿವಿಧ ಜಾತಿ, ಪಂಗಡ ಅಥವಾ ಜನಾಂಗವಾರು ವಿದ್ಯಾರ್ಥಿ/ವಿದ್ಯಾರ್ಥಿನಿಯರ ಶೈಕ್ಷಣಿಕ ಹಂಚುವಿಕೆ ಇಂತಿದೆ.** [೭೪]

| ಜಾತಿ, ಪಂಗಡ ಅಥವಾ ಜನಾಂಗ | ಬಾಲಕರು | ಬಾಲಕಿಯರು |
|---|---|---|
| ಯುರೇಶಿಯನ್ನರು | ೩೪ | ೩೭ |
| ಸ್ಥಳೀಯ ಕ್ರೈಸ್ತರು | ೨೭೪೦ | ೧೧೨೭ |
| ಮುಸಲ್ಮಾನರು | ೨೪೨೭ | ೩೦೫ |
| ಬ್ರಾಹ್ಮಣರು | ೪೭೮೭ | ೭೧೫ |
| ಇತರ ಹಿಂದುಗಳು | ೬೫೧೮ | ೭೭೧ |
| ಪಂಚಮರು | ೯೫೧ | ೧೫ |
| ಇತರರು | ೧೫ | ೫ |
| ಒಟ್ಟು | ೧೭೪೮೨ | ೨೯೭೫ |

೧೯೧೩ರ ಎಡುಕೇಶನ್ ಪಾಲಿಸಿಯಲ್ಲಿ ಕಂಡುಬರುವಂತೆ ಭಾರತದಲ್ಲಿ ೧೯೦೧-೧೯೦೨ರಲ್ಲಿ ಶಿಕ್ಷಣ ಪಡೆಯುತ್ತಿರುವ ಬಾಲಕಿಯರ ಸಂಖ್ಯೆ ೪೪೪೪೭೦ ಆಗಿದ್ದು, ೧೯೧೦-೧೧ರ ವೇಳೆಗೆ ಈ ದತ್ತಾಂಶವು ೮೬೪೩೬೩ರಷ್ಟು ಏರಿಕೆಯಾಗಿರುತ್ತದೆ. ದೇಶದ ಒಟ್ಟು ಮಹಿಳೆಯರ ಸಂಖ್ಯೆಗೆ ಹೋಲಿಸಿದರೆ ಶಿಕ್ಷಣ ಪಡೆಯುತ್ತಿರುವ ಬಾಲಕಿಯರು ಕಡಿಮೆ ಪ್ರಮಾಣದಲ್ಲಿದ್ದು, ಕೆಲವೆಡೆ ಮಹಿಳಾ ಶಿಕ್ಷಣಕ್ಕೆ ವ್ಯಾಪಕವಾದ ಬೇಡಿಕೆಯೂ ಕಂಡುಬಂದಿರುತ್ತದೆ. ಗವರ್ನರ್ ಜನರಲ್ ಅನಿಸಿಕೆಯಂತೆ 'ಭಾರತೀಯ ಸಮಾಜ ಹಿಂದುಳಿದಿರುವುದು ಮಹಿಳೆಯರ ಶಿಕ್ಷಣಕ್ಕಿರುವ ಮೊದಲ ನ್ಯೂನ್ಯತೆಯಾಗಿದೆ. ಆದರೆ ಬ್ರಿಟಿಷ್ ಆಡಳಿತದಲ್ಲಿ ಹಾಗೂ ಸ್ಥಳೀಯ ಆಡಳಿತದಲ್ಲಿ ಅಡೆತಡೆಗಳಾಗಬಹುದೆಂಬ ಕಾರಣದಿಂದಾಗಿ ಸ್ತ್ರೀ ಶಿಕ್ಷಣ ಸಂಬಂಧಿ ನೀತಿಗಳನ್ನು ತೆಗೆದುಕೊಳ್ಳಲು ಬ್ರಿಟಿಷ್ ಸರಕಾರ ಹಿಂಜರಿಕೆ ತೋರುತ್ತಿದೆ' ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಅಂತೆಯೇ, ಸ್ತ್ರೀ ಶಿಕ್ಷಣಕ್ಕೆ ಸಂಬಂಧಿಸಿದಂತೆ ಗವರ್ನರ್ ಜನರಲ್ ಶಿಫಾರಸು ಮಾಡಿದ ನಿಯಮಗಳ ಪ್ರಕಾರ, 'ಸಮಾಜದಲ್ಲಿ ತಮ್ಮ ಸ್ಥಾನಮಾನ ತುಂಬುವ ಸಲುವಾಗಿ ಮಹಿಳೆಯರಿಗೆ ನೀಡುವ ಶಿಕ್ಷಣ ಪ್ರಾಯೋಗಿಕವಾಗಿರಬೇಕು. ಬಾಲಕರಿಗೆ ನೀಡುವ ಶಿಕ್ಷಣವನ್ನು ಬಾಲಕಿಯರಿಗೆ ಅನುಕರಿಸುವಂತಿರಬಾರದು ಮತ್ತು ಪರೀಕ್ಷೆಗಳ ಪ್ರಭಾವ ತೋರುವಂತಿರಬಾರದು. ನೈರ್ಮಲ್ಯಕ್ಕೆ ವಿಶೇಷ ಪ್ರಾಶಸ್ತ್ಯ ನೀಡುವುದು ಹಾಗೂ ಶಾಲೆಗಳಲ್ಲಿ ಭೋಧನೆಗಾಗಿ ಮತ್ತು ತಪಾಸಣೆಗಾಗಿ ಬಾಲಕಿಯರನ್ನು ಸೇರ್ಪಡೆಗೊಳಿಸುವುದು' ಪ್ರಮುಖವಾದ ಅಂಶಗಳಾಗಿದ್ದವು. ಆದರೆ ಈ ನಿಯಮಗಳ ಪಾಲನೆಗೆ ಭಾರತದಾದ್ಯಂತ ನುರಿತ ಶಾಲಾ ಮುಖ್ಯೋಪಾಧ್ಯಾಯಿನಿಯವರನ್ನು ಪಡೆಯುವುದು ಕಷ್ಟಕರವಾಗಿತ್ತು.[೭೫] ೧೯೦೪ರಲ್ಲಿ ಭಾರತ ಸರಕಾರ

ಮಹಿಳಾ ಶಿಕ್ಷಣಕ್ಕಿರುವ ಸಾಮಾಜಿಕ ಆಚರಣೆಗಳ ಕುರಿತು ಹೇಳಿಕೆಗಳನ್ನು ನೀಡಿರುವ ಪ್ರಕಾರ, ಮಹಿಳೆಯರಿಗೆ ನೀಡಿದ ಶಿಕ್ಷಣದಿಂದ ಜನರಲ್ಲಿ ಕಂಡುಬಂದ ಶೈಕ್ಷಣಿಕ ಮತ್ತು ನೈತಿಕತೆಯ ಪ್ರತಿಧ್ವನಿ, ಪುರುಷರಿಗೆ ನೀಡಿದ ಶಿಕ್ಷಣದಿಂದ ಕಂಡುಬರುವುದಿಲ್ಲ ಎಂಬ ಕಾರಣಕ್ಕಾಗಿ, ಬಾಲಕಿಯರ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುವ ನಿಟ್ಟಿನಲ್ಲಿ ವಿದ್ಯಾರ್ಥಿ ವೇತನ ಮತ್ತು ಶಾಲಾ ಶುಲ್ಕದಲ್ಲಿ ರಿಯಾಯಿತಿ ನೀಡಲಾರಂಭಿಸಿತು. ಸರಕಾರಿ ಮತ್ತು ಸರಕಾರಿ ಅನುದಾನಿತ ಶಾಲೆಗಳಲ್ಲಿ ಪುರುಷ ಬೋಧಕರ ಬದಲು ಮಹಿಳಾ ಭೋದಕಿಯರನ್ನು ನೇಮಿಸುವುದರೊಂದಿಗೆ ಸ್ತ್ರೀ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಲಾಯಿತು.[೭೬] ೧೯೨೧ರ ಜನಗಣತಿಯ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಹಿಳಾ ಸಾಕ್ಷರರ ಸಂಖ್ಯೆ ಮುಂದುವರಿದಿದ್ದು, ಮಂಗಳೂರು ಮೊದಲ ಸ್ಥಾನದಲ್ಲಿತ್ತು. ಇದರಲ್ಲಿ ಇಂಗ್ಲಿಷ್ ಸಾಕ್ಷರರ ಸಂಖ್ಯೆ ೨೭೩೨ ರಷ್ಟಿದ್ದು, ೭೦೫ ಮಂದಿ ಹಿಂದೂಗಳು, ೨೩ ಮಂದಿ ಮುಸಲ್ಮಾನರು, ೧೮ ಮಂದಿ ಜೈನರು ಹಾಗೂ ೧೯೮೪ ಮಂದಿ ಕ್ರೈಸ್ತರು ಇಂಗ್ಲಿಷ್ ಭಾಷೆಯ ಜ್ಞಾನ ಹೊಂದಿದ್ದರು.

**೧೯೦೧ರ ಸಾಕ್ಷರರ ಸರಾಸರಿ ಇಂತಿದೆ.** [೭೭]

| ತಾಲೂಕುಗಳು | ಮಹಿಳಾ ಸಾಕ್ಷರರು | ಸರಾಸರಿ |
|---|---|---|
| ಕುಂದಾಪುರ ವಿಭಾಗ | | |
| ಕುಂದಾಪುರ ... | ೩೪೩ | ೫ |
| ಉಡುಪಿ ... | ೯೬೨ | ೭ |
| ಮಂಗಳೂರು ವಿಭಾಗ | | |
| ಮಂಗಳೂರು ... | ೨೯೧೬ | ೧೭ |
| ಪುತ್ತೂರು ವಿಭಾಗ | | |
| ಕಾಸರಗೋಡು ... | ೯೬೨ | ೮ |
| ಉಪ್ಪಿನಂಗಡಿ ... | ೩೫೩ | ೪ |
| ಒಟ್ಟು | ೫೫೩೫ | ೯ |
| ಹಿಂದೂಗಳು ... | ೨೮೬೧ | ೬ |
| ಮುಸಲ್ಮಾನರು ... | ೪೯೭ | ೮ |
| ಕ್ರೈಸ್ತರು ... | ೨೦೯೧ | ೪೯ |
| ಜೈನರು ... | ೮೪ | ೧೮ |
| ಇತರರು ... | ೨ | ೫೦೦ |

೧೯೩೧ರ ಜನಗಣತಿಯಂತೆ ಮಂಗಳೂರು ಮದ್ರಾಸ್ ಪ್ರೆಸಿಡೆನ್ಸಿಯು ಸಾಕ್ಷರರಲ್ಲಿ ಉನ್ನತ ಮಟ್ಟದಲ್ಲಿತ್ತು. ಮಹಿಳಾ ಸಾಕ್ಷರರಲ್ಲಿ ೧೮೧೦೫ ಮಂದಿ ಹಿಂದೂಗಳು, ೧೬೨೫ ಮಂದಿ ಮುಸಲ್ಮಾನರು, ೮೩೪೬ ಮಂದಿ ಕ್ರೈಸ್ತರು ಹಾಗೂ ೫೪೫ ಮಂದಿ ಜೈನರಿದ್ದರು.[೨೮] ೧೯೨೬-೨೭ರಲ್ಲಿ ಸರಕಾರವು ರೂಪಾಯಿ ೧,೯೩ ರಷ್ಟು ಮೊತ್ತವನ್ನು ಶಿಕ್ಷಣಕ್ಕೆ ವ್ಯಯಿಸಿ, ಅದರಲ್ಲಿ ೧,೨೩೬ ರೂಪಾಯಿಯನ್ನು ಭಾರತದಲ್ಲಿ ಶಿಕ್ಷಣಕ್ಕಾಗಿ ಮೀಸಲಾಗಿಟ್ಟಿತ್ತು.[೨೯] ೧೯೩೦ರ ನಂತರ ಶಿಕ್ಷಕರ ವೇತನ, ತರಬೇತಿಗೆ ಸಂಬಂಧಿಸಿದಂತೆ ಹಲವಾರು ಸುಧಾರಣೆಗಳು ಕಂಡು ಬಂದವು. ದತ್ತಾಂಶಗಳ ಪ್ರಕಾರ ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ಶೇಕಡಾ ೮೪.೭ರಷ್ಟು ತರಬೇತಿ ಪಡೆದ ಶಿಕ್ಷಕರಿದ್ದರು.[೩೦] ೧೯೨೭ರಲ್ಲಿ ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ವ್ಯಾಸಂಗ ಮಾಡುತ್ತಿದ್ದ ಮುಸಲ್ಮಾನ ವಿದ್ಯಾರ್ಥಿಗಳ ದಾಖಲಾತಿಯಲ್ಲಿ ಏರಿಕೆ ಕಂಡು ಬಂದಿದ್ದು, ಕಲಾ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವವರ ಸಂಖ್ಯೆ ೧೪೧ ರಿಂದ ೨೯೩ಕ್ಕೆ ಏರಿತ್ತು. ಇವರಲ್ಲಿ ೪ ಮಂದಿ ಮಹಿಳೆಯರೂ ಸೇರಿದ್ದರು. ೧೯೨೭ರಲ್ಲಿ ಪ್ರಾಥಮಿಕ ಶಿಕ್ಷಣ ಪಡೆಯುತ್ತಿದ್ದ ಮುಸಲ್ಮಾನ ವಿದ್ಯಾರ್ಥಿನಿಯರ ಸಂಖ್ಯೆ ೫೪೦೦೦ ಆಗಿದ್ದು ಈ ದತ್ತಾಂಶವು ೧೯೨೨ಕ್ಕಿಂತ ಶೇಕಡಾ ೯ರಷ್ಟು ಹೆಚ್ಚಿರುವುದು ಕಂಡುಬರುತ್ತದೆ.

೧೯೨೭ರಲ್ಲಿ ಮದ್ರಾಸು ಪ್ರೆಸಿಡೆನ್ಸಿಯಲ್ಲಿ ೧೭.೫ ಶೇಕಡ ವಿದ್ಯಾರ್ಥಿನಿಯರು ಶಿಕ್ಷಣ ಪಡೆಯುತ್ತಿದ್ದು ಈ ದತ್ತಾಂಶವು ಇನ್ನುಳಿದ ಪ್ರಾಂತ್ಯಗಳಾದ (ಬೊಂಬಾಯಿಯಲ್ಲಿ - ೧೬.೮, ಬಂಗಾಳದಲ್ಲಿ - ೧೩.೨, ಯುನೈಟೆಡ್ ಪಾವಿನ್ಸಸ್ - ೩.೯, ಪಂಜಾಬಿನಲ್ಲಿ - ೬.೮, ಬರ್ಮಾದಲ್ಲಿ - ೧೮.೪, ಬಿಹಾರ ಮತ್ತು ಒರಿಸ್ಸಾದಲ್ಲಿ - ೪.೮ ಅಸ್ಸಾಮಿನಲ್ಲಿ - ೬.೮) ಇವುಗಳಿಗಿಂತ ಹೋಲಿಕೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿತ್ತು ಎಂದು ತಿಳಿದು ಬರುತ್ತದೆ.[೩೧]

೧೯೨೬-೨೭ರಲ್ಲಿ ಭಾರತದಲ್ಲಿ ಹೆಣ್ಣುಮಕ್ಕಳ ಶಾಲೆಗಳಲ್ಲಿ ಒಟ್ಟು ೩೨೦೦೦ ಮಂದಿ ಶಿಕ್ಷಕಿಯರಿದ್ದರು ಎಂದು ಅಂದಾಜಿಸಲಾಗಿದೆ. ಈ ಅಂಕಿ ಅಂಶಗಳ ಪ್ರಕಾರ ಪ್ರತಿ ಬಾಲಕಿಯರ ಶಿಕ್ಷಣ ಸಂಸ್ಥೆಗಳಿಗೆ ೧.೨ ಮಂದಿ ಶಿಕ್ಷಕಿಯರು ಮತ್ತು ಪ್ರತಿ ೫೦ ಮಂದಿ ವಿದ್ಯಾರ್ಥಿನಿಯರಿಗೆ ತಲಾ ಒಬ್ಬ ಶಿಕ್ಷಕಿ ಎಂದು ಪರಿಗಣಿಸಲ್ಪಟ್ಟಿದೆ. ಬಾಲಕಿಯರ ಶಾಲೆಗಳಲ್ಲಿ ಮಹಿಳಾ ಶಿಕ್ಷಕಿಯರನ್ನು ಅವಲಂಭಿಸಿ ಪ್ರಗತಿ ಕಂಡು ಬಂದಿರುವುದು ಗಮನಾರ್ಹವಾಗಿದೆ. ಅದೇ ರೀತಿಯಲ್ಲಿ ೧೯೨೭ರಲ್ಲಿ ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ೧೯೧೩ ಮಂದಿ ಮಹಿಳೆಯರು ಶಿಕ್ಷಕ ತರಬೇತಿಯನ್ನು ಪಡೆಯುತ್ತಿದ್ದರು. ೧೯೨೯ರ ಹರ್ತೋಗ್ ಕಮಿಟಿಯ ವರದಿಯಂತೆ ೧ನೇ ತರಗತಿಯಲ್ಲಿ ಓದುತ್ತಿರುವ ನೂರು ಮಂದಿ ಬಾಲಕಿಯರಲ್ಲಿ ಕೇವಲ ೧೪ ಮಂದಿ ಮಾತ್ರ ನಾಲ್ಕನೇ ತರಗತಿ ತಲುಪುತ್ತಿದ್ದು, ಬಾಲಕಿಯರಿಗೆ ಶಿಕ್ಷಣ ನೀಡಲು ಕೈಗೊಳ್ಳುತ್ತಿರುವ ಶೇಕಡಾ ೮೦ರಷ್ಟು ಪ್ರಯತ್ನ ವಿಫಲವಾಗುತ್ತಿದೆ ಎಂಬ ಪ್ರತಿಕ್ರಿಯೆ ಕಂಡು ಬರುತ್ತದೆ.[೩೨] ಮದರಾಸಿನಲ್ಲಿ ನಡೆದ ಘಟಿಕೋತ್ಸವದಲ್ಲಿ ಮಾತನಾಡಿದ ಡಾ.ಡಂಕನ್ ರವರು 'ಭಾರತೀಯ ಸಮಾಜದಲ್ಲಿ ಬಾಲಕರ ಶಿಕ್ಷಣಕ್ಕೆ ಪ್ರಾಶಸ್ತ್ಯ ಮತ್ತು ಮಹಿಳಾ ಶಿಕ್ಷಣದ ನಿರ್ಲಕ್ಷಿಸುವಿಕೆ ವಿದೇಶಿಯರಿಗೆ ಎದ್ದು ಕಾಣುವ ವಿಸ್ಮಯವಾಗಿದೆ' ಎಂದಿರುವರು.[೩೩] ಮದ್ರಾಸ್ ಪ್ರೆಸಿಡೆನ್ಸಿ ಮತ್ತು ಬೊಂಬೈ ಪ್ರೆಸಿಡೆನ್ಸಿಗಳಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ದೇಶದ ಇನ್ನುಳಿದ ಭಾಗಗಳಿಗಿಂತ ಎರಡು

ಪಟ್ಟು ಜಾಸ್ತಿ ವ್ಯಯಿಸಲಾಗಿತ್ತು. ಮದ್ರಾಸ್ ಪ್ರೆಸಿಡೆನ್ಸಿಯ ಸಾರ್ವಜನಿಕ ಶಿಕ್ಷಣ ನಿರ್ದೇಶಕರ ಪ್ರಕಾರ ಶಾಲೆಗಳಲ್ಲಿ ಶಿಕ್ಷಕಿಯರ ಕೊರತೆ ಕಂಡುಬಂದರೂ ದಾಖಲೆಗಳನ್ನು ಅವಲೋಕಿಸಿದಾಗ ಇನ್ನುಳಿದ ಭಾರತೀಯ ಪ್ರದೇಶಗಳಿಗಿಂತ ತೃಪ್ತಿಕರವಾಗಿ ಕಂಡುಬರುತ್ತದೆ.[೮೪] ಇದಕ್ಕೆ ಪೂರಕವಾಗಿ ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ಸ್ಥಳೀಯ ಸರಕಾರಕ್ಕೆ ತಯಾರಿಸಿದ ವರದಿಯಲ್ಲಿ 'ಭವಿಷ್ಯದಲ್ಲಿ ತಾಯಂದಿರಿಗೆ ಶಿಕ್ಷಣ ನೀಡಿದರೆ ಸಾಮಾಜಿಕ ಸುಧಾರಣೆ, ನೈರ್ಮಲೀಕರಣ ಮತ್ತು ಸಾರ್ವಜನಿಕರ ಆರೋಗ್ಯದಲ್ಲಿ ವೇಗವಾಗಿ ಕಂಡು ಬರಬಹುದು. ಸುಧಾರಣಾ ಕಾರ್ಯಕ್ರಮದಲ್ಲಿ ದೇಶದ ಮಹಿಳೆಯರಿಗೆ ಶಿಕ್ಷಣ ನೀಡುವುದಕ್ಕೆ ಮೊದಲ ಆದ್ಯತೆ ನೀಡಬೇಕು' ಎಂಬದು ಸ್ತ್ರೀ ಶಿಕ್ಷಣದ ಕುರಿತು ಜಾಗೃತಿ ಮೂಡಿಸುವಲ್ಲಿ ಮುಖ್ಯವಾದ ಅಂಶವಾಗಿದೆ.[೮೫]

೧೯೩೩ರಲ್ಲಿ ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ಮುಸಲ್ಮಾನ ಹೆಣ್ಣುಕ್ಕಳಿಗೆ ೧೪೦ ಶಾಲೆಗಳಿದ್ದು, ೭,೬೪೫ ಮಂದಿ ಬಾಲಕಿಯರು ಶಿಕ್ಷಣವನ್ನು ಪಡೆಯುತ್ತಿದ್ದರು. ದಕ್ಷಿಣ ಕನ್ನಡ ಜಿಲ್ಲಾ ಬೋರ್ಡ್ ಶಾಲೆಗಳಲ್ಲಿ ಎಲ್ಲಾ ವರ್ಗದ ಬಾಲಕ ಬಾಲಕಿಯರಿಗೆ ಅವಕಾಶ ನೀಡಲಾಯಿತು. ಆದರೆ ಈ ಶಾಲೆಗಳಲ್ಲಿ ಆದಿದ್ರಾವಿಡ ಮಕ್ಕಳ ಹಾಜರಾತಿ ತುಂಬಾ ಕಡಿಮೆಯಾಗಿತ್ತು.[೮೬] ೧೯೩೪ರಲ್ಲಿ ಶಾಲೆಗೆ ಪ್ರವೇಶ ಪಡೆಯುವ ವಯಸ್ಸಿನ ಮಕ್ಕಳ ಒಟ್ಟು ಸಂಖ್ಯೆ ೧,೭೭,೧೬೮ ರಷ್ಟಿದ್ದು (೮೭,೦೭೬ ಮಂದಿ ಬಾಲಕರು ಮತ್ತು ೯೦,೯೨ ಮಂದಿ ಬಾಲಕಿಯರು) ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದ ಒಟ್ಟು ಶಾಲೆಗಳ ಸಂಖ್ಯೆ ೧೧೬೨ (೧೦೪೧ ಬಾಲಕರಿಗಾಗಿ ಮತ್ತು ೧೨೧ ಬಾಲಕಿಯರಿಗಾಗಿ) ಆಗಿತ್ತು. ೧೯೩೫ರಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ಇಳಿಮುಖ ಕಂಡರೂ ಬಾಲಕ ಮತ್ತು ಬಾಲಕಿಯರ ಸಂಖ್ಯೆಯಲ್ಲಿ ಹೆಚ್ಚಳ ಕಂಡು ಬಂದಿರುತ್ತದೆ.

೧೯೩೨ರಲ್ಲಿ ಮೂಕರು ಮತ್ತು ಕಿವುಡರಿಗಾಗಿ ೯ ಶಾಲೆಗಳಿದ್ದು, ಅವುಗಳಲ್ಲಿ ೨ ಶಾಲೆಗಳು ಬಾಲಕಿಯರಿಗಾಗಿ ಮೀಸಲಾಗಿಟ್ಟಿರುವುದು ಸರಕಾರದ ಗಮನಾರ್ಹವಾದ ನಿಲುವು ಎನ್ನಬಹುದು. ೧೯೩೪ರ ಶೈಕ್ಷಣಿಕ ವರದಿಯಲ್ಲಿ ಕಂಡುಬರುವಂತೆ, ಜಿಲ್ಲೆಯಲ್ಲಿ ವಿದ್ಯಾರ್ಥಿಗಳ ಹಾಜರಾತಿ ೭೩.೯% ರಷ್ಟಿದ್ದು, ವಿದ್ಯಾರ್ಥಿನಿಯರ ಹಾಜರಾತಿ ೭೨.೪% ಆಗಿತ್ತು. ೧೯೩೫ ರಲ್ಲಿ ಪ್ರಾಥಮಿಕ ಶಿಕ್ಷಣ ಪಡೆಯುತ್ತಿದ್ದವರ ಸಂಖ್ಯೆ ೭೦೩೯ ರಷ್ಟಿದ್ದು, ಇವರಲ್ಲಿ ೪೦೮೬ ಮಂದಿ ಬಾಲಕರು ಮತ್ತು ೨೯೫೩ ಮಂದಿ ಬಾಲಕಿಯರಾಗಿದ್ದರು. ಇದೇ ವರ್ಷ ದಕ್ಷಿಣ ಕನ್ನಡ ಜಿಲ್ಲೆಯ ಮುನ್ಸಿಪಲ್ ಶಾಲೆಗಳಿಗೆ ದಾಖಲಾತಿ ಪಡೆದವರ ಶೇಕಡಾವಾರು ಸರಾಸರಿ ೩೨.೪ ಮತ್ತು ೩೦.೭ ರಷ್ಟಿದ್ದು ಈ ಶಾಲೆಗಳಲ್ಲಿ ಉಚಿತ ಶಿಕ್ಷಣ ನೀಡಲಾಗುತ್ತಿತ್ತು.[೮೭]

೧೯೩೫ರಲ್ಲಿ ೧೯ ಶಾಲೆಗಳು ಬಾಲಕಿಯರಿಗೆ ಶಿಕ್ಷಣ ನೀಡುತ್ತಿದ್ದು, ನಗರದಲ್ಲಿ ಬಾಲಕಿಯರ ದೈನಂದಿನ ಹಾಜರಾತಿ ೨೯೬೮ ರಿಂದ ೩೧೪೪೮ರಷ್ಟಿತ್ತು. ಮುನ್ಸಿಪಲ್ ಕೌನ್ಸಿಲ್ ಗಳು ಬಾಲಕಿಯರಿಗಾಗಿ ನಡೆಸುತ್ತಿದ್ದ ೯ ಶಾಲೆಗಳಲ್ಲಿ ಬಾಲಕಿಯರ ದೈನಂದಿನ ಹಾಜರಾತಿ ೭೮.೧ರಷ್ಟಿತ್ತು. ೧೯೩೫ರಲ್ಲಿ ಪ್ರಾಥಮಿಕ ಶಿಕ್ಷಣಕ್ಕಾಗಿ ಸರಕಾರ ೧೪, ೬೯೨ ರೂಪಾಯಿ ಮತ್ತು ಮುನ್ಸಿಪಲ್ ಕೌನ್ಸಿಲ್ ೩೪,೧೦೦ ರೂಪಾಯಿ ವ್ಯಯಿಸಿತ್ತು. ಮುನ್ಸಿಪಲ್ ಶಾಲೆಗಳಲ್ಲಿ ಬಾಲಕರಿಗೆ ಜೇಡಿಮಣ್ಣಿನ ಆಕೃತಿಗಳ ತಯಾರಿಕೆ, ಕಾಗದದ ವಿವಿಧ ಮಾದರಿಗಳ ರಚನೆ

(ತುಂಡರಿಸುವ ಮತ್ತು ಮಡಿಸುವ) ಇತ್ಯಾದಿಗಳ ಕುರಿತು ತರಬೇತಿ ನೀಡಲಾಗುತ್ತಿತ್ತು. ಬಾಲಕಿಯರಿಗೆ ಸೂಜಿಯಿಂದ ಚಾಪೆ ಹಾಸು ತಯಾರಿ, ಬುಟ್ಟಿ ನೇಯುವುದು ಇತ್ಯಾದಿಗಳನ್ನು ಕಲಿಸಲಾಗುತ್ತಿತ್ತು. ಹಿಂದುಳಿದ ವರ್ಗದವರಿಗಾಗಿ ನಡೆಸುತ್ತಿದ್ದ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ವಿವೇಕಾನಂದ ಸ್ಕೌಟ್ ತಂಡ ಸಂಘಟಿಸಲಾಗಿತ್ತು. ಅವರಿಗಾಗಿ ಮುನ್ಸಿಪಲ್ ಕೌನ್ಸಿಲ್ ನಡೆಸುತ್ತಿದ್ದ ಶಾಲೆಯಲ್ಲಿ ೩೯ ಮಂದಿ ವಿದ್ಯಾರ್ಥಿನಿಯರು ಹಾಗೂ ಸರಕಾರ ನಡೆಸುತ್ತಿದ್ದ ಶಾಲೆಯಲ್ಲಿ ೨೯ ಮಂದಿ ವಿದ್ಯಾರ್ಥಿನಿಯರು ವ್ಯಾಸಂಗ ಮಾಡುತ್ತಿದ್ದರು. ದಲಿತವರ್ಗದವರಿಗಾಗಿ ನಡೆಸಲಾಗುತ್ತಿದ್ದ ಎರಡು ಅನುದಾನಿತ ಖಾಸಗಿ ಶಾಲೆಗಳಲ್ಲಿ ೫೧ರಷ್ಟು ವಿದ್ಯಾರ್ಥಿನಿಯರು ಶಿಕ್ಷಣ ಪಡೆಯುತ್ತಿದ್ದರು. ಆದಿದ್ರಾವಿಡರಿಗೆ ಸರಕಾರದ ವತಿಯಿಂದ ನಡೆಸುತ್ತಿದ್ದ ೨ ಶಾಲೆಗಳಲ್ಲಿ ೨೭ ಮಂದಿ ಬಾಲಕಿಯರು ವ್ಯಾಸಂಗ ಮಾಡುತ್ತಿದ್ದರು. ೧೯೩೩ರಲ್ಲಿ ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಭೂಗೋಳ ಮತ್ತು ಸಂಗೀತದಲ್ಲಿ ಡಿಪ್ಲೋಮಾ ಕೋರ್ಸ್ ಗಳನ್ನು ಪ್ರಾರಂಭಿಸಲಾಯಿತು.[೮೮]

**೧೯೩೯ - ೪೦ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದ ಒಟ್ಟು ಶಾಲೆಗಳು ಮತ್ತು ವಿದ್ಯಾರ್ಥಿಗಳ ಸಂಖ್ಯೆ ಇಂತಿದೆ.**[೮೯]

| ತಾಲೂಕುಗಳು | | ಒಟ್ಟು ಬೋರ್ಡ್ ಶಾಲೆಗಳು | | | ಹಾಜರಿದ್ದವರ ಸಂಖ್ಯೆ | | |
|---|---|---|---|---|---|---|---|
| | | ೧೯೩೪-೩೫ | ೧೯೩೩-೩೪ | ೧೯೩೨-೩೩ | ೧೯೩೪-೩೫ | ೧೯೩೩-೩೪ | ೧೯೩೨-೩೩ |
| ಮಂಗಳೂರು | ಬಾಲಕರು | ೯೬ | ೯೬ | ೯೬ | ೬೬೩೭ | ೬೫೭೦ | ೬೫೬೩ |
| | ಬಾಲಕಿಯರು | ೧೬ | ೧೬ | ೧೬ | ೧೨೦೧ | ೧೧೭೨ | ೧೨೩೬ |
| ಕಾಸರಗೋಡು | ಬಾಲಕರು | ೧೩೬ | ೧೩೭ | ೧೪೩ | ೧೦೪೩೭ | ೯೮೦೯ | ೯೯೪೮ |
| | ಬಾಲಕಿಯರು | ೩೨ | ೩೩ | ೩೬ | ೧೫೪೦ | ೧೪೫೧ | ೧೭೬೪ |
| ಪುತ್ತೂರು | ಬಾಲಕರು | ೯೯+೩* | ೯೩ | ೬೬ | ೬೨೭೪ | ೫೯೭೪ | ೭೫೫೭ |
| | ಬಾಲಕಿಯರು | ೯+೧* | ೮ | ೬ | ೮೦೩ | ೫೮೮ | ೬೯೯ |
| ಉಡುಪಿ | ಬಾಲಕರು | ೭೧ | ೭೦ | ೭೩ | ೫೯೭೯ | ೫೫೪೭ | ೫೫೫೯ |
| | ಬಾಲಕಿಯರು | ೧೭ | ೧೭ | ೧೭ | ೧೬೪೫ | ೧೬೭೮ | ೧೫೯೩ |
| ಕುಂದಾಪುರ | ಬಾಲಕರು | ೧೦೦ | ೧೦೦ | ೯೮ | ೪೭೫೧ | ೪೪೪೮ | ೪೧೧೮ |
| | ಬಾಲಕಿಯರು | ೯ | ೯ | ೯ | ೭೦೮ | ೬೨೨ | ೫೯೯ |
| ಕಾರ್ಕಳ | ಬಾಲಕರು | ೬೩ | ೬೪ | ೬೬ | ೪೧೧೧ | ೩೮೮೫ | ೪೩೨೨ |
| | ಬಾಲಕಿಯರು | ೮ | ೮ | ೭ | ೩೭೨ | ೩೫೮ | ೩೫೯ |
| ಒಟ್ಟು | ಬಾಲಕರು | ೫೬೫+೩* | ೫೬೦ | ೫೪೨ | ೩೮೧೮೯ | ೩೬೨೩೩ | ೩೮೦೬೭ |
| | ಬಾಲಕಿಯರು | ೯೧+೧* | ೯೧ | ೯೧ | ೬೨೬೯ | ೫೮೬೯ | ೬೨೫೦ |

*ಜಿಲ್ಲಾ ಬೋರ್ಡ್ ನಿಧಿಯಿಂದ ನಿರ್ವಹಿಸಲ್ಪಡುತ್ತಿದ್ದ ಪಂಚಾಯತ್ ಶಾಲೆಗಳು (ಸೌತ್ ಕೆನರಾ ಗಜೆಟ್ ಪುಟ ಸಂಖ್ಯೆ ೧೮)

ಪಠ್ಯೇತರ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡುವ ನಿಟ್ಟಿನಲ್ಲಿ ಶಿಕ್ಷಕರಿಗೆ ತರಬೇತಿಯನ್ನು ನೀಡಲಾಗುತ್ತಿತ್ತು. ಶಿಕ್ಷಕಿಯರಿಗೆ ಸ್ಕೌಟಿಂಗ್ ಕುರಿತಂತೆ ಶಿಬಿರಗಳನ್ನು ಉಡುಪಿ ಮತ್ತು ಮಂಗಳೂರಿನಲ್ಲಿ ನಡೆಸಿ, ಲಾಠಿ ಮತ್ತು ಲಾಜಿಮ್ ಗಳ ಅಭ್ಯಾಸ ನೀಡಲಾಯಿತು. ಲಾಟಿ ಮತ್ತು ಲಾಜಿಮ್ ಶಿಬಿರಗಳಿಗೆ ತರಬೇತಿ ನೀಡಲು ಬಂದ ಮದ್ರಾಸ್ ಸರಕಾರದ ಸಹಾಯಕ ದೈಹಿಕ ನಿರ್ದೇಶಕರಾದ ಜಿ.ಎಫ್. ಆಂಡ್ರಿವ್ಸ್ ಇವರನ್ನು ಆಹ್ವಾನಿಸಲಾಗಿತ್ತು. ಅವರು ಕಂಡಂತೆ 'ದೈಹಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾ ಬೋರ್ಡ್ ಮೊದಲ ಮುನ್ನಡೆ ಸಾಧಿಸಿದೆ' ಎಂಬ ಶ್ಲಾಘನೆ ಇದೆ. ಜಿಲ್ಲೆಯ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಪಠ್ಯೇತರ ಚಟುವಟಿಕೆಗಳಿಗೆ ಗಮನ ನೀಡಲಾಗಿರುವುದು ಪ್ರಶಂಸನೀಯ.

೧೯೩೫ರ ಸೆಪ್ಟೆಂಬರ್ ೧೪ನೇ ತಾರೀಕಿನಂದು ಜರುಗಿದ ದಕ್ಷಿಣ ಕನ್ನಡ ಜಿಲ್ಲಾ ಎಡ್ಯುಕೇಶನಲ್ ಕೌನ್ಸಿಲು ಮೀಟಿಂಗಿನ ಪ್ರೊಸೀಡಿಂಗ್ಸ್ ಪ್ರಕಾರ ಪುತ್ತೂರು, ಕಾರ್ಕಳ, ಉಡುಪಿ, ಮಂಗಳೂರು, ಕುಂದಾಪುರ, ಕಾಸರಗೋಡು ಮುಂತಾದ ಪ್ರದೇಶಗಳ ಎಡ್ಯುಕೇಶನ್ ಆಫೀಸರವರ ಶಿಫಾರಸುಗಳನ್ನು ಮಂಜೂರು ಮಾಡುವ ಕಮಿಟಿಯಲ್ಲಿ ಮಿಸೆಸ್ ಸುಭದ್ರಾ ಚೆಟ್ಟೂರ್ ಒಬ್ಬ ಸದಸ್ಯೆಯಾಗಿದ್ದರು. ಪ್ರಸ್ತುತ ವರ್ಷದಲ್ಲಿ ಜಿಲ್ಲೆಯಲ್ಲಿದ್ದ ಹೆಣ್ಮಕ್ಕಳ ಶಾಲೆಗಳನ್ನು ಮೇಲ್ದರ್ಜೆಗೆ ಏರಿಸುವ ಕಟ್ಟಡ ಸಂಬಂಧಿ ವಿಷಯಗಳು, ಹೊಸದಾಗಿ ಶಾಲೆಗಳನ್ನು ತೆರೆಯುವ ಕುರಿತು, ಹಂಗಾಮಿ ಶಾಲೆಗಳ ಮಂಜೂರಾತಿಯನ್ನು ಮುಂದುವರಿಸುವ ಬಗ್ಗೆ, ಕಾಯಂ ಮಂಜೂರಾತಿ ನೀಡುವ ಬಗ್ಗೆ, ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆಯನ್ನು ಹೆಚ್ಚಿಸುವ ಕುರಿತಂತೆ ಹಲವು ಪ್ರಸ್ತಾವನೆಗಳನ್ನು ಮಂಡಿಸಲಾಯಿತು.[೬೦] ಅದೇ ರೀತಿ ೧೯೩೯ರ ಜೂನ್ ೧೯ರಂದು ನಡೆದ ಸಭೆಯಲ್ಲಿ ಬೋರ್ಡ್ ಸದಸ್ಯರಾದ ಲೀಲಾಬಾಯಿ ಉಪಸ್ಥಿತರಿದ್ದರು.[೬೧]

ಪಾಶ್ಚಾತ್ಯ ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾರ್ಜನೆ ಮಾಡಲು ಆರಂಭದಲ್ಲಿ ಹಿಂಜರಿಕೆ ಇದ್ದರೂ ನಂತರದಲ್ಲಿ ಧನಾತ್ಮಕ ಸ್ಪಂದನೆ ಕಂಡು ಬರುತ್ತದೆ. ೧೯ನೇ ಶತಮಾನದ ಕೊನೆಯೊಳಗೆ ಆಧುನಿಕ ಶಿಕ್ಷಣದಲ್ಲಿ ಬಂಟರ ಆಸಕ್ತಿಯು ಶಾಲೆಗಳಲ್ಲಿ ಸ್ಪಷ್ಟವಾಗಿ ದಾಖಲಿಸಲ್ಪಟ್ಟಿತು. ಕ್ರೈಸ್ತರು ಪ್ರಾರಂಭದಲ್ಲಿ ತೆಗೆದುಕೊಂಡ ಮುನ್ನಡೆಯನ್ನು ಇವರು ತತ್ಪರತೆಯಿಂದ ಅನುಸರಿಸಿದರು. ಮರಕಡ ಮತ್ತು ಅತ್ತಾವರ ಕುಟುಂಬಗಳು ಆಧುನಿಕ ಶಿಕ್ಷಣ ಪಡೆದ ಮೊದಲಿಗರಾಗಿದ್ದು ನಿಟ್ಟೆಗುತ್ತು ಮತ್ತು ಕೊಡಿಯಾಲಗುತ್ತು ಬಹಳ ಹಿಂದೆಯೇನೂ ಇರಲಿಲ್ಲ. ಅದು ಶಿಕ್ಷಿತ ಭಾರತೀಯರನ್ನು ಸಾರ್ವಜನಿಕ ಕ್ಷೇತ್ರಕ್ಕೆ ಒಯ್ದು ದಾರಿಯಾಗಿದ್ದು ಅಲ್ಲಿ ಅವರು ಹೊಸ ಆಡಳಿತಗಾರರರೊಂದಿಗೆ ಸಂವಾದ ನಡೆಸಬಹುದಿತ್ತು. ಅವರು ಬ್ರಿಟಿಷ್ ದಯಾಪರತೆ ಮತ್ತು ಅನುಮಾನದ ಉದಾರವಾದಗಳ ಉತ್ಪನ್ನಗಳಾಗಿದ್ದರು. ಇವರು ವಸಾಹತು ಆಡಳಿತವನ್ನು ಮೆಚ್ಚುವರು ಮತ್ತು ಬೆಂಬಲಿಸುವರು ಎಂದು ಬ್ರಿಟಿಷರು ನಂಬಿದ್ದರು.[೬೨] ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೈಕ್ಷಣಿಕ ಕ್ರಾಂತಿಗೆ ರೋಮನ್ ಕ್ಯಾಥೋಲಿಕರ ಕೊಡುಗೆ ಅನನ್ಯವಾಗಿದೆ. ಜಿಲ್ಲೆಗೆ ಕಳಸಪ್ರಾಯವಾಗಿರುವ ಸಂತ ಅಲೋಶಿಯಸ್ ಕಾಲೇಜು ಒಂದು ಅನನ್ಯ ಶಿಕ್ಷಣ ಸಂಪ್ರದಾಯವನ್ನು ಹಾಕಿಕೊಟ್ಟಿದೆ. ಜಾಗತಿಕ ಧಾರ್ಮಿಕ ಸಂಸ್ಥೆಗೆ ಸೇರಿದ ಜೆಸ್ವಿಟರು ಈ ಸಂಸ್ಥೆಯನ್ನು

೧೮೮೦ರಲ್ಲಿ ಸ್ಥಾಪಿಸಿದರು. ಅದೇ ರೀತಿ ಅಪಸ್ತೋಲಿಕ್ ಕಾರ್ಮಲೈಟ್ ಸಂಸ್ಥೆಯ ಇತಿಹಾಸದ ಹಾಳೆಗಳನ್ನು ತಿರುವುತ್ತಾ ಹೋದಂತೆ ಮಂಗಳೂರಿನ ಬಾಲಕಿಯರಿಗೆ ಅನನ್ಯವಾದ ರೀತಿಯಲ್ಲಿ ಶಿಕ್ಷಣದ ಅವಕಾಶಗಳನ್ನು ತೆರೆದಿಟ್ಟ ರೀತಿ ಅನಾವರಣಗೊಳ್ಳುತ್ತದೆ. ಅವರು ಸ್ಥಾಪಿಸಿದ ಪ್ರಾಥಮಿಕ ಶಾಲೆಗಳಲ್ಲಿ ಧರ್ಮ, ಸ್ಥಳೀಯ ಭಾಷೆ, ಪೋರ್ಚುಗೀಸ್ ಭಾಷೆ, ಅಂಕಗಣಿತ ಮತ್ತು ಕರಕುಶಲತೆಗೆ ಸಂಬಂಧ ಪಟ್ಟ ವಿಷಯಗಳನ್ನು ಬೋಧಿಸಲಾಗುತ್ತಿತ್ತು. ಉನ್ನತ ಶಿಕ್ಷಣಕ್ಕಾಗಿ ಪೋರ್ಚುಗೀಸರು ಸ್ಥಾಪಿಸಿದ ಜೆಸ್ವಿಟ್ ಕಾಲೇಜುಗಳಲ್ಲಿ ಬಿಷಪ್ಪರಿಗೆ ತರಬೇತಿ ನೀಡುವುದರೊಂದಿಗೆ, ಲ್ಯಾಟಿನ್ ಭಾಷೆ, ಧರ್ಮ, ತರ್ಕಶಾಸ್ತ್ರ, ಸಂಗೀತವನ್ನು ಬೋಧಿಸಲಾಗುತ್ತಿತ್ತು.[೬೩] ೧೮೫೭ರಲ್ಲಿ ಅಪಸ್ತೋಲಿಕ್ ಕಾರ್ಮೆಲ್ ಇದರ ಸಂಸ್ಥೆಯಾದ ಸೈಂಟ್ ಆನ್ಸ್ ಸಂಸ್ಥೆಗಳ ಶೈಕ್ಷಣಿಕ ಸೇವಾ ಇತಿಹಾಸ ಪ್ರಾರಂಭವಾಗುತ್ತದೆ. ಮಂಗಳೂರಿನ ವಿಕಾರ್ ಮೈಕಲ್ ಅಂಟನಿಯವರು ಮದರ್ ವೆರೋನಿಕಾರವರು ಕಳುಹಿಸಿದ ಫ್ರಾನ್ಸಿನ ಸಿಸ್ಟರ್ಸ್ ಆಫ್ ಸೈಂಟ್ ಜೋಸೆಫ್ಸ್ ಆಫ್ ದಿ ಅಪರೀಶನ್ ಸಭೆಯ ಧರ್ಮಭಗಿನಿಯರಿಂದ ಹೆಣ್ಣು ಮಕ್ಕಳ ಶಾಲೆಯನ್ನು ಜಿಲ್ಲೆಯಲ್ಲಿ ಪ್ರಾರಂಭಿಸಿದರು.[೬೪]

೧೮೭೫ರಲ್ಲಿ ಶಿಕ್ಷಣ ತಜ್ಞೆಯಾದ ಸಿಸ್ಟರ್ ಅಲೋಶಿಯಾ ಅವರು ೧೮೭೫ರಲ್ಲಿ ಸೇಂಟ್ ಆನ್ಸ್ ಶಾಲೆಯ ಮುಖ್ಯೋಪಾಧ್ಯಾಯಿನಿಯಾದರು. ಶಾಲೆಯನ್ನು ವೇತನಾನುದಾನದ ಒಳಗೆ ತರಲು ಕ್ಷಿಪ್ರಗತಿಯಲ್ಲಿ ಪ್ರಯತ್ನಗಳು ನಡೆದವು. ಎಪ್ರಿಲ್ ೨೨, ೧೮೭೮ರಂದು ಶಾಲಾ ತಪಾಸಣೆಗಾಗಿ ಬಂದ ಶ್ರೀ ಎಲ್ ಗಾರ್ತ್ವೈಟ್ ಅವರ ಒಕ್ಕಣೆ ಈ ರೀತಿ ಇದೆ: 'ಈ ಶಾಲೆಯ ಉಪಯುಕ್ತತೆ ಪ್ರಶ್ನಾತೀತವಾದುದು. ಇದು ಮಂಗಳೂರಿನಲ್ಲಿ ಎಲ್ಲ ಸಮುದಾಯದವರ ಪ್ರಶಂಸೆಗೆ ಪಾತ್ರವಾಗಿದೆ. ಇಲ್ಲಿ ಬೋಧಿಸುವ ಧಾರ್ಮಿಕ ಮಹಿಳೆಯರು ಅಧ್ಯಾಪಕ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿ ಮಾದರಿಯಾಗಿದ್ದಾರೆ. ಮುಂದೆ ವೇತನಾನುದಾನದ ದೃಷ್ಟಿಯಿಂದ ಇತರ ಪರೀಕ್ಷೆಗಳನ್ನು ತೆಗೆದುಕೊಳ್ಳುವ ಅಗತ್ಯವಿದ್ದರೆ ಅದನ್ನು ಪಡೆದುಕೊಳ್ಳುವುದರಲ್ಲಿ ಇಚ್ಛೆವುಳ್ಳವರಾಗಿದ್ದಾರೆ'. ೧೮೭೧ರಿಂದ ೧೮೮೫ವರೆಗೆ ಶಾಲಾ ಶಿಕ್ಷಣವನ್ನು ಸಂಯೋಜಿಸಿ ೧೮೮೫ರಲ್ಲಿ ಶಾಲೆಯನ್ನು ಹೈಸ್ಕೂಲಿಗೆ ಉನ್ನತೀಕರಿಸಲಾಯಿತು.

ಇದಕ್ಕಾಗಿ ಸರಕಾರಿ ಮಾನ್ಯತೆಯೂ ದೊರಕಿತು. ಬಾಲಕಿಯರ ಸರ್ವಾಂಗೀಣ ಪ್ರಗತಿ ಶಾಲೆಯ ಉದ್ದೇಶವಾಗಿತ್ತು. ಎಕ್ಸೆಲ್ ಸಿಯೋರ್ - ಉತ್ಕೃಷ್ಟಗಾಗಿ ಕಾರ್ಯ ಸಾಧನೆ ಎಂಬುದು ಶಾಲೆಯ ಧ್ಯೇಯವಾಗಿತ್ತು. ೧೯೨೧ರಲ್ಲಿ ಸೇಂಟ್ ಆನ್ಸ್ ಶಾಲೆ ಮಹತ್ತರವೂ ಅನಿರೀಕ್ಷಿತವೂ ಆದ ತಿರುವು ಪಡೆಯಿತು. ಅದರಂತೆ, ೪ನೇ, ೫ನೇ, ೬ನೇ ಫಾರಂ (ತರಗತಿ) ಗಳನ್ನು ಬೆಂದೂರಿನ ಸೇಂಟ್ ಆಗ್ನೇಸ್ ಸಂಸ್ಥೆಗೆ ವರ್ಗಾಯಿಸಲಾಯಿತು.[೬೫] ಜಿಲ್ಲೆಯಲ್ಲಿ ಪ್ರಪ್ರಥಮವಾಗಿ ಮಹಿಳೆಯರಿಗೆ ಉನ್ನತಶಿಕ್ಷಣವನ್ನು ನೀಡುವ ಜವಾಬ್ದಾರಿಯನ್ನು ಕ್ಯಾಥೋಲಿಕ್ ಚರ್ಚ್ ವಹಿಸಿಕೊಂಡಿತು. ಕ್ರೈಸ್ತ ಹೆಣ್ಮಕ್ಕಳಿಗೆ ಶಿಕ್ಷಣ ನೀಡುವ ನಿಟ್ಟಿನಲ್ಲಿ ಅಪಸ್ತೋಲಿಕ್ ಕಾರ್ಮೆಲ್ ಭಗಿನಿಯರು ಶಾಲೆಯನ್ನು ನಡೆಸುತ್ತಿದ್ದರು. ಇಲ್ಲಿನ ಮೂವರು ಭಗಿನಿಯರು ೧೮೮೮ರಲ್ಲಿ ಮದ್ರಾಸ್ ಪ್ರೆಸಿಡೆನ್ಸಿಯ ತರಬೇತಿ ಶಾಲೆಯಲ್ಲಿ ಪ್ರಥಮ ದರ್ಜೆಯಲ್ಲಿ ತರಬೇತಿ ಪಡೆದ ನಂತರ, ೧೮೯೦ರಲ್ಲಿ ಸರಕಾರವು ಸಂತ ಆನ್ಸ್ ಶಾಲೆಯನ್ನು

ತರಬೇತಿ ಶಾಲೆಯಾಗಿ ಗುರುತಿಸಿತು. ೧೯೫೦ರ ದಶಕದಲ್ಲಿ ಶಿಕ್ಷಕ ತರಬೇತಿ ಶಾಲೆಯನ್ನು ಆರಂಭಿಸಿ ಜಿಲ್ಲೆಯಲ್ಲಿ ಪ್ರಾರಂಭವಾದ ಹೆಚ್ಚಿನ ಶಾಲೆಗಳಿಗೆ ಶಿಕ್ಷಕರನ್ನು ಒದಗಿಸಿಕೊಡುವ ಮೂಲಕ ಅಕ್ಷರ ಕ್ರಾಂತಿಯಲ್ಲಿ ನೇರವಾಗಿ ಭಾಗಿಯಾಗಿದ್ದಾರೆ.[೬] ೧೯೫೦ರಲ್ಲಿಯೇ ಉನ್ನತ ಪ್ರೌಢ ತರಬೇತಿ ವಿಭಾಗವನ್ನು ಪ್ರಾರಂಭಿಸಲಾಯಿತು. ಸಿಸ್ಟರ್ ಅಲೋಶಿಯಾ ರವರು ತರಬೇತಿ ಉಪನ್ಯಾಸಕರಾಗಿ ನೇಮಕಗೊಂಡು, ಏಳು ವಿದ್ಯಾರ್ಥಿನಿಯರೊಂದಿಗೆ ತರಗತಿ ಪ್ರಾರಂಭವಾಯಿತು. ಮಿಸ್ ಕಾರ್ ಅವರ ವರದಿಯು ಆ ವರ್ಷದ ಕಾರ್ಯ ವೈಖರಿಯನ್ನು ಹೀಗೆ ತೆರೆದಿಡುತ್ತದೆ. 'ತರಬೇತಿ ಅಧ್ಯಾಪಕಿಯರ ಕಾರ್ಯ ಅತ್ಯಂತ ತೃಪ್ತಿಕರವಾಗಿದ್ದು, ಇದನ್ನು ಅತೀ ಹೆಚ್ಚಿನ ಕೌಶಲದಿಂದ ಯಶಸ್ವಿಯಾಗಿ ನಿರ್ವಹಿಸಲಾಗಿದೆ. ಸಾಮಾನ್ಯ ತರಗತಿಗಳ ಬೋಧನೆ ಉತ್ತಮವಾಗಿದ್ದು ವಿದ್ಯಾರ್ಥಿಗಳಿಗೆ ಬೋಧಿಸುವ ಸಾಮಾನ್ಯ ತರಗತಿಯ ಅಭ್ಯಾಸ ಬೋಧನೆ ಅತ್ಯಂತ ಜಾಗರೂಕತೆಯಿಂದ ಸಿದ್ಧಪಡಿಸಿದ್ದಾಗಿದ್ದು ಅಚ್ಚುಕಟ್ಟಾಗಿ ಬೋಧಿಸಲಾಗುತ್ತಿದೆ' ಎಂಬುವುದಾಗಿದೆ.

ಪರೀಕ್ಷೆ ಬರೆದ ವಿದ್ಯಾರ್ಥಿನಿಯರಲ್ಲಿ ಐದು ವಿದ್ಯಾರ್ಥಿನಿಯರು ಟೀಚರ್ ಸರ್ಟಿಫಿಕೇಟ್ ಪರೀಕ್ಷೆಯನ್ನು ತೆಗೆದುಕೊಂಡು ಮೊದಲ ದರ್ಜೆಯಲ್ಲಿ ತೇರ್ಗಡೆಯಾದರು. ವಿದ್ಯಾರ್ಥಿನಿಯರನ್ನು ತತ್ವನಿಷ್ಠ ಅಧ್ಯಾಪಕರನ್ನಾಗಿ ಮಾಡುವುದೇ ಸಬಲೀಕರಣವೆಂದು ಸಿಸ್ಟರ್ ಅಲೋಶಿಯಾ ನಂಬಿದ್ದರು. ಈ ರೀತಿ ಬೆಳೆದ ಸಂಸ್ಥೆಗೆ ಎಲ್ಲೆಡೆಗಳಿಂದ ಪ್ರವೇಶಕ್ಕೆ ಬೇಡಿಕೆ ಬರಲು ಪ್ರಾರಂಭವಾಯಿತು.[೭] ಅಪಸ್ತೋಲಿಕ್ ಕಾರ್ಮೆಲ್ ಸಂಸ್ಥೆಯ ಸದಸ್ಯರು ಅವರ ಶಾಲೆಗಳಲ್ಲಿ ನೀಡುತ್ತಿದ್ದ ಶಿಕ್ಷಣ ತಮ್ಮ ಮಕ್ಕಳಿಗೂ ಸಿಗಬೇಕೆಂದು ಮಿಲಾಗ್ರಿಸ್ ಪ್ಯಾರಿಶ್ ಇದರ ಜನರು ಬಯಸಿದ ಹಿನ್ನೆಲೆಯಲ್ಲಿ ೧೯೦೫ರಲ್ಲಿ ಹಂಪನಕಟ್ಟೆಯಲ್ಲಿ ಒಂದು ಪ್ರಾಥಮಿಕ ಶಾಲೆಯನ್ನು ತೆರೆಯಲಾಯಿತು. ಪ್ರಾರಂಭದಲ್ಲಿ ೪೨ ವಿದ್ಯಾರ್ಥಿನಿಯರನ್ನು ಹೊಂದಿದ್ದ ಶಾಲೆಯನ್ನು ನಂತರದಲ್ಲಿ ಸೇಂಟ್ ಮೇರೀಸ್ ಶಾಲೆಯೆಂದು ಕರೆಯಲಾಯಿತು. ಮದರ್ ಮಾರಿ ದೆಸ್ ಆಂಜ್ ಅವರು ಅಪಸ್ತೋಲಿಕ್ ಸಂಸ್ಥೆಯ ಅಡಿಯಲ್ಲಿ ಇದನ್ನು ಸ್ವೀಕರಿಸಿದರು.

೧೯೦೭ರಲ್ಲಿ ಸರಕಾರದಿಂದ ಮಾನ್ಯವಾದ ಈ ಶಾಲೆ ಬಹು ಬೇಗನೆ ಅಂದರೆ ೧೯೦೯ರಲ್ಲಿ ಐದನೇ ತರಗತಿಯನ್ನು ಪ್ರಾರಂಭಿಸಬೇಕಾದ ಅಗತ್ಯವನ್ನು ಗುರುತಿಸಿತು. ಆದರೆ ಸ್ಥಳಾವಕಾಶ ಇಲ್ಲದ ಕಾರಣ ಸೇಂಟ್ ಆನ್ಸ್ ಶಾಲೆಯಲ್ಲೇ ತರಗತಿಗಳನ್ನು ನಡೆಸಬೇಕಾಗಿ ಬಂದಿತು. ೧೯೪೫ರಲ್ಲಿ ಈ ಶಾಲೆಯ ಮೊದಲ ಗುಂಪಿನ ೨೦ ವಿದ್ಯಾರ್ಥಿನಿಯರು ಎಸ್.ಎಸ್.ಎಲ್.ಸಿ ಪರೀಕ್ಷೆ ತೆಗೆದುಕೊಂಡರು. ಸೈಂಟ್ ಆನ್ಸ್ ಶಾಲೆಯಲ್ಲಿ ಮಕ್ಕಳ ಸಂಖ್ಯೆ ಮಿತಿ ಮೀರುತ್ತಿದ್ದಂತೆ ಮದರ್ ಅಲೋಶಿಯಾ ಮತ್ತೊಂದು ಶಾಲೆಯನ್ನು ತೆರೆದರು. ಹಾಗೆ ಸಂತ ಆಗ್ನೇಸ್ ಶಾಲೆ ತೆರೆದುಕೊಂಡಿತು. ೧೯೨೧-೨೨ರಲ್ಲಿ ಮದರ್ ಅಲೋಶಿಯರವರು ಈ ಶಾಲೆಯ ಪ್ರಥಮ ಮುಖ್ಯೋಪಾಧ್ಯಾಯಿನಿಯಾದರು. ಶಾಲೆಯಲ್ಲಿ ಇಂಗ್ಲಿಷ್ ಶಿಕ್ಷಣ ಪಡೆಯಬಯಸುವ ಹೆಂಗಳೆಯರು ಉಡುಪಿ, ಕಲ್ಯಾಣಪುರ, ಕುಂದಾಪುರ, ಕಾರ್ಕಳ, ಮುಲ್ಕಿ, ಕಿನ್ನಿಗೋಳಿ, ಬೆಳ್ತಂಗಡಿ ಹಾಗೂ ಡಯಾಸಿಸ್ ನ ಎಲ್ಲಾ ಪ್ಯಾರಿಶ್ ಗಳಿಂದ ಗುಂಪುಗುಂಪಾಗಿ ಶಾಲೆಗೆ ಬರತೊಡಗಿದರು. ೧೯೨೯ರಲ್ಲಿ ಮದರ್ ಮ್ಯಾಗ್ದಲಿನ್

ಮುಖ್ಯೋಪಾಧ್ಯಾಯಿನಿಯಾಗಿದ್ದಾಗ, ಊಟಿಯಲ್ಲಿ ಶಿಕ್ಷಣ ನಿರ್ದೇಶಕರನ್ನು ಭೇಟಿಯಾಗಿ ಕನ್ನಡ ಮಾತೃಭಾಷೆಯಲ್ಲದ ವಿದ್ಯಾರ್ಥಿಯನಿಯರಿಗೆ ಈಗ ವಿಧಿಸಿರುವ ಕನ್ನಡ ಅಧ್ಯಯನದಿಂದ ವಿನಾಯಿತಿ ಕೊಡಬೇಕೆಂದು ವಿನಂತಿಸಿದಾಗ ಇದು ಒಪ್ಪಿಗೆಯಾಗಿ ಆ ವಿದ್ಯಾರ್ಥಿನಿಯರಿಗೆ ಕನ್ನಡ ಭಾಷಾ ಅಧ್ಯಯನದ ಬದಲಿಗೆ ಫ್ರೆಂಚ್ ಭಾಷಾ ಅಧ್ಯಯನಕ್ಕೆ ಅನುಮತಿ ಸಿಕ್ಕಿತು. ೧೯೪೬ರಲ್ಲಿ ಸೇಕ್ರೆಡ್ ಹಾರ್ಟ್ಸ್ ಗರ್ಲ್ಸ್ ಹೈಸ್ಕೂಲನ್ನು ಸ್ಥಾಪಿಸಲಾಯಿತು. ಆರಂಭದಲ್ಲಿ ಸೈಂಟ್ ಜೋಸೆಫ್ಸ್ ಶಾಲೆಯಲ್ಲಿಯೇ ತರಗತಿಗಳು ನಡೆಯತೊಡಗಿ ಮೂರು ವರ್ಷಗಳ ತರುವಾಯ ಹೊಸ ಕಟ್ಟಡಕ್ಕೆ ಶಾಲೆ ವರ್ಗಾಯಿಸಲ್ಪಟ್ಟಿತು. ೧೯೨೦ರ ದಶಕದ ಸಂದರ್ಭದಲ್ಲಿ ಸಮಾಜದಲ್ಲಿ ಮಹಿಳೆಯ ಸ್ಥಾನ ಹಿಂದಿಗಿಂತ ಏನೂ ಭಿನ್ನವಾಗಿ ಕಂಡುಬರದೆ, ಆಕೆ ಪುರುಷನಿಗಿಂತ ಕೆಳಮಟ್ಟದವಳು ಎಂದೇ ಪರಿಗಣಿತವಾಗಿತ್ತು. ಶಿಕ್ಷಣದಿಂದ ವಂಚಿತಳಾದ ಅವಳು ಸಮುದಾಯದಲ್ಲಿ ಯಾವ ರೀತಿಯಲ್ಲೂ ಸದುಪಯುಕ್ತ ಪ್ರಜೆ ಎಂಬ ಭಾವನೆಯಿರಲಿಲ್ಲ.

ದಕ್ಷಿಣ ಕನ್ನಡದಲ್ಲಿ ಇಂತಹ ಸ್ಥಿತಿಯಲ್ಲಿ ಶಿಕ್ಷಣದ ಮುಂಚೂಣಿಯಲ್ಲಿದ್ದುಕೊಂಡು ಮಹಿಳೆಯರ ಉನ್ನತಿಗಾಗಿ ಕೆಲಸ ಮಾಡಿದವರು ಸಿಸ್ಟರ್ ಅಲೋಶಿಯಾರವರು. ಮಂಗಳೂರಿನ ಅಪಸ್ಟೋಲಿಕ್ ಸಂಸ್ಥೆ ತನ್ನ ೫೦ನೇ ವರ್ಷದ ಸಂಭ್ರಮವನ್ನು ಆಚರಿಸುವ ಸಂದರ್ಭ ಒಂದು ಉನ್ನತ ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸಬೇಕು ಎಂದು ಸಿ. ಅಲೋಶಿಯಾ ಮನಸ್ಸು ಮಾಡಿದರು. ಅಧ್ಯಾಪಕ ಶಿಕ್ಷಣಕ್ಕೆ ಸ್ನಾತಕ ಶಿಕ್ಷಣದ ಅಗತ್ಯವಿದೆ ಎಂದು ಮದರಾಸು ಪ್ರೆಸಿಡೆನ್ಸಿಯ ಶಿಕ್ಷಣ ವಿಭಾಗ ಘೋಷಿಸಿದಾಗ ಬಾಲಕಿಯರಿಗೆ ಉನ್ನತ ಶಿಕ್ಷಣದ ಅವಕಾಶವನ್ನು ಒದಗಿಸುವ ಸಲುವಾಗಿ ಸಿಸ್ಟರ್ ಅಲೋಶಿಯಾ ಅವರು ಸೇಂಟ್ ಆಗ್ನೇಸ್ ಕಾಲೇಜು ಸ್ಥಾಪಿಸಲು ನಿರ್ಧರಿಸಿದರು. ಸೈಂಟ್ ಆಗ್ನೇಸ್ ಮಹಾವಿದ್ಯಾಲಯವು ಜಿಲ್ಲೆಯ ಪ್ರಥಮ ಕ್ರೈಸ್ತ ಮಹಿಳಾ ಮಹಾವಿದ್ಯಾಲಯವಾಗಿದೆ. ಈ ಕಾಲೇಜು ೧೯೨೪ರಲ್ಲಿ ಮದ್ರಾಸ್ ವಿಶ್ವವಿದ್ಯಾಲಯದ ಪ್ರಥಮ ದರ್ಜೆ ಕಾಲೇಜು ಎಂದಾಗಿ ಉನ್ನತೀಕರಿಸಲಾಯಿತು.[೮] ಶಿಕ್ಷಣ ಕ್ಷೇತ್ರಕ್ಕೆ ಬೆಥನಿ ಸಂಸ್ಥೆಯ ಕೊಡುಗೆ ಅನನ್ಯವಾಗಿದೆ. ಮಂಗಳೂರಿನ ಜನತೆಗೆ ದಾರಿದೀಪವಾಗಿ ಹುಟ್ಟಿದ ಸಂಸ್ಥೆಯಾದ ಬೆಥನಿ ಸಂಸ್ಥೆಯನ್ನು ಮೊ ರೇಮಂಡ್ ಫ್ರಾನ್ಸಿಸ್ ಕಾಮಿಲಸ್ ಮಸ್ಕರೇನಸ್ ಪ್ರಾರಂಭಿಸಿದರು.

೨೦ನೇ ಶತಮಾನದ ಆರಂಭದಲ್ಲಿ ಹೆಣ್ಮಕ್ಕಳ ಶಿಕ್ಷಣಕ್ಕೆ ಅಷ್ಟೊಂದು ಪ್ರೋತ್ಸಾಹ ಇಲ್ಲದ ಕಾಲಘಟ್ಟದಲ್ಲಿ ಶಿಕ್ಷಣತಜ್ಞರಾಗಿದ್ದ ಮೋ.ರೇಮಂಡರು ಶಿಕ್ಷಣದ ಮೂಲಕ ಬಡ ಜನರ ಹಾಗೂ ಹೆಣ್ಮಕ್ಕಳ ಸುಧಾರಣೆ ಮಾಡಬಹುದೆಂಬುವುದನ್ನು ಮನಗಂಡರು. ಹೀಗೆ ೧೯೨೧, ಜುಲಾಯಿ ೬ರಂದು ಬೆಂದೂರಿನಲ್ಲಿ ಬೆಥನಿ ಸಂಸ್ಥೆ ಆರಂಭವಾಯಿತು. ಮಹಿಳೆಯರನ್ನು ಮಹಿಳೆಯರ ಮೂಲಕವೇ ಸಶಕ್ತಿಗೊಳಿಸಬಹುದೆಂಬ ಸತ್ಯವನ್ನು ಅರಿತ ಸಂಸ್ಥಾಪಕರು ಪುನಃ ಶಿಕ್ಷಣ ಕ್ರಾಂತಿಗೆ ಅಣಿಯಾದರು. ಗ್ರಾಮೀಣ ಬಡ ಜನರಿಗೆ ಶಿಕ್ಷಣ ಅದರಲ್ಲೂ ವಿಶೇಷವಾಗಿ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡಿಸುವ ಉದ್ಯೋಗ ಪ್ರೇರಿತ ಶಿಕ್ಷಣದ ಮೂಲಕ ಮಹಿಳಾ ಸಬಲೀಕರಣ ಸಾಧಿಸಬೇಕು ಎಂಬುವುದೇ ಅವರ ದೃಷ್ಟಿಕೋನವಾಗಿತ್ತು. ೧೯೨೧ರಲ್ಲಿ ಸೈಂಟ್ ಮಾರ್ಗರೆಟ್ ಮೇರಿ

ಶಾಲೆಯನ್ನು ಆರಂಭಿಸಿ ಅದರ ಜವಾಬ್ದಾರಿಯನ್ನು ಮುಂದೆ ಕಂಕನಾಡಿಯ ಸೈಂಟ್ ಜೋಸೆಫ್ಸ್ ಶಾಲೆಯ ಜವಾಬ್ದಾರಿಯನ್ನೂ ಬೆಥನಿಗೆ ನೀಡಿದರು.[೯೯] ೧೯೪೩ರಲ್ಲಿ ಸೇಕ್ರೆಡ್ ಹಾರ್ಟ್ಸ್ ಗರ್ಲ್ಸ್ ಹೈಸ್ಕೂಲನ್ನು ಮಂಗಳೂರಿನಲ್ಲಿ ಸ್ಥಾಪಿಸಲಾಯಿತು. ಆರಂಭದಲ್ಲಿ ಸೈಂಟ್ ಜೋಸೆಫ್ಸ್ ಶಾಲೆಯಲ್ಲಿಯೇ ತರಗತಿಗಳು ನಡೆಯತೊಡಗಿ ಮೂರು ವರ್ಷಗಳ ತರುವಾಯ ಹೊಸ ಕಟ್ಟಡಕ್ಕೆ ಶಾಲೆ ವರ್ಗಾಯಿಸಲ್ಪಟ್ಟಿತು.

೧೮೮೮ರಲ್ಲಿ ಮದರಾಸಿನ ಕ್ರಿಶ್ಚಿಯನ್ ವೆರ್ನಾಕ್ಯುಲರ್ ಎಡುಕೇಶನ್ ಸೊಸೈಟಿಯಿಂದ ಪ್ರಕಟವಾದ 'ದಿ ವಿಮೆನ್ ಆಫ್ ಇಂಡಿಯಾ ವಾಟ್ ಕ್ಯಾನ್ ಬಿ ಡನ್ ಫಾರ್ ದೆಮ್' ಎಂಬ ಕೃತಿಯಲ್ಲಿ ಇಲ್ಲಿನ ಮಹಿಳೆಯರ ಸ್ಥಿತಿಗತಿಗಳನ್ನು ಅವಲೋಕನ ಮಾಡಲಾಗಿದೆ. ಸ್ತ್ರೀಯರಿಗೆ ಶಿಕ್ಷಣ ನೀಡುವ ನಿಟ್ಟಿನಲ್ಲಿ ಯಾವ ಕ್ರಮಗಳನ್ನು ಕೈಗೊಳ್ಳಬಹುದು? ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಕೆಲವೊಂದು ಚರ್ಚೆಗಳು ಕಂಡು ಬರುತ್ತದೆ. ಉದಾಹರಣೆಗೆ ಫ್ರಾನ್ಸಿನ ಸಾರ್ವಜನಿಕ ಶಿಕ್ಷಣ ಇಲಾಖೆಯ ಮಂತ್ರಿಯಾಗಿದ್ದ ಎಂ. ಪೌಲ್ ಬರ್ಟ್ ಪ್ರಕಾರ 'ಒಬ್ಬ ಬಾಲಕನು ವಿದ್ಯಾವಂತನಾದರೆ ಒರ್ವ ವಿದ್ಯಾವಂತ ವ್ಯಕ್ತಿ ದೊರಕಬಹುದು. ಆದರೆ ಒರ್ವ ಬಾಲಕಿಗೆ ಶಿಕ್ಷಣ ದೊರೆತರೆ ಒಂದು ವಿದ್ಯಾವಂತ ಕುಟುಂಬ ದೊರಕುತ್ತದೆ' ಎಂಬ ಹೇಳಿಕೆಯು ಸ್ತ್ರೀ ಶಿಕ್ಷಣದ ಮಹತ್ವವನ್ನು ತಿಳಿಸುವಂತಿದೆ. ಅದೇ ರೀತಿ ಮಿಸ್ ಮ್ಯಾನಿಂಗ್, 'ಸ್ತ್ರೀಯರು ವಿದ್ಯಾವಂತರಾದಲ್ಲಿ, ವಿದ್ಯಾವಂತ ಪುರುಷರು ಮತ್ತು ವಿದ್ಯಾವಂತ ಪತ್ನಿಯರ ಆಸಕ್ತಿ ಏಕರೂಪವಾಗಿದ್ದು ಮನೆಯ ಆಂತರಿಕ ವಿಚಾರಗಳು ಸೌಹಾರ್ದಯುತವಾಗಿ ತೀರ್ಮಾನಿಸಬಹುದು. ಮಹಿಳೆ ತನ್ನ ಗಂಡನಿಗೆ ಸಹವರ್ತಿಯಾಗಿ, ಬುದ್ಧಿವಂತಿಕೆಯಿಂದ ಸಂಸಾರದ ಜವಾಬ್ದಾರಿಯನ್ನು ನಿರ್ವಹಿಸಬಹುದು. ಶಿಕ್ಷಣದ ಅನಿವಾರ್ಯತೆ ಪುರುಷರಷ್ಟೇ ಮಹಿಳೆಗೂ ಇದೆ' ಎಂಬ ಅಭಿಪ್ರಾಯ ವ್ಯಕ್ತಪಡಿಸಿರುವುದು ಕಂಡುಬರುತ್ತದೆ.

ಭಾರತದ ಕೌಟುಂಬಿಕ ವ್ಯವಸ್ಥೆಯಲ್ಲಿ ಮಹಿಳೆಯ ಪ್ರಭಾವ ಅಧಿಕವಾಗಿರುವುದರಿಂದ 'ಸಾಮಾಜಿಕ ಜೀವನದ ಅಭಿವೃದ್ಧಿಗೆ ಮಹಿಳೆಗೆ ಶಿಕ್ಷಣ ಅವಶ್ಯಕವಾಗಿದೆ' ಎನ್ನುತ್ತಾರೆ.[೧೦೦] ಪಾಶ್ಚಾತ್ಯ ಚಿಂತನೆಗಳ ಪ್ರಭಾವ ಬೀರುವವರೆಗೆ ಭಾರತದಲ್ಲಿ ಜಾತಿಯ ಕಲ್ಪನೆಯನ್ನು ಬಹುಮೂಲ್ಯವೆಂದು ಪರಿಗಣಿಸಲಾಗಿತ್ತು ಮತ್ತು ಮಹಿಳೆ ಮುಗ್ಧಳಾಗಿದ್ದು ನಿರ್ಲಕ್ಷ್ಯಕ್ಕೊಳಗಾಗಿದ್ದಳೆಂಬುವುದು ಗಮನಿಸಬೇಕಾದ ಅಂಶವಾಗಿದೆ. ೧೯ನೇ ಶತಮಾನದಲ್ಲಿ ಅರ್ಸುಲೈನ್ ಸಂಸ್ಥೆಯ ಸಂಸ್ಥಾಪಕರಾದ ಅಂಜೆಲಾ ಮೆರಿಚ್ಚಿಯವರು ಇಟಲಿಯ ಬ್ರೆಸಿಯಾದಲ್ಲಿ ಮಹಿಳೆಯರು ಮತ್ತು ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡುವ ಯೋಜನೆಯನ್ನು ಪ್ರಪ್ರಥಮವಾಗಿ ಜಾರಿಗೆ ತಂದರು. ಇವರ ಪ್ರೇರಣೆಗೊಳಪಟ್ಟು, ಯೇಸು ಸಭೆಯ ಫಾ. ಉರ್ಬನ್ ಸ್ಟೈನ್ ಅವರು ೧೮೮೭ರಲ್ಲಿ ಮಂಗಳೂರಿನ ಬೋಳಾರದಲ್ಲಿ ಸಂತ ಅರ್ಸುಲರ ಸಂಘಟನೆಯೊಂದನ್ನು ಸ್ಥಾಪಿಸಿದರು. ೧೯೦೧ರಲ್ಲಿ ಈ ಸಂಘಟನೆ ಶಿಕ್ಷಣ ಕ್ಷೇತ್ರಕ್ಕೆ ಕಾಲಿಟ್ಟಿತು.[೧೦೧] ೧೯೪೫-೪೬ರ ಸಾರ್ವಜನಿಕ ಶಿಕ್ಷಣ ಇಲಾಖೆಯ ವರದಿಯ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೦ ಕ್ರೈಸ್ತರ ಶಾಲೆಗಳಿದ್ದು ೩೩೯೮ ಮಂದಿ ಶಿಕ್ಷಣ ಪಡೆಯುತ್ತಿದ್ದರು. ಅವರಲ್ಲಿ ೨೧೬೪ ಕ್ರೈಸ್ತರು,

೫೬೪ ಬ್ರಾಹ್ಮಣರು, ೫೩೭ ಬ್ರಾಹ್ಮಣೇತರರು ಮತ್ತು ೧೮ ಮಂದಿ ಮುಸಲ್ಮಾನರಾಗಿದ್ದರು. ಅವುಗಳೆಂದರೆ ಸಂತ ಸಿಸಿಲಿ ಹೆಣ್ಮಕ್ಕಳ ಪ್ರೌಢ ಶಾಲೆ, ಉಡುಪಿ, ಸಂತ ಆನ್ಸ್ ಹೆಣ್ಮಕ್ಕಳ ಪ್ರೌಢ ಶಾಲೆ, ಮಂಗಳೂರು, ಲೇಡಿ ಹಿಲ್ ವಿಕ್ಟೋರಿಯ ಹೆಣ್ಮಕ್ಕಳ ಪ್ರೌಢ ಶಾಲೆ, ಮಂಗಳೂರು, ಕಪಿತಾನಿಯೋ ಹೆಣ್ಮಕ್ಕಳ ಪ್ರೌಢ ಶಾಲೆ, ಮಂಗಳೂರು, ಲಿಟಲ್ ಫ್ಲವರ್ ಹೆಣ್ಮಕ್ಕಳ ಪ್ರೌಢ ಶಾಲೆ, ತಲಪಾಡಿ, ಸೇಕ್ರೆಡ್ ಹಾರ್ಟ್ಸ್ ಹೆಣ್ಮಕ್ಕಳ ಪ್ರೌಢ ಶಾಲೆ, ಮಂಗಳೂರು, ಸಂತ ವಿಕ್ಟೋರಿಯ ಹೆಣ್ಮಕ್ಕಳ ಪ್ರೌಢ ಶಾಲೆ, ಪುತ್ತೂರು, ಸಂತ ಮೇರಿ ಸೆಕಂಡರಿ ಶಾಲೆ, ಮಂಗಳೂರು, ಹೆಣ್ಮಕ್ಕಳ ಸೆಕಂಡರಿ ಶಾಲೆ, ಶಿರ್ವ ಮತ್ತು ಸಂತ ಆಗ್ನೇಸ್ ಹೆಣ್ಮಕ್ಕಳ ಪ್ರೌಢ ಶಾಲೆ, ಮಂಗಳೂರು. ಸ್ವಾತಂತ್ರ್ಯ ನಂತರದಲ್ಲಿ ಸ್ತ್ರೀ ಶಿಕ್ಷಣಕ್ಕೆ ಒತ್ತು ನೀಡುವ ನಿಟ್ಟಿನಲ್ಲಿ ಹಲವಾರು ಸಂಸ್ಥೆಗಳು ಸ್ಥಾಪಿಸಲ್ಪಟ್ಟವು.

## ೩.೨ ಮಹಿಳಾ ಶಿಕ್ಷಣ ಮತ್ತು ಸ್ಥಳೀಯ ಶಿಕ್ಷಣ ಸಂಸ್ಥೆಗಳು

ಮಿಷನರಿಗಳಿಂದ ಪ್ರಚೋದಿತರಾದ ದೇಶೀಯರೂ ಕೂಡಾ ವಿದ್ಯಾಸಂಸ್ಥೆಗಳ ಸ್ಥಾಪನೆಗೆ ಮುಂದಾದರು. ಶಿಕ್ಷಣಕ್ಕೆ ಒಂದು ಕ್ರಮಬದ್ಧತೆಯನ್ನು ತೋರಿಸಿದ ವಸಾಹತು ಆಡಳಿತ 'ಶಾಲೆ'ಎಂಬ ಹೊಸ ಪರಿಕಲ್ಪನೆಯನ್ನು ಹುಟ್ಟುಹಾಕಿತು. ಜಿಲ್ಲೆಯಲ್ಲಿ ೧೮೫೦ಕ್ಕೆ ಮೊದಲೇ ತೆರೆಯಲ್ಪಟ್ಟ ಜರ್ಮನ್ ಮಿಷನರಿಗಳ ಮತ್ತು ಕ್ಯಾಥೋಲಿಕ್ ಪಾದ್ರಿಗಳ ಶಾಲೆಗಳಲ್ಲಿ ಕೆಲವು ಸುವಾರ್ತಾ ಪ್ರಚಾರಕ್ಕೆ ಮೀಸಲಾಗಿದ್ದವು. ಈ ಸಂಸ್ಥೆಗಳ ಉದ್ದೇಶ ಧಾರ್ಮಿಕ ಪ್ರಚಾರವಾದುದರಿಂದ ಅದರ ಇರುದ್ಧ ದನಿ ಎತ್ತುವ ಅವಕಾಶ ಇಲ್ಲಿನವರಿಗೆ ಇರಲಿಲ್ಲ. ಆದರೆ ತಮ್ಮ ಮಕ್ಕಳಿಗೆ ಸ್ಥಳೀಯವಾದ ಸಂಸ್ಕೃತಿ ಆಧಾರಿತ ಶಿಕ್ಷಣ ಇರಬೇಕೆಂಬ ಮನಸ್ಥಿತಿ ಇದ್ದುದರ ಜೊತೆಗೆ, ವಸಾಹತುಶಾಹಿ ಆಡಳಿತ ತಂದು ಕೊಟ್ಟ ಇಂಗ್ಲಿಷ್ ಶಿಕ್ಷಣವೂ ಬೇಕೆಂಬ ಹಂಬಲವೂ ಇದ್ದ ಕ್ರೈಸ್ತೇತರರು ಸ್ಥಳೀಯವಾದ ಶಿಕ್ಷಣ ಸಂಸ್ಥೆಯನ್ನು ರಚಿಸಲು ಮನಸ್ಸು ಮಾಡಿದರು. ಈ ಆಶಯದೊಂದಿಗೆ ಹಲವು ಆಸಕ್ತರು ಒಗ್ಗೂಡಿ ೧೮೬೪ರಲ್ಲಿ ಸ್ಥಳೀಯರ ಸಭೆ ಸೇರಿ ಒಂದು ಸಮಿತಿಯನ್ನು ರಚಿಸಿಕೊಂಡರು. ಸಾರ್ವಜನಿಕರು ಹಣ ಸಂಗ್ರಹಿಸಿ ಅದನ್ನು ಒಂದು ಪುದುವಟ್ಟಾಗಿ ಸರಕಾರಕ್ಕೆ ಸಲ್ಲಿಸಿ ಒಂದು 'ಪ್ರಾಂತೀಯ ಶಾಲೆ' ಯನ್ನು ಪ್ರಾರಂಭಿಸಲು ಸರಕಾರಕ್ಕೆ ಮನವಿ ಸಲ್ಲಿಸಲು ತೀರ್ಮಾನಿಸಲಾಯಿತು.

ಅಂದು ಮಂಗಳೂರು ನಗರದ ಪ್ರಮುಖರೆನಿಸಿದ್ದ ಎಂ. ರಾಮಪ್ಪಯ್ಯ (ಶಿರಸ್ತೆದಾರರು), ಶ್ರೀನಿವಾಸ ರಾವ್, ಎಲ್ ರಾಮಚಂದ್ರಯ್ಯ, ಎನ್. ಸುಂದರ್ ರಾವ್, ಎನ್ ತಿಮ್ಮಪ್ಪಯ್ಯ, ಸಾದತ್ ಖಾನ್, ಸಿ ರಂಗಪ್ಪ, ನಾರಾಯಣ ಪೈ, ಟಿ. ಮುತ್ತುಸ್ವಾಮಿ ಅಯ್ಯರ್ ಅವರುಗಳನ್ನೊಳಗೊಂಡ ಸಮಿತಿಯನ್ನು ರಚಿಸಲಾಯಿತು. ಮಂಗಳೂರು ತಾಲೂಕು (ಕಾಸರಗೋಡಿನ ಕೆಲವು ಭಾಗ ಸೇರಿದಂತೆ), ಉಡುಪಿ ಮತ್ತು ಕುಂದಾಪುರ ತಾಲೂಕು, ಉಪ್ಪಿನಂಗಡಿ ತಾಲೂಕುಗಳ ಹಲವು ಮಹನೀಯರಿಂದ ಒಟ್ಟು ರೂಪಾಯಿ ೨೩೩೬ ಯನ್ನು ಸಂಗ್ರಹಿಸಲಾಯಿತು. ಈ ಮೊತ್ತವನ್ನು ದಕ್ಷಿಣ ಕನ್ನಡದ ಕಲೆಕ್ಟರ್ ಆಗಿದ್ದ ಡಬ್ಲ್ಯೂ ಎಂ. ಕಾಡೆಲ್ ಅವರಿಗೆ ಸಲ್ಲಿಸಿ ಮಂಗಳೂರಿನಲ್ಲಿ ಸರಕಾರದ ವತಿಯಿಂದ ಶಾಲೆಯೊಂದನ್ನು ಸ್ಥಾಪಿಸಬೇಕೆಂಬ ಮನವಿಯನ್ನು

ಸಲ್ಲಿಸಲಾಯಿತು. ಮನವಿಯ ಕೆಲವು ಅಂಶಗಳು ಹೀಗಿದ್ದವು 'ಮಂಗಳೂರು ನಗರದ ನಾಗರಿಕರ ಮಕ್ಕಳಿಗೆ ಈ ಪ್ರದೇಶದಲ್ಲಿ ಶಾಲೆಯೊಂದು ಇರುವುದಿಲ್ಲ. ಉನ್ನತ ಶಿಕ್ಷಣಕ್ಕಾಗಿ ಇಲ್ಲಿನ ಮಕ್ಕಳನ್ನು ಅಧಿಪತ್ಯದ ನಗರಕ್ಕೆ (ಮದರಾಸಿಗೆ) ಕಳುಹಿಸಬೇಕಾಗಿದೆ. ಹೀಗೆ ಕಳುಹಿಸುವುದು ದುಬಾರಿಯಾಗುತ್ತದಲ್ಲದೆ ಜನಸಾಮಾನ್ಯರಿಗೆ ಅಸಾಧ್ಯವಾದುದಾಗಿದೆ. ನಗರದಲ್ಲಿ ಈಗ ಇರುವ ಶಾಲೆಗಳಲ್ಲಿ ನೀಡುತ್ತಿರುವ ಶಿಕ್ಷಣಕ್ಕೆ ಸಂಬಂಧಿಸಿದಂತೆ ಕೆಲವು ಆಕ್ಷೇಪಣೆಗಳಿವೆ. ಈ ಹಿನ್ನೆಲೆಯಲ್ಲಿ ಸಾರ್ವಜನಿಕ ಶಿಕ್ಷಣ ಸಂಸ್ಥೆಯೊಂದರ ಆಗತ್ಯವಿದ್ದು ಸರಕಾರ ಇಲ್ಲಿ ಶಾಲೆಯೊಂದನ್ನು ಸ್ಥಾಪಿಸಬೇಕಾಗಿದೆ'. ಸಾರ್ವಜನಿಕರ ಮನವಿ ಸ್ವೀಕರಿಸಿದ ಜಿಲ್ಲಾ ಕಲೆಕ್ಟರ್ ಸರಕಾರಕ್ಕೆ ಶಿಫಾರಸು ಮಾಡಿದಾಗ ಆಗಿನ ಸಾರ್ವಜನಿಕ ಶಿಕ್ಷಣದ ನಿರ್ದೇಶಕರಾಗಿದ್ದ ಐರ್ ಬರ್ಟನ್ ಪಾವೆಲ್ (Eyre Burton Powell) ಮನವಿಯನ್ನು ಎತ್ತಿ ಹಿಡಿದು ಸರಕಾರಕ್ಕೆ ತಿಳಿಸಿದರು.

೧೮೬೫ರಲ್ಲಿ ಸರಕಾರ ತನ್ನ ಆದೇಶ ಸಂಖ್ಯೆ ಜಿ.೬, ೨೬೪ರ ಮೂಲಕ ಸರಕಾರದ ಕಡೆಯಿಂದ 'ಪ್ರಾಂತೀಯ ಶಾಲೆ'ಯನ್ನು ಪ್ರಾರಂಭಿಸಲು ಮಂಜೂರಾತಿ ನೀಡಿತು. ಶಾಲೆ ಪ್ರಾರಂಭವಾದ ದಿನವೇ ೩೧೫ ಮಂದಿ ಮಕ್ಕಳು ಸೇರಿದರು. ಒಂದರಿಂದ ಮೆಟ್ರಿಕ್ಯುಲೇಶನ್‌ವರೆಗೆ ಏಕಕಾಲದಲ್ಲಿ ತರಗತಿಗಳು ಪ್ರಾರಂಭವಾದವು. ಆದರೆ ಶಾಲೆ ಪ್ರಾರಂಭವಾದ ಕೆಲವು ದಿನಗಳಲ್ಲಿ ಕ್ಯಾಥೋಲಿಕ್ ಹುಡುಗರನ್ನು ಹಿಂಪಡೆದುದರಿಂದ ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಇಳಿಮುಖವಾಯಿತು. ೧೮೬೮ರಲ್ಲಿ ಕಾಲೇಜನ್ನು ದ್ವಿತೀಯ ದರ್ಜೆ ಕಾಲೇಜನ್ನಾಗಿ ಮಾನ್ಯ ಮಾಡಲಾಯಿತು. ೧೮೭೯ರಲ್ಲಿ ಪ್ರಾಂತೀಯ ಶಾಲೆ ಎಂಬುವುದನ್ನು ಬದಲಾಯಿಸಿ 'ಸರಕಾರಿ ಕಾಲೇಜು, ಮಂಗಳೂರು' (ಗವರ್ನಮೆಂಟ್ ಕಾಲೇಜ್, ಮಂಗಳೂರ್) ಎಂದು ಹೆಸರಿಸಲಾಯಿತು.[೧೦೨]

ಇಪ್ಪತ್ತನೆಯ ಶತಮಾನದ ಪ್ರಾರಂಭದವರೆಗೆ ಮಂಗಳೂರಿನಲ್ಲಿ ಹೆಣ್ಣು ಮಕ್ಕಳಿಗೆ ಉನ್ನತ ವಿದ್ಯಾಭ್ಯಾಸಕ್ಕೆ ಅವಕಾಶವಿರಲಿಲ್ಲ. ಇದ್ದ ಎರಡೂ (ಸರಕಾರಿ ಮತ್ತು ಅಲೋಶಿಯಸ್) ಕಾಲೇಜುಗಳಲ್ಲಿ ಪುರುಷರಿಗೆ ಮಾತ್ರ ಪ್ರವೇಶವಿತ್ತು. ಇದನ್ನು ಮನಗಂಡ ಪ್ರಾಂಶುಪಾಲರಾದ ಡ. ರೊಸಾರಿಯೋ ಅವರು ೧೯೦೨ರಲ್ಲಿ ಕಾಲೇಜಿನಲ್ಲಿ ಮಹಿಳೆಯರಿಗೆ ಪ್ರವೇಶ ನೀಡಲು ಸರಕಾರದ ಅನುಮತಿ ಪಡೆದರು. ಕಾಲೇಜಿನ ದಾಖಲೆಗಳ ಪ್ರಕಾರ ೧೯೦೨ರಲ್ಲಿ ನೇರಿ, ೧೯೦೩ರಲ್ಲಿ ಮಿಸ್ ಗ್ರೇಟಾ ಫರ್ನಾಂಡೆಸ್, ೧೯೦೪ರಲ್ಲಿ ಅರೋಮ್, ೧೯೦೭ ಸ್ವರ್ಣ ಜೆ.ಎಸ್, ೧೯೦೯ರಲ್ಲಿ ರಾಧಾ ಕುದ್ಮುಲ್ ಮೊದಲಾದವರು ಈ ಕಾಲೇಜಿನ ವಿದ್ಯಾರ್ಥಿನಿಯರಾಗಿದ್ದರು.[೧೦೩] ೧೯೨೧ರಿಂದ ೧೯೪೮ರವರೆಗೆ ಹೆಣ್ಣುಮಕ್ಕಳ ಪ್ರವೇಶ ಸಂಖ್ಯೆ ೧೦೦ ರಿಂದ ೨೪೭ರಷ್ಟಿತ್ತು. ವರ್ಷಾವಾರು ದತ್ತಾಂಶಗಳನ್ನು ಗಮನಿಸಿದರೆ ೧೯೪೫ರಲ್ಲಿದ್ದ ಹೆಣ್ಣುಮಕ್ಕಳ ಸಂಖ್ಯೆ ಒಟ್ಟು ೩೬, ೧೯೪೬ರಲ್ಲಿ ೫೦ ಮಂದಿ, ೧೯೪೭ರಲ್ಲಿ ೪೪೪ ಮಂದಿ ಹಾಗೂ ೧೯೪೮ರಲ್ಲಿ ೩೩ಮಂದಿ ಹೆಣ್ಣುಮಕ್ಕಳು ಉನ್ನತ ಶಿಕ್ಷಣ ಪಡೆಯುತ್ತಿದ್ದರು ಎಂಬುವುದು ತಿಳಿದು ಬರುತ್ತದೆ. ಸ್ಥಳೀಯ ಸುಧಾರಣಾವಾದಿಗಳೂ ಸ್ತ್ರೀ ಶಿಕ್ಷಣದ

ಅನಿವಾರ್ಯತೆಯನ್ನು ಮನಗಂಡರು. ಸ್ತ್ರೀ ಶಿಕ್ಷಣದ ಬಗ್ಗೆ ಕಾಳಜಿ ಹೊಂದಿದ್ದ ಅಮ್ಮೆಂಬಳ ಸುಬ್ಬರಾವ್ ಪೈಯವರು ಮಹಿಳಾ ಸಬಲೀಕರಣದ ನಿಟ್ಟಿನಲ್ಲಿ ಕೆನರಾ ಹೆಣ್ಣುಮಕ್ಕಳ ಪ್ರೌಢಶಾಲೆಯನ್ನು ಸ್ಥಾಪಿಸಿದರು. ಗತವೈಭವ ಏನಿದ್ದರೂ, ಶತಮಾನದ ಹಿಂದೆ ಮಹಿಳೆ ತೀರಾ ಹಿಂದುಳಿದು ಮೂಲೆಗುಂಪಾದುದು, ಹೆಣ್ಣು ಬಾಳೇ ಕಣ್ಣೀರಾದುದು ನಿಜ. ಸೇರಿದ ಮನೆಯ ಸೊತ್ತಾಗಿ, ಮಕ್ಕಳನ್ನು ಹೆರುವ ಯಂತ್ರವಾಗಿ, ಗಂಡಸರ ದರ್ಪ, ದಬ್ಬಾಳಿಕೆಗೆ ತುತ್ತಾಗಿ, ಹಿರಿಯರಿಂದ ತಾತ್ಸಾರಕ್ಕೆ ಒಳಗಾಗಿ ನಲುಗಿದ್ದು ನಿಜ. ಆಕೆಯ ದೈನಾವಸ್ಥೆಗೆ ಮರುಗಿ, ಆ ಕುರಿತು ಚಿಂತಿಸಿ, ಸ್ತ್ರೀ ವಿದ್ಯಾಭ್ಯಾಸದ ಬಗ್ಗೆ ದೃಷ್ಟಿಹರಿಸಿ ತಮ್ಮ ಯೋಜನೆಗಳನ್ನು ಕಾರ್ಯ ರೂಪಕ್ಕೆ ತಂದವರು ಅಮ್ಮೆಂಬಳ ಸುಬ್ಬರಾವ್ ಪೈ.

ಬಾಲಕರಂತೆ ಬಾಲಕಿಯರಿಗೂ ಶಿಕ್ಷಣ ನೀಡಬೇಕು, ಶಿಕ್ಷಣ ಆಕೆಯಲ್ಲಿ ಧೈರ್ಯ, ಸ್ಥೈರ್ಯ, ಆತ್ಮವಿಶ್ವಾಸಗಳನ್ನು ತುಂಬುತ್ತದೆ ಹಾಗೂ ಇದರಿಂದ ಹಲವು ಸಮಸ್ಯೆಗಳಿಗೆ ತಕ್ಕ ಪರಿಹಾರವನ್ನು ಆಕೆಯೇ ಕಂಡುಕೊಳ್ಳಬಲ್ಲಳು ಎಂಬ ನಿಟ್ಟಿನಲ್ಲಿ ೧೮೯೪ರಲ್ಲಿ ಶಾಲೆಯನ್ನು ಸ್ಥಾಪಿಸಲಾಯಿತು. ಮನೆಯಿಂದ ಹೊರಗೆ ಕಾಲಿಡದ ಹೆಣ್ಣುಮಕ್ಕಳನ್ನು ಹೇಗೋ ಶಾಲೆಗೆ ಸೇರಿಸಿದ ನಂತರ ಪ್ರತಿ ಮನೆಯ ಹೆಂಗಸರನ್ನೂ, ಈ ವಿಷಯದಲ್ಲಿ ತೊಡಗಿಸಲು ಸಾಧ್ಯವಾದರೆ, ಕಲಿಯುವ ಹೆಣ್ಣುಮಕ್ಕಳಿಗೆ ಹೆಚ್ಚಿನ ಮನ್ನಣೆ ದೊರಕಲು ಸಾಧ್ಯ ಎನ್ನುವುದನ್ನು ಮನಗಂಡರು. ಪ್ರಾರಂಭದಲ್ಲಿ ಶಾಲೆಯ ಖರ್ಚನ್ನು ನಿಭಾಯಿಸಲು ಯೋಜನೆಯನ್ನು ಕೈಗೊಳ್ಳಲಾಯಿತು ಅದರಂತೆ ಪ್ರತಿಯೊಂದು ಮನೆಯ ಗೃಹಿಣಿ ಪ್ರತಿದಿನ ಅನ್ನಕ್ಕೆ ಅಕ್ಕಿ ತೆಗೆಯುವ ಮೊದಲು ಒಂದು ಮುಷ್ಟಿ ಅಕ್ಕಿಯನ್ನು ಪ್ರತ್ಯೇಕವಾಗಿ ತೆಗೆದಿರಿಸಬೇಕು. ತಿಂಗಳಿಗೊಮ್ಮೆ ಎಲ್ಲಾ ಮನೆಗಳಿಂದ ತೆಗೆದಿರಿಸಿದ ಅಕ್ಕಿಯನ್ನು ಮಾರಾಟ ಮಾಡಿ ಬಂದ ಹಣವನ್ನು ಶಾಲೆಯ ವೆಚ್ಚಕ್ಕೆ ಉಪಯೋಗಿಸುವ ಯೋಜನೆ ಜನಪ್ರಿಯವಾಯಿತು. ಶಾಲೆಯ ಶಿಕ್ಷಕರಿಗೆ ಸಂಬಳ ನೀಡುವ ನಿಟ್ಟಿನಲ್ಲಿ 'ಮುಷ್ಟಿ ಫಂಡ್' ಎನ್ನುವ ವಿನೂತನ ಕಲ್ಪನೆಯನ್ನು ಪೈಯವರು ಸಭೆಗೆ ಪರಿಚಯಿಸಿದರು. ಸ್ತ್ರೀ ವಿದ್ಯಾಭ್ಯಾಸದ ಬಗ್ಗೆ ಚಿಂತನ ಆರಂಭವಾಗಿ ಸಮಾಜ ಬಾಂಧವರಲ್ಲಿ ಜಾಗೃತಿ ಮೂಡಿತು.[೧೦೪]

ಬೆಸೆಂಟ್ ಹಿರಿಯ ಪ್ರಾಥಮಿಕ ಶಾಲೆಯು ಮಂಗಳೂರಿನಲ್ಲಿ ೧೯೧೮ರಲ್ಲಿ ಪ್ರಾರಂಭವಾಯಿತು. ಬಾಲಿಕಾ ಶಿಕ್ಷಣ ಸಭಾದಿಂದ ನಿರ್ವಹಿಸಲ್ಪಟ್ಟ ಈ ಶಾಲೆಯು ನಂತರದಲ್ಲಿ ನ್ಯಾಷನಲ್ ಗರ್ಲ್ಸ್ ಸ್ಕೂಲ್ ಎಂದು ಕರೆಯಲ್ಪಟ್ಟಿತು. ೧೯೧೯ರ ವರೆಗೆ ಸರಕಾರದಿಂದ ಯಾವುದೇ ಅನುದಾನ ಸಿಗದೆ, ತನ್ನ ಕಾರ್ಯವನ್ನು ಮುಂದುವರಿಸಿದ ಈ ಶಾಲೆಯನ್ನು ೧೯೨೮ರಲ್ಲಿ ಸರಕಾರದ ಅನುಮೋದನೆಯ ಮೇರೆಗೆ ಇದನ್ನು ಎಲಿಮೆಂಟರಿ ಶಾಲೆಯಾಗಿ ಪರಿವರ್ತಿಸಲಾಯಿತು. ನಂತರ ೧೯೨೯ರಲ್ಲಿ ಮಾಧ್ಯಮಿಕ ಶಾಲೆಯಾಗಿ ಉನ್ನತೀಕರಿಸಲಾಯಿತು. ೧೯೩೪ರಲ್ಲಿ ಮಂಗಳೂರು ಥಿಯೋಸಾಫಿಕಲ್ ಸೊಸೈಟಿಯು ಶಾಲೆಯ ನಿರ್ವಹಣೆಯನ್ನು ಪಡೆದು, ೧೯೩೮ರಲ್ಲಿ ಬೆಸೆಂಟ್ ನ್ಯಾಷನಲ್ ಗರ್ಲ್ಸ್ ನ್ಯಾಷನಲ್ ಸ್ಕೂಲ್ ಎಂದು ಶಾಲೆಯನ್ನು ಮರು ನಾಮಕರಣ ಮಾಡಲಾಯಿತು. ೧೯೪೦ರಲ್ಲಿ ಸೆಕಂಡರಿ ಶಾಲೆಯಾಗಿ ಏಳಿಗೆ ಕಂಡಿತು. ಶಾಲೆಯಲ್ಲಿ ಸಮರ್ಪಣಾ ಭಾವದಿಂದ

ದುಡಿದವರಲ್ಲಿ ಶಾಲೆಯ ಮುಖ್ಯೋಪಾಧ್ಯಾಯಿನಿ ಪದ್ಮಾಬಾಯಿ ಸಂಜೀವ ರಾವ್ ಪ್ರಮುಖರಾಗಿದ್ದಾರೆ. **(ಅನುಬಂಧ-೧)** ಪ್ರಾರಂಭದಲ್ಲೇ ಮಹಿಳೆಯರಿಗೆ ವಿದ್ಯಾರ್ಥಿನಿಲಯದ ಅಗತ್ಯವಿದೆಯೆಂದು ಮನಗಂಡ ಇವರು ೧೯೧೮ರಲ್ಲಿ ಬಾಡಿಗೆ ಕಟ್ಟಡದಲ್ಲಿ ವಿದ್ಯಾರ್ಥಿನಿಲಯ ಸ್ಥಾಪಿಸಿದರು. ೧೯೩೪ರಲ್ಲಿ ಹೊಸ ಕಟ್ಟಡ ಸ್ಥಾಪನೆಗೊಂಡು ಅದನ್ನು 'ಪದ್ಮಾ ವಿಹಾರ' ವೆಂದು ನಾಮಕರಣ ಮಾಡಲಾಯಿತು. ೧೯೨೮ರಲ್ಲಿ ಸಂಸ್ಥೆಯ ಹಳೆಯ ವಿದ್ಯಾರ್ಥಿಗಳಿಗಾಗಿ 'ವಸಂತ ಪ್ರೇಮಿ ಮಂಡಳಿ' ಸ್ಥಾಪನೆಗೊಂಡಿತು. ೧೯೪೫ರಲ್ಲಿ ಈ ಸಂಸ್ಥೆಯು ಮರುಸಂಘಟನೆಗೊಂಡಿತು. ೧೯೪೩-೪೪ರಲ್ಲಿ ಶ್ರೀಮತಿ ರಮಾಬಾಯಿ. ಎಂ, ೧೯೪೪-೪೬ ರವರೆಗೆ ಸುಶೀಲ ಚೌಟ, ೧೯೪೭-೪೮ ರಲ್ಲಿ ಶ್ರೀಮತಿ ರಾಧಾ ಎಲ್. ರಾವ್ ಇವರುಗಳು ರಾಷ್ಟ್ರೀಯ ಎಡುಕೇಶನ್ ಸೊಸೈಟಿಯ ಪಾರುಪತ್ಯಗಾರ (ಕರೆಸ್ಪಾಡೆಂಟ್) ಆಗಿದ್ದರು. ಬೆಸೆಂಟ್ ರಾಷ್ಟ್ರೀಯ ಹುಡುಗಿಯರ ಶಾಲೆಯಲ್ಲಿ ೧೯೪೩ರಲ್ಲಿ ಶ್ರೀ. ಎಂ. ವೆಂಕಟೇಶ ಪೈ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯಲ್ಲಿ ಮಿಜಾರ್ ತುಳಸಮ್ಮ ೫೦೦೦ ರೂಪಾಯಿ ನೀಡಿ ಸೊಸೈಟಿಯ ಅಜೀವ ಸದಸ್ಯರಾದರು.[೧೦೫] ೧೯೨೪ರಲ್ಲಿ ಮೂಲ್ಕಿ ಶಾಂಭವಿ ಪೂಂಜ ಸಮುದಾಯದ ಮೊದಲ ಮಹಿಳಾ ಪದವೀಧರರಾಗಿ ಸ್ತ್ರೀ ಶಿಕ್ಷಣಕ್ಕೆ ಒತ್ತು ನೀಡಿದರು.[೧೦೬]

ಸುರತ್ಕಲ್ ವಿದ್ಯಾದಾಯಿನಿ ಶಾಲೆಯಲ್ಲಿ ಸರಕಾರಿ ಹೆಮ್ಮಕ್ಕಳ ಟ್ರೈನಿಂಗ್ ಶಾಲೆಯಲ್ಲಿ ಶಿಕ್ಷಕ ತರಬೇತಿ ಹೊಂದಿ ಬಂದ ಶ್ರೀಮತಿ ಬಿ. ಗೌರೀ ಬಾಯಿ (ಪಿ.ಪಿ. ಆನಂದ ಪಂಡಿತರ ಕುಮಾರಿ) ಹಿಂದುಳಿದ ಸ್ತ್ರೀ ವರ್ಗಕ್ಕೆ ಪ್ರಥಮದರ್ಶಿಗಳಾದರು.[೧೦೭] ಅದೇ ರೀತಿ ದಕ್ಷಿಣ ಭಾರತ ಹಿಂದಿ ಪ್ರಚಾರ ಸಭೆ ನಡೆಸಿದ ಪರೀಕ್ಷೆಯಲ್ಲಿ ಶ್ರೀಮತಿ ಕಾಂತಾಬಾಯಿ ಮುರ್ಡೇಶ್ವರ ಒಂದನೇ ದರ್ಜೆಯಲ್ಲಿ ಉತ್ತೀರ್ಣರಾದರು. ಶ್ರೀಮತಿ ಲೀಲಾಬಾಯಿ ಕಾರಂತ ಮತ್ತು ಶ್ರೀಮತಿ ಸೀತಾರತ್ನ ದೇವಿ ಪುತ್ತೂರು ಎರಡನೆಯ ದರ್ಜೆಯಲ್ಲಿ ತೇರ್ಗಡೆಯಾದರು. [೧೦೮] ಮದ್ರಾಸ್ ವಿಶ್ವವಿದ್ಯಾನಿಲಯ ನೀಡಿದ ಬಂಗಾರದ ಮೆಡಲ್ ಅರ್ಥಶಾಸ್ತ್ರ ಮತ್ತು ಇತಿಹಾಸದ ಪ್ರಾವೀಣ್ಯತೆಗಾಗಿ ಶ್ರೀಮತಿ ಡೋರಿಸ್ ಮಾರ್ಗರೆಟ್ ರೆಬೆಲೋ ಬಿ. ಎ ಇವರಿಗೆ ಲಭಿಸಿತು.[೧೦೯] ಹೀಗೆ ಮಹಿಳೆಯರು ಹಂತಹಂತವಾಗಿ ಶಿಕ್ಷಣದ ಪ್ರಯೋಜನ ಪಡೆಯ ತೊಡಗಿದರು.

ಬಂಟ ಸಮುದಾಯದ ಏಳಿಗೆಗಾಗಿ ದುಡಿದ ಜಿಲ್ಲೆಯ ಮಹಿಳೆಯರಲ್ಲಿ ಶಾಂಭವಿ ಪೂಂಜರ ಕೊಡುಗೆ ಮಹತ್ತರವಾದುದು. ೧೯೪೧ರಲ್ಲಿ ಹುಡುಗಿಯರಿಗಾಗಿ ಶ್ರೀ ರಾಮಕೃಷ್ಣ ವಿದ್ಯಾರ್ಥಿನಿ ಭವನವನ್ನು ಮಂಗಳೂರಿನಲ್ಲಿ ತಮ್ಮ ಪತಿ ರಾವ್ ಸಾಹೇಬ್ ರಂಗನಾಥ್ ಪೂಂಜ ಮತ್ತು ಮಾವ ಅತ್ತಾವರ ಬಾಲಕೃಷ್ಣ ಶೆಟ್ಟಿಯವರ ಬೆಂಬಲದಿಂದ ಸ್ಥಾಪಿಸಿದರು. ಇದು ಬಂಟ ಹುಡುಗಿಯರಿಗೆ ಆಧುನಿಕ ಶಿಕ್ಷಣದ ಪ್ರವೇಶ ನೀಡಿತು. ನಿಜವಾಗಿ ಹಾಸ್ಟೆಲ್ ಇತರ ಜಾತಿಗಳ ಬಾಲಕಿಯರಿಗೂ ಪ್ರವೇಶವನ್ನು ಮುಕ್ತವಾಗಿರಿಸಿತು. [೧೧೦] ಆಧುನಿಕ ಶಿಕ್ಷಣ ಪಡೆದ ಜಿಲ್ಲೆಯ ಮಹಿಳೆಯರು ವಿವಿಧ ಸಭೆಗಳಲ್ಲಿ ಪಾಲ್ಗೊಳ್ಳಲು ಪ್ರಾರಂಭಿಸಿದರು. ದಿನಾಂಕ ೨೯-೬-೧೯೩೨ ರಂದು ದಕ್ಷಿಣ ಕನ್ನಡ ಹಿಂದೀ ಪ್ರೇಮೀ ಮಂಡಲದ ಕಾರ್ಯಕಾರಿ ಸಭೆ ಕೊಡಿಯಾಲ ಬೈಲು ರಘುನಾಥಯ್ಯ ಮೆಮೋರಿಯಲ್ ಸಭಾಂಗಣದಲ್ಲಿ ಶ್ರೀಮತಿ ಪಡುಕೋಣೆ ಸೀತಾದೇವಿಯವರ ಅಧ್ಯಕ್ಷತೆಯಲ್ಲಿ

ನಡೆಯಿತು.[೧೧೧] ದಕ್ಷಿಣ ಕನ್ನಡ ಜಿಲ್ಲೆಯ ತೃತೀಯ ಮಹಿಳಾ ಪರಿಷತ್ತು ಶ್ರೀಮತಿ ಕೃಷ್ಣಾಬಾಯಿಯವರ ಅಧ್ಯಕ್ಷತೆಯಲ್ಲಿ ಬೆಸೆಂಟ್ ಬಾಲಿಕಾ ಪಾಠ ಶಾಲೆ ವಠಾರದಲ್ಲಿ ಜರಗಿತು.[೧೧೨] ಕಾರ್ಕಳ ಕೇಂದ್ರದ ಬಾಲಿಕಾ ಪಾಠ ಶಾಲೆಗಳ ಉಪಾಧ್ಯಾಯಿನಿಯರ ಸಭೆಯೊಂದು ಬಿ.ಇ.ಎಮ್ ಬಾಲಿಕಾ ಪಾಠಶಾಲೆಯಲ್ಲಿ ಮಿಸ್ ಕೆ. ಎನ್ ರತ್ನಾಬಾಯಿಯವರ ಅಧ್ಯಕ್ಷತೆಯಲ್ಲಿ ನಡೆಯಿತು.[೧೧೩] ೧೮೭೦ರಲ್ಲಿ ಜಿಲ್ಲೆಯ ವಿದ್ಯಾವಂತ ಸಾರಸ್ವತರು ಜಾತ್ಯಾತೀತ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಬೇಕೆಂಬ ಉದ್ದೇಶದಿಂದ ಗಣಪತಿ ಪ್ರೌಢ ಶಾಲೆಯನ್ನು ತೆರೆದರು.[೧೧೪] ಸಾರಸ್ವತ ಎಡ್ಯುಕೇಶನ್ ಸೊಸೈಟಿ ಸ್ಥಾಪನೆಯಾಗಿ ಗಣಪತಿ ಲೋವರ್ ಸೆಕಂಡರಿ ಶಾಲೆಯ ಆರಂಭವಾಗಲು ಶ್ರೀಮತಿ ರಾಧಾಬಾಯಿ, ಶ್ರೀಮತಿ ಸೀತಾಬಾಯಿ ಶ್ರೀನಿವಾಸರಾವ್, ಮಂಗಳೂರು, ತಲ್ಲಿಚ್ಚೇರಿ ಭವಾನಿ ರಾವ್, ತಲ್ಲಿಚ್ಚೇರಿ ಅಂಬಾ ಬಾಯಿ, ಕಾಬಡ್ ಗಿರಿಜಾಬಾಯಿ ಅನಂತ ರಾವ್, ಮಂಗಳೂರು ಮೊದಲಾದವರು ಶ್ರಮಿಸಿರುವರು. ಸ್ಥಾಪಕರ ಪಟ್ಟಿಯಲ್ಲಿ ಇವರ ಹೆಸರುಗಳನ್ನು ನಮೂದಿಸಲಾಗಿದೆ.[೧೧೫] ಹೀಗೆ ಜಿಲ್ಲೆಯ ಶಿಕ್ಷಿತ ಮಹಿಳೆಯರು ವಿವಿಧ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ.

## ೩.೩ ಬ್ರಿಟಿಷ್ ಆಡಳಿತದಲ್ಲಿ ಮಿಷನರಿಗಳು ಮತ್ತು ಆರೋಗ್ಯ ಸೇವೆಗಳು

ಕ್ರೈಸ್ತ ಮಿಷನರಿಗಳು ಜಿಲ್ಲೆಯಲ್ಲಿ ಆರೋಗ್ಯ ಮತ್ತು ಸೌಲಭ್ಯಗಳ ಕುರಿತು ಜಾಗೃತಿ ಮೂಡಿಸಿದ್ದು ವಸಾಹತು ಆಡಳಿತದ ಪ್ರಯತ್ನಕ್ಕೆ ಪೂರಕವಾಗಿತ್ತು ಮಾತ್ರವಲ್ಲದೆ, ಪಾಶ್ಚಾತ್ಯ ಆರೋಗ್ಯ ಸೇವೆಗಳ ಪ್ರಸರಣಕ್ಕೆ ಸಹಕಾರಿಯಾಯಿತು ಎಂಬುವುದು ಗಮನಾರ್ಹವಾದ ವಿಚಾರ. ಭಾರತದಲ್ಲಿ ೧೮೧೩ರ ನಂತರ ವೈದ್ಯಕೀಯ ಕ್ಷೇತ್ರದಲ್ಲಿ ಮಿಷನರಿಗಳು ತಮ್ಮನ್ನು ತೊಡಗಿಸಿಕೊಂಡರು. ೧೮೮೫ರಲ್ಲಿ ಲೇಡಿ ಢಫರಿನ್ ಭಾರತೀಯ ಮಹಿಳೆಯರಿಗೆ ವೈದ್ಯಕೀಯ ಅನುದಾನ ನೀಡುವ ನಿಟ್ಟಿನಲ್ಲಿ ನ್ಯಾಷನಲ್ ಅಸೋಸಿಯೇಷನ್ ಪ್ರಾರಂಭಿಸಿದಳು. ೧೯೨೦ರ ಹೊತ್ತಿಗೆ ಭಾರತದಲ್ಲಿ ಮಹಿಳಾ ಮಿಷನರಿ ವೈದ್ಯರ ಸಂಖ್ಯೆ ಸುಮಾರು ೧೫೦ಕ್ಕೇರಿತು.

೧೯೨೦ರಲ್ಲಿ ಅರ್ಧಕ್ಕಿಂತ ಹೆಚ್ಚು ಮಹಿಳಾ ವೈದ್ಯೆಯರನ್ನು ಭಾರತದಲ್ಲಿ ನೇಮಕಾತಿ ಮಾಡುವ ಪ್ರಕ್ರಿಯೆ ಪ್ರಾರಂಭವಾಯಿತು. ವಿಮೆನ್ ಕ್ರಿಸ್ಟಿಯನ್ ಮೆಡಿಕಲ್ ಕಾಲೇಜು ಮೊದಲ ಮಹಿಳಾ ಮೆಡಿಕಲ್ ಕಾಲೇಜು ಆಗಿದ್ದು ಭಾರತೀಯ ಮಹಿಳೆಯರನ್ನು ವೈದ್ಯಕೀಯ ಮಿಷನರಿಗಳಾಗಿ ತರಬೇತಿ ನೀಡುವ ವಿನ್ಯಾಸವನ್ನೊಳಗೊಂಡಿತ್ತು.[೧೧೬] ವೈದಕೀಯ ಕ್ಷೇತ್ರದಲ್ಲಿ ಪಾಶ್ಚಾತ್ಯ ಪ್ರಭಾವವು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಲವು ಬದಲಾವಣೆಗಳಿಗೆ ಕಾರಣವಾಯಿತು.

ಜಿಲ್ಲೆಯ ಹವಾಮಾನವು ವರ್ಷದ ಹೆಚ್ಚಿನ ಸಮಯ ಇರುವ ಆದ್ರತೆ ಮತ್ತು ಪಶ್ಚಿಮ ಕರಾವಳಿಯ ವಾತಾವರಣವು ಜಿಲ್ಲೆಯಲ್ಲಿದ್ದ ಯುರೋಪಿಯನ್ನರು ಅದರಲ್ಲೂ ಮಕ್ಕಳು ಮತ್ತು ಮಹಿಳೆಯರು ಹೆಚ್ಚಾಗಿ ರಕ್ತಹೀನತೆಯಿಂದ ಬಳಲಬೇಕಾದ ಸಂದಿಗ್ಧವನ್ನು ತಂದೊಡ್ಡಿತು. ಆದರೆ ಸ್ಥಳೀಯರಲ್ಲಿ ವಿವಿಧ ಚಟುವಟಿಕೆಗಳಲ್ಲಿ ನಿರತರಾದವರು ದೃಢಕಾಯರಾಗಿದ್ದು, ಉತ್ತಮ ಆರೋಗ್ಯವನ್ನು ಕಾಯ್ದುಕೊಂಡಿದ್ದರು.

ಸ್ಥಳೀಯ ತುಳುವರು ಮತ್ತು ಕೆಳವರ್ಗದ ಕ್ರೈಸ್ತರು ಸದೃಢರಾಗಿದ್ದರು. ಹಳ್ಳಿಗಳಲ್ಲಿ ಗ್ರಾಮಕಾರಣಿಕರು ಜನನ ಮತ್ತು ಮರಣ ಪ್ರಮಾಣವನ್ನು ದಾಖಲಿಸುತ್ತಿದ್ದರು. ಅಂತೆಯೇ ಮುನ್ಸಿಪಲ್ ನಗರವಾದ ಮಂಗಳೂರಿನಲ್ಲಿ ವಿಶೇಷ ನಿಯೋಗವು ದಾಖಲೀಕರಣ ಮಾಡುತ್ತಿತ್ತು. ಆದರೆ ದಾಖಲೀಕರಣದಲ್ಲಿ ನಿಷ್ಪಕ್ಷತೆ ಇರಲಿಲ್ಲ. ೧೮೮೮-೯೨ರ ವರದಿಯ ಪ್ರಕಾರ ಮಂಗಳೂರು ಮತ್ತು ಕಾಸರಗೋಡಿನಲ್ಲಿ ಜನನ ಪ್ರಮಾಣವು ೩೦ಕ್ಕಿಂತ ಕಡಿಮೆಯಿದ್ದು, ಗರಿಷ್ಠ ಪ್ರಮಾಣ ೩೨.೮೮ ಕುಂದಾಪುರದಲ್ಲಿ ದಾಖಲಾಗಿದೆ. ಕಾಸರಗೋಡಿನಲ್ಲಿ ಮರಣ ಪ್ರಮಾಣವು ೧೮.೦೧ರಷ್ಟಿದ್ದು, ಗರಿಷ್ಠ ಪ್ರಮಾಣ ೨೬.೮೬ ಉಪ್ಪಿನಂಗಡಿಯಲ್ಲಿ ವರದಿಯಾಗಿದೆ. ಜಿಲ್ಲೆಯಲ್ಲಿ ಕಾಲರಾ, ಮಲೇರಿಯಾ ಸಿಡುಬು ರೋಗ, ಜ್ವರ, ವಾಂತಿಬೇಧಿ, ವಿಷ ಜಂತು ಕಡಿತ ಮುಂತಾದುವುಗಳಿಂದ ಮರಣ ಪ್ರಮಾಣವು ಹೆಚ್ಚಾಗಿತ್ತು.[೧೧೬]

ಮಂಗಳೂರನ್ನು ಆಡಳಿತಾತ್ಮಕ ಮತ್ತು ಮಿಲಿಟರಿ ವ್ಯವಸ್ಥೆಯ ಮೂಲಕೇಂದ್ರವಾಗಿರಿಸಿದ ಬ್ರಿಟಿಷರು ನಂತರದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ವಿವಿಧೆಡೆಗೆ ವಿಸ್ತರಿಸಿದರು.[೧೧೮] ೧೮೮೧ರಲ್ಲಿ ಸ್ಥಳೀಯ ಕ್ರೈಸ್ತ ಮಿಷನರಿಗಳಿಂದ ಎರಡು ಕುಷ್ಠರೋಗಧಾಮ ಸ್ಥಾಪಿಸಲ್ಪಟ್ಟಿತು. ಜಿಲ್ಲೆಯ ಕುಷ್ಠರೋಗಿಗಳು ಮಾತ್ರವಲ್ಲದೆ ಹೊರ ಜಿಲ್ಲೆಯ ಮತ್ತು ಬೊಂಬಾಯಿಂದ ರೋಗಿಗಳು ಚಿಕಿತ್ಸೆಗಾಗಿ ಗುಂಪುಗೂಡಿ ಬರತೊಡಗಿದರು.[೧೧೯] ಹೀಗಾಗಿ ಮಂಗಳೂರು ಸಾರ್ವಜನಿಕ ಆರೋಗ್ಯ ಸೇವೆಯ ರಚನೆಗೆ ಸಾಕ್ಷಿಯಾಯಿತು. ಯುರೋಪಿಯನ್ನರಲ್ಲದೆ ದೇಶೀಯರಿಗೂ ಸಹಾಯವಾಗುವ ನಿಟ್ಟಿನಲ್ಲಿ, ಆರೋಗ್ಯವಂತ ವಾತಾವರಣದಲ್ಲಿ ಬ್ರಿಟಿಷರೂ ಏಳಿಗೆ ಕಾಣಬಹುದೆಂಬ ಆಲೋಚನೆಯಿಂದ ಮಂಗಳೂರು ಆಸ್ಪತ್ರೆಯನ್ನು ೧೮೪೮ರಲ್ಲಿ ತೆರೆಯಲಾಯಿತು.

ಜನರ ಬೇಡಿಕೆಯ ಮೇರೆಗೆ ಕೋರ್ಟ್ ಆಫ್ ಡೈರೆಕ್ಟರ್ಸ್ ಸಮ್ಮತಿ ಪಡೆದು ಮಂಗಳೂರು ಆಸ್ಪತ್ರೆ ಸ್ಥಾಪಿಸಲಾಯಿತು. ಆರಂಭದಲ್ಲಿ ಬಾಡಿಗೆ ಕಟ್ಟಡದಲ್ಲಿ ಆರಂಭವಾದ ಆಸ್ಪತ್ರೆಯು, ೧೮೫೧ರಲ್ಲಿ ಸ್ವಂತ ಕಟ್ಟಡಕ್ಕೆ ಸ್ಥಳಾಂತರಿಸಲ್ಪಟ್ಟಿತು. ೧೮೯೩ರಲ್ಲಿ ಮದ್ರಾಸ್ ಗವರ್ನರ್ ಆದ ಲೋರ್ಡ್ ವೆನ್ಲಾಕ್ ಈ ಆಸ್ಪತ್ರೆಗೆ ಭೇಟಿ ನೀಡಿದ ನಂತರ ಇದನ್ನು ವೆನ್ಲಾಕ್ ಆಸ್ಪತ್ರೆ ಎಂದು ಕರೆಯಲಾಯಿತು. ೧೮೮೭ರಲ್ಲಿ ಜಿಲ್ಲೆಯನ್ನು ಪ್ರವೇಶಿಸಿದ ಸಾಂಕ್ರಾಮಿಕ ರೋಗಗಳ ಪ್ರಭಾವ ತೀವ್ರವಾಗಿ ಕಾಲೆರಾ, ಸಿಡುಬು ಹಾಗೂ ಶೀತಜ್ವರಕ್ಕೆ ಬಲಿಯಾಗಿ ಅಪಾರ ಸಂಖ್ಯೆಯಲ್ಲಿ ಜನರು ಮರಣವನ್ನಪ್ಪಿದರು.  ವೈದ್ಯಕೀಯ ಸಹಾಯಕರನ್ನು ವಿವಿಧ ರೋಗಗ್ರಸ್ಥ ಪ್ರದೇಶಗಳಿಗೆ ಚಿಕಿತ್ಸೆಗಾಗಿ ಕಳುಹಿಸಲಾದ ನಂತರ ೧೮೯೯ರಲ್ಲಿ ವ್ಯಾಪಕವಾದ ಸೋಂಕು ಕೊನೆಗಾಣಿಸಲ್ಪಟ್ಟಿತು.

ಆರಂಭದ ಹಂತದಲ್ಲಿ ಪಾಶ್ಚಾತ್ಯ ಆರೋಗ್ಯ ಸೇವೆಯ ಪರಿಣಾಮಗಳ ಕುರಿತು ಜನರಿಗೆ ಮಾಹಿತಿ ಇರಲಿಲ್ಲ. ಹೀಗಾಗಿ ಹೆಚ್ಚಿನ ರೋಗಿಗಳನ್ನು ಜೀವನ್ಮರಣದ ಅಂತಿಮ ಘಟ್ಟದಲ್ಲಿ ತರಲಾಗುತ್ತಿತ್ತು. ೧೮೫೪ರಲ್ಲಿ ವೈದ್ಯಾಧಿಕಾರಿಯಾಗಿದ್ದ ಬಿ.ಎಸ್.ಚಿಮ್ಮೊ ಬರೆಯುವಂತೆ 'ಹೆಚ್ಚಾಗಿ ಹೀನಾಯ ಅವಸ್ಥೆಯಲ್ಲಿದ್ದ ಅಥವಾ ಮರಣ ಹೊಂದಿದ ರೋಗಿಗಳನ್ನು ಒಳರೋಗಿಗಳಾಗಿ ತರಲಾಗುತ್ತಿತ್ತು. ಆದರೂ ಕೊನೆಯ ಕ್ಷಣದಲ್ಲಿ ರೋಗಿಗಳಿಗೆ

ಒಳ್ಳೆಯ ಆರೈಕೆ ನೀಡಲಾಗುತ್ತಿತ್ತು. ಬಡ ಮಹಿಳೆಯರಿಗೆ ಆಸ್ಪತ್ರೆಗೆ ಬರಲು ಪ್ರೇರೇಪಿಸಿದರೂ ಸಂಪ್ರದಾಯವಾದಿಗಳಾಗಿದ್ದ ಮಹಿಳೆಯರು ಪಾಶ್ಚಾತ್ಯ ಪದ್ಧತಿಯ ಪ್ರಯೋಜನ ಪಡೆಯಲು ತಯಾರಿರಲಿಲ್ಲ.[೧೨೦]

ರೋಗಗಳನ್ನು ತಡೆಗಟ್ಟುವ ನಿಟ್ಟಿನಲ್ಲಿ ಲಸಿಕೆ ಹಾಕುವ ಕ್ರಮವನ್ನು ವಸಾಹತು ಸರಕಾರ ಜಾರಿಗೊಳಿಸಿದಾಗ ಆರಂಭದಲ್ಲಿ ಜನರು ಹಿಂದೇಟು ಹಾಕಿದರು. ಶಿಶುಗಳಿಗೆ ಲಸಿಕೆ ಹಾಕಿದರೆ ಜ್ವರಭಾದೆ ಬರಬಹುದೆಂಬ ಹೆದರಿಕೆ ಜನರಲ್ಲಿತ್ತು. ಹೀಗಾಗಿ ಆಸ್ಪತ್ರೆಗಳಿಗೆ ಬರುವವರ ಸಂಖ್ಯೆ ಕಡಿಮೆಯಾಗತೊಡಗಿತು. ೧೮೭೩-೭೪ರಲ್ಲಿ ಲಸಿಕೆಯನ್ನು ಉತ್ತೇಜಿಸಿ ಹೆಚ್ಚಿನ ಹಣವನ್ನು ಬಿಡುಗಡೆ ಮಾಡಲಾಯಿತು. ಇದೇ ಅವಧಿಯಲ್ಲಿ ಸಿಡುಬುರೋಗ ಕಾಣಿಸಿಕೊಳ್ಳತೊಡಗಿದಾಗ ಜಿಲ್ಲಾ ಕಲೆಕ್ಟರ್, ಲಸಿಕೆ ಹಾಕಿಸಿಕೊಂಡವರಿಗೆ ಚಿಕ್ಕದಾದ ಬಹುಮಾನ ನೀಡುವ ಪ್ರಸ್ತಾವನೆಯನ್ನು ಲೋಕಲ್ ಫಂಡ್ ಬೋರ್ಡ್ ಮುಂದಿಟ್ಟರು.[೧೨೧]

ದಕ್ಷಿಣ ಕನ್ನಡ ಜಿಲ್ಲೆಯ ಹೆಚ್ಚಿನ ಗ್ರಾಮೀಣ ಪ್ರದೇಶಗಳ ಜನರು ಸ್ಥಳೀಯ ಔಷಧಿಗಳನ್ನೇ ಅವಲಂಬಿತರಾಗಿದ್ದರು. ಇಲ್ಲಿ ಆಯುರ್ವೇದಿಕ್ ಔಷಧಿಗಳನ್ನು ಮಾರುವ ಔಷಧಾಲಯಗಳಿದ್ದು, ಔಷಧೀಯ ಗುಣವುಳ್ಳ ಒಣಎಲೆಗಳು, ಒಣ ಬೀಜಗಳು, ಔಷಧೀಯ ಹುಡಿಗಳು, ಬೇರುಗಳು ಇತ್ಯಾದಿಗಳನ್ನು ಮಾರಾಟ ಮಾಡಲಾಗುತ್ತಿತ್ತು. ಮೂಳೆಮುರಿತ, ವಿಷಜಂತು ಕಡಿತಕ್ಕೆ ಚಿಕಿತ್ಸೆ, ಪಾರ್ಶ್ವವಾಯು ಗುಣಪಡಿಸಲು ನುರಿತ ತಜ್ಞರಿದ್ದುದರಿಂದ ಪಾಶ್ಚಾತ್ಯ ವೈದ್ಯಕೀಯ ಚಿಕಿತ್ಸೆಗೆ ಜನರ ಸ್ಪಂದನೆ ಪ್ರಾಥಮಿಕ ಹಂತದಲ್ಲಿ ಮಂದವಾಗಿತ್ತು. ವೈದ್ಯಕೀಯ ಘಟಕಗಳ ಮತ್ತು ಸಂಸ್ಥೆಗಳ ಪ್ರಸರಣ ಮತ್ತು ಆಸ್ಪತ್ರೆಗಳು ಹಾಗೆಯೇ ಔಷಧಾಲಯಗಳ ಭಾರೀ ಖರ್ಚುಗಳಿಂದಾಗಿ ೧೮೭೪ರಲ್ಲಿ ಸ್ಥಳೀಯ ಆಸ್ಪತ್ರೆಗಳ ಆಡಳಿತವನ್ನು ಲೋಕಲ್ ಫಂಡ್ ಬೋರ್ಡ್ಸ್ ಇಲ್ಲಿಗೆ ೧೮೭೪ರಲ್ಲಿ ಹಸ್ತಾಂತರಿಸಲಾಯಿತು.[೧೨೨]

೧೮೯೦ರಲ್ಲಿ ಕುಂದಾಪುರ, ಕಾರ್ಕಳ, ಉಡುಪಿ, ಮುಲ್ಕಿ, ಮೂಡಬಿದ್ರೆ, ಬಂಟ್ವಾಳ, ಪುತ್ತೂರು ಮತ್ತು ಕಾಸರಗೋಡಿನಲ್ಲಿ ಶುಶ್ರೂಷಕಿಯರಿಗೆ ಸ್ಥಾನ ನೀಡಲಾದರೂ ಅವರ ಸೇವೆಯನ್ನು ಬಳಸಿಕೊಳ್ಳಲು ಹಿಂಜರಿಕೆ ತೋರಿಸಿ, ತರಬೇತಿ ಹೊಂದದ ಸ್ಥಳೀಯ ಶುಶ್ರೂಷಕಿಯರನ್ನೇ ಅವಲಂಭಿಸಲು ಆರಂಭಿಸಿದರು.[೧೨೩] ಸಂಪ್ರದಾಯವಾದಿಗಳು ತರಬೇತಿ ಹೊಂದದ ಶುಶ್ರೂಷಕಿಯರನ್ನು ಅವಲಂಭಿಸಿದ್ದುದರಿಂದ ಹೆಬ್ರಿ ಚಿಕಿತ್ಸಾಲಯದಲ್ಲಿ ಖಾಲಿ ಇದ್ದ ಶುಶ್ರೂಷಕಿಯ ಹುದ್ದೆಗೆ ನೇಮಕಾತಿ ಅನಗತ್ಯವೆಂದು ತಾಲೂಕು ಬೋರ್ಡ್ ಭಾವಿಸಿತು.[೧೨೪]

**ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ಥಾಪಿಸಲ್ಪಟ್ಟ ಆರೋಗ್ಯ ಸಂಸ್ಥೆಗಳು** [೧೨೫]

| ತಾಲೂಕು | ನಗರ | ಸಂಸ್ಥೆ | ಸ್ಥಾಪನಾ ವರ್ಷ |
|---|---|---|---|
| ಕುಂದಾಪುರ | ಕುಂದಾಪುರ | ಲೋಕಲ್ ಫಂಡ್ ಆಸ್ಪತ್ರೆ | ೧೮೭೩ |
| | ಕೊಲ್ಲೂರ | ಲೋಕಲ್ ಫಂಡ್ ಚಿಕಿತ್ಸಾಲಯ | ೧೮೮೮ |
| | ಶಂಕರನಾರಾಯಣ | | ೧೮೮೯ |
| ಕಾಸರಗೋಡು | ಕಾಸರಗೋಡು | ಲೋಕಲ್ ಫಂಡ್ ಆಸ್ಪತ್ರೆ | ೧೮೭೩ |
| | ಮಂಜೇಶ್ವರ | ಲೋಕಲ್ ಫಂಡ್ ಚಿಕಿತ್ಸಾಲಯ | ೧೮೯೨ |
| | ಹೊಸದುರ್ಗ | ಲೋಕಲ್ ಫಂಡ್ ಚಿಕಿತ್ಸಾಲಯ | ೧೮೯೨ |
| ಮಂಗಳೂರು | ಮಂಗಳೂರು | ಮುನ್ಸಿಪಲ್ ಆಸ್ಪತ್ರೆ | ೧೮೪೮ |
| | ಬಂಟ್ವಾಳ | ಲೋಕಲ್ ಫಂಡ್ ಆಸ್ಪತ್ರೆ | ೧೮೭೯ |
| | ಮುಲ್ಕಿ | ಲೋಕಲ್ ಫಂಡ್ ಚಿಕಿತ್ಸಾಲಯ | ೧೮೮೭ |
| | ಮೂಡಬಿದ್ರೆ | ಲೋಕಲ್‌ಫಂಡ್ ಚಿಕಿತ್ಸಾಲಯ | ೧೮೮೭ |
| | ಬೋಳಾರ | ಮುನ್ಸಿಪಲ್ ಆಸ್ಪತ್ರೆ | ೧೮೯೨ |
| ಉಡುಪಿ | ಉಡುಪಿ | ಲೋಕಲ್ ಫಂಡ್ ಆಸ್ಪತ್ರೆ | ೧೮೭೨ |
| | ಕಾರ್ಕಳ | ಲೋಕಲ್ ಫಂಡ್ ಚಿಕಿತ್ಸಾಲಯ | ೧೮೭೯ |
| | ಹೆಬ್ರಿ | ಲೋಕಲ್ ಫಂಡ್ ಚಿಕಿತ್ಸಾಲಯ | ೧೮೮೭ |
| ಉಪ್ಪಿನಂಗಡಿ | ಪುತ್ತೂರು | ಲೋಕಲ್ ಫಂಡ್ ಆಸ್ಪತ್ರೆ | ೧೮೭೨ |
| | ಬೆಳ್ತಂಗಡಿ | ಲೋಕಲ್ ಫಂಡ್ ಚಿಕಿತ್ಸಾಲಯ | ೧೮೮೭ |
| | ಗೋಳಿತಟ್ಟು | ಲೋಕಲ್ ಫಂಡ್ ಚಿಕಿತ್ಸಾಲಯ | ೧೮೮೭ |
| | ಜಾಲ್ಸೂರ್ | | ೧೮೮೭ |

ತಾಲೂಕು ಪ್ರಧಾನ ಕೇಂದ್ರಗಳಲ್ಲಿ ಸರಕಾರವು ಶುಶ್ರೂಷಕಿಯರನ್ನು ಒದಗಿಸಿದರೂ, ಕೆಲವು ಹಳ್ಳಿಗಳಿಂದ ತರಬೇತಿ ಹೊಂದಿದ ಶುಶ್ರೂಷಕಿಯರಿಗೆ ಬೇಡಿಕೆ ಇತ್ತು. ಉದಾಹರಣೆಗೆ ಕಾರ್ಕಳ ತಾಲೂಕುಗಳಲ್ಲಿರುವ ಹಳ್ಳಿಗಳ ಬೇಡಿಕೆ[೧೨೬] ೧೯೨೦ರಲ್ಲಿ ಈ ಬೇಡಿಕೆಯನ್ನು ಆಡಳಿತವು ಗಂಭೀರವಾಗಿ ಪರಿಗಣಿಸಿತು. ದಾದಿಗಳ (ಸಾಂಪ್ರದಾಯಿಕ ಶುಶ್ರೂಷಕಿಯರು) ಕೆಲಸದ ಗುಣಮಟ್ಟವನ್ನು ಹೆಚ್ಚಿಸುವ ನಿಟ್ಟಿನಲ್ಲಿ

ಪ್ರಯತ್ನ ಮಾಡಲಾಯಿತು. ಆದರೆ ದಾದಿಗಳು ತಮ್ಮ ಹಳ್ಳಿಗಳನ್ನು ಬಿಟ್ಟು ಬೇರೆ ಪ್ರದೇಶಗಳಿಗೆ ತರಬೇತಿಗಾಗಿ ಹೋಗಲು ಹಿಂದೇಟು ಹಾಕಿದ್ದರಿಂದ ಆಡಳಿತದ ಪ್ರಯತ್ನಗಳು ಫಲಕಾರಿಯಾಗಲಿಲ್ಲ.[೧೨೭] ೧೮೯೦ರ ಹೊತ್ತಿಗೆ ಜನರು ಆಸ್ಪತ್ರೆ ಮತ್ತು ಚಿಕಿತ್ಸಾಲಯಗಳ ಉಪಯೋಗಗಳ ಕುರಿತು ಅರ್ಥೈಸಲಾರಂಭಿಸಿದರು. ಪಾಶ್ಚಾತ್ಯ ಔಷಧ ಹೆಚ್ಚು ಪರಿಣಾಮಕಾರಿ ಎಂಬುದು ಮನವರಿಕೆಯಾಗಿ ಹೆಚ್ಚೆಚ್ಚು ಮಂದಿ ಚಿಕಿತ್ಸಾಲಯಗಳಿಗೆ ಬರಲಾರಂಭಿಸಿದರೆಂಬುವುದು ವರದಿಗಳಿಂದ ತಿಳಿದು ಬರುತ್ತದೆ.[೧೨೮] ಆದರೆ ಕೆಲವು ತಾಲೂಕುಗಳಲ್ಲಿ ಆರೋಗ್ಯ ಸೇವೆಯನ್ನು ಮೇಲ್ದರ್ಜೆಗೆ ಏರಿಸಲಾಗಿರಲಿಲ್ಲ. ಉದಾಹರಣೆಗೆ ಕುಂದಾಪುರ ತಾಲೂಕಿನಲ್ಲಿ ಮಹಿಳಾ ಮತ್ತು ಮಕ್ಕಳ ಚಿಕಿತ್ಸಾಲಯಗಳು ಇರಲಿಲ್ಲ.[೧೨೯] ೧೯೨೦ರ ಹೊತ್ತಿಗೆ ಎಲ್ಲಾ ತಾಲೂಕು ಕೇಂದ್ರಗಳಲ್ಲಿ ಚಿಕಿತ್ಸಾಲಯಗಳನ್ನು ಸ್ಥಾಪಿಸಲಾಯಿತು.[೧೩೦] ೧೯೨೧-೨೨ರಲ್ಲಿ ಬಾರ್ಕೂರಿನಲ್ಲಿ ಚಿಕಿತ್ಸಾಲಯವನ್ನು ತೆರೆಯಲು ನಿರ್ಧರಿಸಿದಾಗ ಸ್ಥಳೀಯರು ಚಿಕಿತ್ಸಾಲಯಕ್ಕೆ ಉಚಿತವಾಗಿ ಕಟ್ಟಡದ ನೆರವು ನೀಡಲು ಮುಂದಾದರು.

**೧೮೮೯ರ ನಂತರ ಜಿಲ್ಲೆಯಲ್ಲಿ ತೆರೆಯಲಾದ ಆಸ್ಪತ್ರೆಗಳು** [೧೩೧]

| | |
|---|---|
| ಶಂಕರನಾರಾಯಣ | ೧೮೮೯ |
| ಮಂಗಳೂರು ಸಂತ ಜೋಸೆಫ್ ಕುಷ್ಠರೋಗ ಆಸ್ಪತ್ರೆ | ೧೮೯೦ |
| ಬೋಳಾರ | ೧೮೯೨ |
| ಹೊಸದುರ್ಗ | ೧೮೯೨ |
| ಮಂಜೇಶ್ವರ | ೧೯೧೯ |
| ಮಂಗಳೂರು ಲೇಡಿ ಗೊಶಾನ್ ಆಸ್ಪತ್ರೆ | ೧೯೧೯ |
| ಉಡುಪಿ ಸರಕಾರಿ ಮಾತೃತ್ವ ಮತ್ತು ಮಕ್ಕಳ ಆಸ್ಪತ್ರೆ | ೧೯೨೦ |
| ಉಡುಪಿ ಬಾಸೆಲ್ ಮಿಶನ್ ಲೊಂಬಾರ್ಡ್ ಆಸ್ಪತ್ರೆ ಉಡುಪಿ | ೧೯೨೩ |

ಜಿಲ್ಲೆಯಲ್ಲಿ ಆಸ್ಪತ್ರೆಗಳು ಸ್ಥಾಪಿಸಲ್ಪಟ್ಟರೂ, ಕೆಲವು ಚಿಕಿತ್ಸಾಲಯಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ರೋಗಿಗಳ ಹಾಜರಾತಿ ಇರಲಿಲ್ಲ. ಉಪ್ಪಿನಂಗಡಿ, ಸುಳ್ಯ, ಶಂಕರ ನಾರಾಯಣ ಮತ್ತು ಮೂಡಬಿದ್ರೆ ಪ್ರದೇಶಗಳಲ್ಲಿ ರೋಗಿಗಳ ದೈನಂದಿನ ಹಾಜರಾತಿ ೩೦ಕ್ಕಿಂತಲೂ ಕಡಿಮೆ ಇತ್ತು.[೧೩೨] ೧೯೩೧ರಲ್ಲಿ ಮಹಿಳಾ ಮತ್ತು ಮಕ್ಕಳ ಆಸ್ಪತ್ರೆಯಲ್ಲಿ ೧೮೯೧ ಮಂದಿ ಹೊರರೋಗಿಗಳು ಮತ್ತು ೧೪೫೪ ಮಂದಿ ಒಳರೋಗಿಗಳು

ಚಿಕಿತ್ಸೆ ಪಡೆದುಕೊಂಡಿದ್ದರು. ೧೯೨೭ರಲ್ಲಿ ಮದ್ರಾಸಿನ ಗವರ್ನರ್ ಆಗಿದ್ದ ವಿಸ್ಕೌಂಟ್ ಗೋಶಾನ್ ಇವರು ಮಕ್ಕಳ ಮತ್ತು ಮಹಿಳಾ ಆಸ್ಪತ್ರೆಯನ್ನು ಭೇಟಿ ಮಾಡಿದ್ದರು.[೧೩೩]

**೧೮೫೫ - ೫೬ರಲ್ಲಿ ಶಸ್ತ್ರ ಚಿಕಿತ್ಸೆಗೊಳಪಟ್ಟ ಮಹಿಳೆಯರು [೧೩೪]**

| ಕ್ರ. ಸಂ | ಹೆಸರು | ವಯಸ್ಸು |
|---|---|---|
| ೧. | ಸೋಮು | ೧೨ |
| ೨. | ಪೊಣ್ಣುಪ್ಪ | ೨೬ |
| ೩. | ಅಲೆಂಬಿ | ೨೮ |
| ೪. | ವೆಂಕಟಮ್ಮ | ೨೫ |
| ೫. | ಥುಕೋರ | ೨೬ |
| ೬. | ಪಾರ್ವತಿ | ೪೦ |
| ೭. | ಲಕ್ಷೋತಮ್ಮ | ೧೦ |
| ೮. | ಹಾಸಿಯಮ್ಮ | ೩೦ |
| ೯. | ಜಮುನ | ೩ |
| ೧೦. | ಪುಟ್ಟಿ | ೩೦ |
| ೧೧. | ಮುಕಾಂಬೆ | ೩೦ |
| ೧೨. | ಲಕ್ಷ್ಮಿ | ೫ |
| ೧೩. | ಹುಂಕಾರ | ೨೬ |

೧೯೩೧-೩೨ರ ವೇಳೆಗೆ ಜಿಲ್ಲೆಯಲ್ಲಿ ಆರೋಗ್ಯಸೇವೆ ನೀಡುತ್ತಿರುವ ಹಲವಾರು ಆಸ್ಪತ್ರೆಗಳು ಮತ್ತು ಚಿಕಿತ್ಸಾಲಯಗಳಿದ್ದವು. ಬಾಸೆಲ್ ಮಿಷನರಿಗಳು ೧೯೦೭ರಲ್ಲಿ ಮಂಗಳೂರಿನ ಮರೋಳಿಯಲ್ಲಿ ಕುಷ್ಠರೋಗ ಆಸ್ಪತ್ರೆಯನ್ನು ಸ್ಥಾಪಿಸಿದರು. ಆದರೆ ತರಬೇತಿ ಹೊಂದಿದ ವೈದ್ಯರ ಕೊರತೆಯಿಂದಾಗಿ ೧೯೧೦ರ ನಂತರ ವೈದ್ಯಕೀಯ ಸೌಲಭ್ಯ ಮುಂದುವರೆಸಲಾಗಲಿಲ್ಲ. ಪಾಶ್ಚಾತ್ಯ ಔಷಧಿಯ ಮೋಡಿಯಿಂದ ಸಮಾಜದ ಕೆಳವರ್ಗದ ಜನರನ್ನು ಮತಾಂತರ ಪ್ರಕ್ರಿಯೆಯಲ್ಲಿ ಮಿಷನರಿಗಳು ತೊಡಗಿಸಿರುವುದನ್ನು ಮೇಲುಸ್ತರದವರಿಗೆ ಸಹಿಸಲಾಗಲಿಲ್ಲ. ಮಾತ್ರವಲ್ಲದೆ ಬಾಸೆಲ್ ಮಿಷನ್ ಸೊಸೈಟಿಯು ಸ್ವಿಜ್ ಸಂಘಟನೆಯಾಗಿದ್ದು ಅನೇಕ ಮಿಷನರಿಗಳು ಜರ್ಮನ್ ದೇಶದವರಾಗಿದ್ದರು. ಮೊದಲ ಮಹಾಯುದ್ಧದಲ್ಲಿ ಜರ್ಮನಿ ಇಂಗ್ಲಿಷರ

ವಿರೋಧಿಯಾಗಿದ್ದ ಕಾರಣ ಬ್ರಿಟಿಷರು ಭಾರತದಲ್ಲಿ ಅವರ ಚಟುವಟಿಕೆಗಳನ್ನು ನಿಷೇಧಿಸಿದರು. ಎರಡನೆಯ ಮಹಾಯುದ್ಧದಲ್ಲಿ ಕೂಡ ನಿಷೇಧಾಜ್ಞೆ ಮುಂದುವರಿಯಿತು. ಇದು ಮಿಷನರಿಗಳ ವೈದ್ಯಕೀಯ ಚಟುವಟಿಕೆಗಳ ಮೇಲೂ ಪರಿಣಾಮ ಬೀರಿತು.[೧೩೫]

ಮೊದಲ ಮಹಾಯುದ್ಧದ ಹೊತ್ತಿಗೆ ಹಲವು ಮಂದಿ ಭಾರತೀಯರು ವೈದ್ಯಕೀಯ ಸೇವೆಯನ್ನು ಪ್ರವೇಶಿಸಿ, ಮುನಿಸಿಪಲ್, ಲೋಕಲ್ ಬೋರ್ಡ್ ಮತ್ತು ಖಾಸಗಿ ವಲಯದಲ್ಲಿ ಸೇವೆ ಪ್ರಾರಂಭಿಸಿದರು.[೧೩೬] ಜಿಲ್ಲೆಯಲ್ಲಿ ವೆನ್ಲಾಕ್ ಆಸ್ಪತ್ರೆ ಹಾಗೂ ಮಹಿಳಾ ಮತ್ತು ಮಕ್ಕಳ ಆಸ್ಪತ್ರೆಯನ್ನು ಹೊರತುಪಡಿಸಿ ಖಾಸಗಿ ಆಸ್ಪತ್ರೆಗಳಾದ ಫಾದರ್ ಮುಲ್ಲರ್ ಚಾರಿಟೇಬಲ್ ಸಂಸ್ಥೆಗಳು, ಸಂತ ಜೋಸೆಫ್ ಕುಷ್ಠ ರೋಗಧಾಮ, ಶ್ರೀ ರಾಮಕೃಷ್ಣ ನರ್ಸಿಂಗ್ ಹೋಮ್ ಇತ್ಯಾದಿ ಜಿಲ್ಲೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ೮ ಖಾಸಗಿ ಆಯುರ್ವೇದಿಕ್ ಚಿಕಿತ್ಸಾಲಯಗಳಿದ್ದವು. ಬೋಳಾರ ಮತ್ತು ಬೋಳೂರುಗಳಲ್ಲಿ ಮುನಿಸಿಪಲ್ ಕೌನ್ಸಿಲ್ ಎರಡು ಆಯುರ್ವೇದಿಕ್ ಆಸ್ಪತ್ರೆಗಳನ್ನು ಮುನ್ಸಿಪಲ್ ಬೋರ್ಡ್ ನಿರ್ವಹಿಸುತ್ತಿತ್ತು.[೧೩೭]

ಫಾದರ್ ಮುಲ್ಲರ್ಸ್ ಆಸ್ಪತ್ರೆಯನ್ನು ಜರ್ಮನ್ ಜೆಸ್ಯೂಟ್ ಮಿಷನರಿಯಾದ ಫಾದರ್ ಅಗಸ್ಟಸ್ ಮುಲ್ಲರ್ ಸ್ಥಾಪಿಸಿದರು. ೧೮೮೦ರಲ್ಲಿ ಮಂಗಳೂರಿನ ಕಂಕನಾಡಿಯ ಬಳಿ ಕೆಲವು ಎಕರೆ ಸ್ಥಳವನ್ನು ಖರೀದಿಸಿ ಹೋಮಿಯೋಪತಿ ಚಿಕಿತ್ಸಾಲಯವನ್ನು ಸ್ಥಾಪಿಸಿದರು. ಈ ಚಿಕಿತ್ಸಾಲಯದಲ್ಲಿ ಪುರುಷರಿಗೆ ಮತ್ತು ಮಹಿಳೆಯರಿಗೆ ಪ್ರತ್ಯೇಕ ವಿಭಾಗಗಳಿದ್ದವು.[೧೩೮] ೧೯೩೧ರಲ್ಲಿ ಫಾದರ್ ಮುಲ್ಲರ್ಸ್ ಅನುದಾನ ರಹಿತ ಆಸ್ಪತ್ರೆಯಲ್ಲಿ ೩೭೧೦೮ ಮಂದಿ ಹೊರರೋಗಿಗಳಾಗಿ ಮತ್ತು ೨೯೩೩ ಮಂದಿ ಒಳರೋಗಿಗಳಾಗಿ ಚಿಕಿತ್ಸೆ ಪಡೆಯುತ್ತಿದ್ದರು.[೧೩೯]

ಕುಷ್ಠರೋಗ ಧಾಮದಲ್ಲಿ ಪ್ರತಿದಿನ ಸುಮಾರು ೭೧ ಮಂದಿ ಒಳರೋಗಿಗಳಾಗಿ ಹಾಗೂ ೨೦ ಮಂದಿ ಹೊರರೋಗಿಗಳಾಗಿ ಚಿಕಿತ್ಸೆ ಪಡೆಯುತ್ತಿದ್ದು, ೧೯೩೧ರಲ್ಲಿ ಮುನ್ಸಿಪಾಲ್ ಕೌನ್ಸಿಲ್ ನಿಂದ ರೂಪಾಯಿ ೩೦೦ಯನ್ನು ನೀಡಲಾಗಿತ್ತು. ೧೯೨೩ರಲ್ಲಿ ಡಾ. ಇವಾ. ಲೊಂಬಾರ್ಡ್ ಇವರು ಉಡುಪಿಯಲ್ಲಿ ಸ್ತ್ರೀಯರಿಗಾಗಿ ಆಸ್ಪತ್ರೆಯನ್ನು ಸ್ಥಾಪಿಸಿದರು. ಆರಂಭದಲ್ಲಿ ಖಾಲಿ ಇದ್ದ ಬಂಗಲೆಯಲ್ಲಿ ಆಸ್ಪತ್ರೆಯನ್ನು ಸ್ಥಾಪಿಸಿದಾಗ ೪೦,೦೦೦ ರೋಗಿಗಳಿಗೆ ಒಬ್ಬರೇ ವೈದ್ಯರಿದ್ದರು.[೧೪೦] ೧೮೯೦ರಲ್ಲಿ ಸ್ವಿಟ್ಜರ್ ಲ್ಯಾಂಡಿನಲ್ಲಿ ಜನಿಸಿದ ಡಾ. ಇವಾ ಲೊಂಬಾರ್ಡರು ಚಿಕ್ಕಂದಿನಿಂದಲೇ ವೈದ್ಯೆಯಾಗುವ ಕನಸನ್ನು ಕಂಡಿದ್ದರು.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖ ಕೇಂದ್ರವಾದ ಉಡುಪಿಯಲ್ಲಿ ೧೮೮೫ರಲ್ಲಿ ಮಿಷನ್ ಘಟಕವನ್ನು ಸ್ಥಾಪಿಸಿದಾಗ ತೀವ್ರ ವಿರೋಧ ವ್ಯಕ್ತವಾಯಿತು. ಮಿಷನರಿಗಳು ಉಪಯೋಗಿಸುತ್ತಿದ್ದ ಬಾವಿಗಳಿಗೆ ವಿಷ ಹಾಕಲಾಯಿತು. ಮಿಷನ್ ಬಂಗಲೆಗೆ ಬೆಂಕಿ ಹಾಕಲಾಯಿತು. ಹೀಗೆ ಪ್ರಾರಂಭದಲ್ಲಿ ಸ್ಥಳೀಯರು ಮಿಷನರಿಗಳನ್ನು ಸಂಶಾಯಾಸ್ಪದ ದೃಷ್ಟಿಕೋನದಿಂದ ಕಂಡರು. ಉಡುಪಿಯಲ್ಲಿ ಸಂಪ್ರದಾಯಸ್ಥ ಬ್ರಾಹ್ಮಣರು ಹೆಚ್ಚಿನ ಸಂಖ್ಯೆಯಲ್ಲಿದ್ದು, ಭೂತಾರಾದಕರೂ ಇದ್ದರು. ಈ ಎಲ್ಲಾ ವೈರುಧ್ಯಗಳ ನಡುವೆ ಉಡುಪಿಯಲ್ಲಿ

ಮಹಿಳೆಯರ ಮತ್ತು ಮಕ್ಕಳ ವೈದ್ಯಕೀಯ ಸೇವೆಯ ಕೊರತೆಯನ್ನು ನಿವಾರಿಸಲು ಡಾ. ಲೊಂಬಾರ್ಡ್ ಆಸ್ಪತ್ರೆಯನ್ನು ತೆರೆದರು. ೧೯೨೩ರ ಜೂನ್ ತಿಂಗಳಿನಿಂದ ರೋಗಿಗಳ ಸಂಖ್ಯೆ ಹೆಚ್ಚಾಗುತ್ತಾ ಹೋಯಿತು. ಲೈಂಗಿಕ ಕಾಯಿಲೆಗೆ ಒಳಗಾಗುತ್ತಿದ್ದ ಮಹಿಳೆಯರು, ಅಪೌಷ್ಟಿಕತೆಯಿಂದ ಬಳಲುತ್ತಿದ್ದ ಮಕ್ಕಳು ಮಾತ್ರವಲ್ಲದೆ, ಕಣ್ಣಿನ ಮತ್ತು ಚರ್ಮದ ರೋಗ, ಕರುಳ ಹುಣ್ಣು, ಹುಳಬಾಧೆ ಮೊದಲಾದ ರೋಗಗಳಿಗೆ ಚಿಕಿತ್ಸೆ ಪಡೆಯಲು ಆಸ್ಪತ್ರೆಗೆ ಜನರು ಬರತೊಡಗಿದರು. ಮುಂದೆ ಅನಾಥರು, ನಿರ್ಗತಿಕರು ಆಸ್ಪತ್ರೆಯಲ್ಲಿ ಆಶ್ರಯ ಪಡೆದರು. ಅನೇಕ ವಿಧವೆಯರಿಗೆ ಆಸ್ಪತ್ರೆಯಲ್ಲಿ ಕೆಲಸ ಮಾಡುವ ಅವಕಾಶವೂ ದೊರೆಯಿತು.[೧೪೧]

೧೯೨೮ರಲ್ಲಿ ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ಮೊದಲ ಬಾರಿಗೆ ದಲಿತ ಮಹಿಳೆಯರಿಗೆ ವೈದ್ಯಕೀಯ ಕೋರ್ಸ್ ಮಾಡಲು ಅವಕಾಶ ನೀಡಲಾಯಿತು. (ಜಿ.ಓ. ನಂಬ್ರ ೫೬೦, ತಾ. ೧೩-೩-೧೯೨೮). ೧೯೨೬-೨೭ರಲ್ಲಿ ಮದ್ರಾಸ್ ಪ್ರೆಸಿಡೆನ್ಸಿಯ ಮೆಡಿಕಲ್ ಕಾಲೇಜಿನಲ್ಲಿ ಒಬ್ಬರು ಹಿಂದುಳಿದ ವರ್ಗದ ವಿದ್ಯಾರ್ಥಿನಿ ವ್ಯಾಸಾಂಗ ಮಾಡುತ್ತಿದ್ದಳೆಂಬುದು ಪ್ರಶಂಸನೀಯ ಬೆಳವಣಿಗೆಯಾಗಿದೆ.[೧೪೨] ೧೪-೧೨-೧೯೨೮ರ ಸರಕಾರದ ನಿರ್ಣಯದ ಪ್ರಕಾರ ಮುಫಜಲ್ ಮುನ್ಸಿಪಾಲಿಟಿ, ಜಿಲ್ಲಾ ಬೋರ್ಡ್ ಮತ್ತು ತಾಲೂಕು ಬೋರ್ಡುಗಳಲ್ಲಿ ಮಾತೃತ್ವ ಮತ್ತು ಶಿಶುಕಲ್ಯಾಣ ಕೇಂದ್ರಗಳನ್ನು ಸ್ಥಾಪಿಸಿ, ದಾದಿಯರಿಗೆ ಹೈದರಾಬಾದ್ ಮತ್ತು ಸಿಮ್ಲಾಗಳಲ್ಲಿ ತರಬೇತಿ ನೀಡುವ ರೀತಿಯಲ್ಲಿ ಆಧುನಿಕ ರೀತಿಯ ಸೂತಿಕಾ ಶಾಸ್ತ್ರ ತರಬೇತಿ ನೀಡಲು ಪ್ರಸ್ಥಾಪಿಸಲಾಯಿತು.

ಇದೇ ರೀತಿಯ ನಿರ್ಣಯವನ್ನು ವೈದ್ಯರಾದ ಮುತ್ತುಲಕ್ಷ್ಮಿ ರೆಡ್ಡಿಯವರು ತಾ. ೮-೧೦-೧೯೨೮ರಲ್ಲಿಯೇ ಸರ್ಕಾರದ ಮುಂದೆ ಪ್ರಸ್ಥಾಪಿಸಿ ತಕ್ಷಣ ಕ್ರಮ ತೆಗೆದುಕೊಳ್ಳಬೇಕೆಂದು ಕೇಳಿಕೊಂಡಿದ್ದರು. ಆದರೆ ಸರಕಾರ ಯಾವುದೇ ಪ್ರತಿಕ್ರಿಯೆ ನೀಡಿರಲಿಲ್ಲ. ನಂತರದಲ್ಲಿ ಡಾ.ಮುತ್ತುಲಕ್ಷ್ಮಿಯವರ ಬೇಡಿಕೆಯ ಮೇರೆಗೆ ಬ್ರಿಟಿಷ್ ಸರಕಾರ ಅಗತ್ಯ ಕ್ರಮಗಳನ್ನು ತೆಗೆದುಕೊಂಡಿತು. ಈ ಮೊದಲ ತನ್ನ ನಿಲುವುಗಳ ಬಗ್ಗೆ ಮಾಹಿತಿ ನೀಡಿದ ಸರಕಾರ ಮೊದಲೇ ಕ್ರಮಗಳನ್ನು ತೆಗೆದುಕೊಂಡಿದ್ದರೂ ಸಹ ಸ್ಥಳೀಯ ಮಂಡಳಿಗಳ ಸ್ಪಂದನೆಯ ಕೊರತೆಯಿಂದಾಗಿ ಸರಿಯಾದ ಕ್ರಮ ಕೈಗೊಳ್ಳಲಾಗಿರಲಿಲ್ಲ ಎಂಬ ಸ್ಪಷ್ಟನೆಯನ್ನು ನೀಡಿತು. ಡಿಸೆಂಬರ್ ೧೯೨೮ರ ನಿರ್ಣಯದ ಪ್ರಕಾರ ಹಳ್ಳಿಗಳಲ್ಲಿ ತರಬೇತಿ ಹೊಂದಿದ ಸೂಲಗಿತ್ತಿಯರನ್ನು ನೇಮಿಸುವ ಕುರಿತು ಕ್ರಮ ತೆಗೆದುಕೊಳ್ಳಲಾಯಿತು. ಸ್ಥಳೀಯರಿಂದ ಟೀಕೆಗಳನ್ನು ಎದುರಿಸಬೇಕಾಗಿ ಬಂದರೂ ಸರಕಾರ ತನ್ನ ಚಿಂತನೆಗಳನ್ನು ಬದಲಾಯಿಸಲಿಲ್ಲ. ಇದರಿಂದ ಸುಶಿಕ್ಷಿತಳಾದ ಮಹಿಳೆ, ತನ್ನಂತೆಯೇ ಇರುವ ಸಾಮಾನ್ಯ ವರ್ಗದ ಮಹಿಳೆ ಹಾಗೂ ಮಕ್ಕಳ ಮತ್ತು ಸಮಾಜದ ಅಭ್ಯುದಯದ ಬಗ್ಗೆ ಕಾಳಜಿ ವಹಿಸಿದಳು ಎಂಬುವುದನ್ನು ಗಮನಿಸಬಹುದು.[೧೪೩]

೧೯೨೧ರ ಗವರ್ನಮೆಂಟ್ ಆರ್ಡರ್ ಸಂಖ್ಯೆ ೧೧೫೦ ಪಿ. ಹೆಚ್ ಪ್ರಕಾರ ದಾದಿಯರಿಗೆ ತರಬೇತಿ ನೀಡಲು ವಿಶಾಖ ಪಟ್ಟಣ, ಗುಂಟೂರು, ಕ್ಯಾಲಿಕಟ್, ಮಂಗಳೂರು, ತಂಜಾವೂರ್, ಸೇಲಂ ನಲ್ಲಿ ತರಬೇತಿ ಕೇಂದ್ರಗಳನ್ನು ತೆರೆಯಲಾಯಿತು.[೧೪೪] ಅಕ್ಟೋಬರ್ ೨೨, ಗವರ್ನಮೆಂಟ್ ಆರ್ಡರ್ ಸಂಖ್ಯೆ ೧೫೨೨

(ಪಿ.ಹೆಚ್) ೧೯೨೪ ಪ್ರಕಾರ ಅಡೂರು, ಕುಂಬ್ಳೆ, ಶಂಕರನಾರಾಯಣ ಮತ್ತು ಗಂಗೊಳ್ಳಿಗಳಲ್ಲಿ ದಾದಿಯರನ್ನು ನೇಮಿಸಲಾಯಿತು. ೧೯೨೮ರ ಗವರ್ನಮೆಂಟ್ ಆರ್ಡರ್ ಸಂಖ್ಯೆ ೨೬೫೬ರ ಪ್ರಕಾರ ಹೆರಿಗೆ ಹಾಗೂ ಶಿಶು ಕಲ್ಯಾಣ ಕೇಂದ್ರಗಳನ್ನು ತೆರೆಯಲು ಮತ್ತು ದಾದಿಯರಿಗೆ ತರಬೇತಿ ನೀಡುವ ಕುರಿತು ನಿರ್ಣಯ ಹೊರಡಿಸಲಾಗಿದ್ದು ೧೯೨೮ರ ವರದಿಯಲ್ಲಿ ತಕ್ಷಣ ಕ್ರಮ ತೆಗೆದುಕೊಳ್ಳಬೇಕು ಎಂಬುವುದು ದಾಖಲಾಗಿದೆ.

ಸಮಾಜದ ಕೆಳವರ್ಗದ ಸಮುದಾಯಕ್ಕೂ ವೈದ್ಯಕೀಯ ಸೇವೆಯ ಅವಕಾಶ ನೀಡಿರುವುದು ಆರೋಗ್ಯ ಇಲಾಖೆಯ ದಾಖಲೆಗಳಿಂದ ತಿಳಿದು ಬರುತ್ತದೆ. ಒಬ್ಬರು ಲೇಡಿ ವ್ಯಾಸಿನೆಟರ್‌ರನ್ನು ಹೆಚ್ಚುವರಿಯಾಗಿ ೧೯೩೫ರಲ್ಲಿ ನೇಮಿಸಲಾಯಿತು. ೧೯೩೫ರಲ್ಲಿ ಜಿಲ್ಲೆಯಲ್ಲಿ ಆರೋಗ್ಯ ಸೇವೆ ನೀಡುತ್ತಿದ್ದ ಆಸ್ಪತ್ರೆಗಳಲ್ಲಿ ಮುಖ್ಯವಾಗಿ ಸರಕಾರ ನಿರ್ವಹಿಸುತ್ತಿದ್ದ ಜಿಲ್ಲಾ ಪ್ರಧಾನ ಆಸ್ಪತ್ರೆ ಮತ್ತು ಮಹಿಳಾ ಮತ್ತು ಮಕ್ಕಳ ಆಸ್ಪತ್ರೆ (ಲೇಡಿಗೋಶಾನ್ ಆಸ್ಪತ್ರೆ), ಕುಷ್ಟರೋಗ ಆಶ್ರಯಧಾಮಗಳು, ಹೆರಿಗೆ ಆಸ್ಪತ್ರೆಗಳು ಮತ್ತು ಹದಿನಾಲ್ಕು ಖಾಸಗಿ ಚಿಕಿತ್ಸಾಲಯಗಳ ಜೊತೆಗೆ ಹನ್ನೆರಡು ಆಯುರ್ವೇದಿಕ್ ಚಿಕಿತ್ಸಾಲಯಗಳೂ ಇದ್ದವು. ಮೆಡಿಕಲ್ ಕೌನ್ಸಿಲ್‌ನಿಂದ ೧೯೩೫ರಲ್ಲಿ ಕುಷ್ಟರೋಗ ಆಶ್ರಯಧಾಮಕ್ಕೆ ರೂಪಾಯಿ ೩೦೦, ಈಶ್ವರಾನಂದ ಮಹಿಳಾ ಸೇವಾಶ್ರಮಕ್ಕೆ ರೂಪಾಯಿ ೩೦೦ ಮತ್ತು ಸೈಂಟ್ ವಿನ್ಸೆಂಟ್ ಡಿ ಪೌಲ್ ಸೊಸೈಟಿಗೆ ರೂಪಾಯಿ ೧೨೦ ದೇಣಿಗೆ ನೀಡಿದ ವರದಿ ಇದೆ. ಅದೇ ರೀತಿ ಜನನ ಪ್ರಮಾಣದಲ್ಲಿ ಶೇಕಡಾ ೩೭.೬ರಷ್ಟು ಏರಿಕೆಯಾಗಿದ್ದು, ಲೇಡಿಗೊಶಾನ್ ಆಸ್ಪತ್ರೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಇಬ್ಬರು ದಾದಿಯರು ೪೦೨ ಪ್ರಸವಗಳನ್ನು ಹಾಗೂ ಈಶ್ವರಾನಂದ ಮಹಿಳಾ ಸೇವಾಶ್ರಮದ ಒಬ್ಬರು ದಾದಿಯು ೬೮ ಪ್ರಸವ ಕಾರ್ಯಗಳನ್ನು ನಿರ್ವಹಿಸಿದ್ದು ಶಿಶು ಮರಣ ಪ್ರಮಾಣವೂ ಕಡಿಮೆಯಾಗಿರುವುದು ಶ್ಲಾಘನೀಯವಾಗಿದೆ.[೧೪೫] ಅಂತೆಯೇ ೧೯೩೫ರಲ್ಲಿ ಗ್ರಾಮೀಣ ಪ್ರದೇಶದಲ್ಲಿ ಪ್ರಸವಕಾರ್ಯ ನಿರ್ವಹಿಸಿರುವ ದಾದಿಯರ ಒಟ್ಟು ಸಂಖ್ಯೆ ೫೦ ಎಂಬುದು ದಾಖಲಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಹಿಳಾ ಆರೋಗ್ಯ ಸುಧಾರಣೆ ಮತ್ತು ಮಕ್ಕಳ ಸುರಕ್ಷತೆಗಾಗಿ ಸ್ಥಾಪಿಸಲ್ಪಟ್ಟ ಪ್ರಸವಶಾಸ್ತ್ರ ತರಬೇತಿ ಕೇಂದ್ರಗಳು ಜಿಲ್ಲೆಯ ಸಾಮಾನ್ಯ ವರ್ಗದ ಮಹಿಳೆಯರಿಗೆ ಸದವಕಾಶವನ್ನು ಒದಗಿಸಿತು. ದಾದಿಯರಿಗೆ ತರಬೇತಿ ಕೇಂದ್ರಗಳನ್ನು ಸ್ಥಾಪಿಸಿ ಆ ಮೂಲಕ ಮದ್ರಾಸ್ ಪ್ರೆಸಿಡೆನ್ಸಿಯ ಪ್ರಮುಖ ಸರಕಾರಿ ಆಸ್ಪತ್ರೆಗಳಿಗೆ ದಾದಿಯರನ್ನು ನೇಮಕ ಮಾಡಲು ಅನುಮೋದನೆ ನೀಡಲಾಯಿತು. ತರಬೇತಿ ಕೇಂದ್ರಗಳಾಗಿ ಸೂಚಿಸಲಾದ ಕೇಂದ್ರಗಳು ವಿಶಾಖಪಟ್ಟಣ, ಗುಂಟೂರು, ಕ್ಯಾಲಿಕಟ್, ಮಂಗಳೂರು, ತಂಜಾವೂರು ಮತ್ತು ಸೇಲಮ್.[೧೪೬] ೧೯೩೮ರ ವೇಳೆಗೆ ಜಿಲ್ಲೆಯಲ್ಲಿ ೧೦ ಆಸ್ಪತ್ರೆಗಳು ಮತ್ತು ಚಿಕಿತ್ಸಾಲಯಗಳಿದ್ದವು. ಅದರಲ್ಲಿ ಮಂಗಳೂರು ನಗರ ಪ್ರದೇಶದಲ್ಲಿ ೨, ಕುಂದಾಪುರದಲ್ಲಿ ೪ ತಾಲೂಕು ಕೇಂದ್ರ ಆಸ್ಪತ್ರೆಗಳು, (ಸ್ಥಾಪನೆ ೧೮೭೩), ಉಡುಪಿ (೧೮೭೨), ಪುತ್ತೂರು (೧೮೭೨) ಮತ್ತು ಕಾಸರಗೋಡು (೧೮೭೩). ಈ ಎಲ್ಲಾ ಆಸ್ಪತ್ರೆಗಳನ್ನು ಸರಕಾರವೇ ನಿರ್ವಹಿಸುತ್ತಿತ್ತು.[೧೪೭] ೧೯೪೦ರ ಜನವರಿ ೧೫ರಂದು ಶ್ರೀ. ಎ.ಬಿ.ಶೆಟ್ಟಿಯವರು ಬೈಂದೂರು ಹೆರಿಗೆ ಆಸ್ಪತ್ರೆಯ ಉದ್ಘಾಟನಾ ಸಮಾರಂಭ ಕಾರ್ಯಕ್ರಮದಲ್ಲಿ ನೀಡಿರುವ

ಭಾಷಣದಲ್ಲಿ 'ನಮ್ಮ ಪ್ರಾಂತ್ಯದ ಆಸ್ಪತ್ರೆಗಳಲ್ಲಿ ಮತ್ತು ಹೆರಿಗೆ ಚಿಕಿತ್ಸಾಲಯಗಳಲ್ಲಿ ೬೩೦ ಮಂದಿ ಸೂಲಗಿತ್ತಿಯರು, ಖಾಸಗಿಯಾಗಿ ಚಿಕಿತ್ಸೆ ನಡೆಸುವ ೨೪೧೧ ಮಂದಿ ರಿಜಿಸ್ಟರ್ ಆದ ಸೂಲಗಿತ್ತಿಯರೂ ಇದ್ದಾರೆ. ಯುರೋಪಿನ ದೇಶಗಳಲ್ಲಿ ೧೦೦ ಜನರಿಗೆ ಒಬ್ಬ ಸೂಲಗಿತ್ತಿಯರು ಇರುವುದು ಅಗತ್ಯವೆಂದು ಈಗ ಎಣಿಸಲಾಗುತ್ತಿದೆ. ನಮ್ಮ ಪ್ರಾಂತ್ಯದಲ್ಲಿ ಈಗ ೩೭೮೨ ಜನರಿಗೆ ಒಬ್ಬ ಸೂಲಗಿತ್ತಿಯಂತಿರುವುದರಿಂದ ಅವರ ಅವಶ್ಯಕತೆ ಸಾಕಷ್ಟಿದೆ. ಸೂಲಗಿತ್ತಿಯರಿಗೆ ಸರಿಯಾದ ಮಾಹಿತಿ ಇಲ್ಲದೆ ಇವರ ಅಜಾಗರುಕತೆಯಿಂದ ಅನೇಕ ಬಾರಿ ಪ್ರಸೂತ ಮರಣಗಳು ಸಂಭವಿಸುವುದು ಕಂಡುಬರುತ್ತದೆ. ಆದುದರಿಂದ ಸೂಲಗಿತ್ತಿಯರಿಗೆ ಈ ನಿಟ್ಟಿನಲ್ಲಿ ಶಿಕ್ಷಣದ ಅನಿವಾರ್ಯತೆ ಇದೆ' ಎಂದು ಅಭಿಪ್ರಾಯ ಪಟ್ಟರು.[೧೪೮] ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆರಂಭದಲ್ಲಿ ಪಾಶ್ಚಾತ್ಯ ಚಿಕಿತ್ಸಾ ಕ್ರಮಕ್ಕೆ ವಿರೋಧ ವ್ಯಕ್ತವಾದರೂ ನಿಧಾನವಾಗಿ ಹಂತ ಹಂತವಾಗಿ ಜನರು ಸ್ಪಂದಿಸತೊಡಗಿದ್ದು ವಿವಿಧ ದಾಖಲೆಗಳಿಂದ ತಿಳಿದು ಬರುತ್ತದೆ.

# ಸಂದರ್ಭ ಸೂಚಿ


೧. ಫಿಲಿಪ್ ಟಿ. ವಿ: ೧೯೮೭, ಕ್ರಿಸ್ತಿಯಾನಿಟಿ ಇನ್ ಇಂಡಿಯಾ ಡ್ಯೂರಿಂಗ್ ವೆಸ್ಟರ್ನ್ ಕೊಲೋನಿಯಲಿಸಂ, ಕಾನ್ ಫ್ಲಿಕ್ಟ್, ರಿಕನ್ಸಿಲಿಯೇಶನ್ ಆರ್ ಅಡ್ಜಸ್ಟ್ ಮೆಂಟ್, ಐ.ಸಿ. ಹೆಚ್.ಆರ್, ಪುಟ ೧೫.

೨. ಎಸ್.ಡಿ.ಎಲ್. ಅಳಗೋಡಿ: ೨೦೦೧, ಭಾರತದಲ್ಲಿ ಕ್ರೈಸ್ತ ಧರ್ಮದ ಇತಿಹಾಸ, ಕನ್ನಡ ದೈವ ಜ್ಞಾನ ಸಾಹಿತ್ಯ ಸಮಿತಿ, ಮಂಗಳೂರು, ಪುಟಗಳು ೬-೧೧.

೩. ಜೆ. ಎನ್ ಥಾಮ್ಸನ್: ೧೯೦೫, ಸ್ಯಾಮ್ಯುವೆಲ್ ಹಬಿಕ್ ಆಫ್ ಇಂಡಿಯಾ, ಮಾಸ್ಟರ್ ಫಿಶರ್ ಆಫ್ ಮೆನ್, ಕಟಕ್, ಪುಟ ೨೨.

೪. ವಿಜಯ ಕುಮಾರ್: ೨೦೦೪, ಕರ್ನಾಟಕದಲ್ಲಿ ಪ್ರೊತೆಸ್ತಾಂತ ಮಿಷನರಿಗಳ ಚರಿತ್ರ, ಕನ್ನಡ ದೈವಜ್ಞ ಸಾಹಿತ್ಯ ಸಮಿತಿ, ಮಂಗಳೂರು, ಪುಟ ೧೧೩.

೫. ಕ್ರೈಸ್ತ ಹಿತವಾದಿ, ಸಂಪುಟ ೧ (ಜೂನ್ ೧೯೨೪), ಸಿ.ಎಸ್.ಐ ಸುಶಾಂತಿ ಚರ್ಚ್ ಮರ್ಕೆರ ಹಿಲ್, ಮಂಗಳೂರು ಸಿವರ್ ಜುಬಿಲಿ ಸ್ಮರಣಿಕೆ, ಮಂಗಳೂರು, ೧೯೮೨, ಪುಟ ೨.

೬. ಸಲ್ದಾನ. ಎ. ಜೆರೋಮ್: ಕನ್ನಡ ಜಿಲ್ಲೆಯಲ್ಲಿ ಕೊಂಕಣಿ ಕ್ರೈಸ್ತರು, ಪಂಚಕಜ್ಜಾಯ, ೧೩ನೇ ಕರ್ನಾಟಕ ಸಾಹಿತ್ಯ ಸಮ್ಮೇಳನ, ಕೆನರೀಸ್ ಮಿಷನ್ ಪ್ರೆಸ್ ಎಂಡ್ ಬುಕ್ ಡಿಪೋ, ೧೯೨೭, ಪುಟ ೨೨.

೭. ಗಣಪತಿರಾವ್ ಐಗಳ್: ೨೦೦೪, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಪುಟಗಳು ೧೩೮-೧೪೪.

೮. ಮಾರ್ಕ್ ವಿಲ್ಕ್: ೧೮೧೭, ಸಂಪುಟ ೩, ಹಿಸ್ಟೋರಿಕಲ್ ಸ್ಕೆಚಸ್ ಆಫ್ ದ ಸೌತ್ ಇಂಡಿಯಾ, ಲಂಡನ್, ಪುಟಗಳು ೪೪೯, ೪೫೦.

೯. ಜೆ. ಸ್ಟರಕ್: ೧೮೯೪, ಮದ್ರಾಸ್ ಡಿಸ್ಟ್ರಿಕ್ಟ್ ಮ್ಯಾನ್ಯುವೆಲ್ಸ್ ಸೌತ್ ಕೆನರಾ (ಸಂಪುಟ ೧), ಮದ್ರಾಸ್, ಪುಟ ೭೮.

೧೦. ಎಂ.ಜಾರ್ಜ್ ಮೊರಾಯೆಸ್: ೧೯೨೭, ಮ್ಯಾಂಗಲೂರ್: ಎ ಹಿಸ್ಟೋರಿಕಲ್ ಸ್ಕೆಚ್, ಮ್ಯಾಂಗಲೂರ್, ಪುಟ ೫೭.

೧೧. ಎಸ್.ಡಿ.ಎಲ್ ಅಳಗೋಡಿ: ಪೂರ್ವೋಕ್ತ, ಪುಟಗಳು ೧೮-೨೦.

೧೨. ಫರ್ತ್ ಸಿ. ಬಿ: ೧೯೬೧, ಇಂಟ್ರೊಡಕ್ಷನ್ ಟು ಇಂಡಿಯನ್ ಚರ್ಚ್ ಹಿಸ್ಟರಿ, ಮೈಸೂರು, ಪುಟ ೧೫೪.

೧೩. ಎ. ಶೋಸರ್: ೧೯೯೧, ಎ ಶೋರ್ಟ್ ಸರ್ವೇ ಆಫ್ ದಿ ಇವಾಂಜಲಿಕಲ್ ಮಿಷನರಿ ಸೊಸೈಟಿ ಆಫ್ ಬಾಸೆಲ್, ಪುಟ ೧೫೩.

೧೪. ಪಿ.ಎಲ್ ರಾವತ್: ೧೯೭೦, ಹಿಸ್ಟರಿ ಆಫ್ ಇಂಡಿಯನ್ ಎಡುಕೇಶನ್, ರಾಂಪ್ರಸಾದ್ ಆಂಡ್ ಸನ್ಸ್, ಆಗ್ರ, ಪುಟಗಳು ೧೧೭-೧೧.

೧೫. ೪೯ನೇ ಬಾಸೆಲ್ ಮಿಷನ್ ವರದಿ, ೧೮೮೯, ಬಾಸೆಲ್ ಇವಾಂಜೆಲಿಕಲ್ ಮಿಷನ್ ಇನ್ ಸೌತ್ ವೆಸ್ಟರ್ನ್ ಇಂಡಿಯ, ಬಾಸೆಲ್ ಮಿಷನ್ ಪ್ರೆಸ್, ೧೮೮೯. **(ಇನ್ನು ಮುಂದೆ ಬಿ.ಎಂ.ಆರ್)**

೧೬. ದಿ ವಿಮೆನ್ ಆಫ್ ಇಂಡಿಯಾ ಆಂಡ್ ವಾಟ್ ಕ್ಯಾನ್ ಬಿ ಡನ್ ಫಾರ್ ದೆಮ್, ದಿ ಕ್ರಿಸ್ಟಿಯನ್ ವೆರ್ನಾಕ್ಯುಲರ್ ಎಡುಕೇಶನ್ ಸೊಸೈಟಿ, ಎಸ್.ಪಿ.ಸಿ.ಕೆ. ಪ್ರೆಸ್, ವೆಪರಿ, ಮದ್ರಾಸ್, ೧೮೮೮, ಪುಟಗಳು ೪೬ -೫೧.

೧೭. ಬಿಪನ್ ಚಂದ್ರ (ಮೂಲ), ರಾವ್ ಗೋಪಾಲ್ ಎಚ್,ಎಸ್ (ಅನು): ೨೦೧೨, ಆಧುನಿಕ ಭಾರತದ ಇತಿಹಾಸ, ನವಕರ್ನಾಟಕ ಪ್ರಕಾಶನ, ಪುಟ ೧೨೪.

೧೮. ಪಿ.ಎಲ್ ರಾವತ್: ಪೂರ್ವೋಕ್ತ, ಪುಟಗಳು ೧೧೭-೧೧೮.

೧೯. ಬಿಪನ್ ಚಂದ್ರ (ಮೂಲ), ರಾವ್ ಗೋಪಾಲ್ ಎಚ್,ಎಸ್ (ಅನು): ಪೂರ್ವೋಕ್ತ, ಪುಟಗಳು ೧೩೮-೧೪೧.

೨೦. ಕಮಲಾದೇವಿ ಚಟ್ಟೋಪಾಧ್ಯಾಯ: ೧೯೮೩, ಇಂಡಿಯನ್ ವಿಮೆನ್ಸ್ ಬ್ಯಾಟಲ್ ಫೋರ್ ಫ್ರೀಡಂ, ಅಭಿನವ್ ಪಬ್ಲಿಕೇಶನ್ಸ್, ಡೆಲ್ಲಿ, ಪುಟ ೩೧.

೨೧. ಪಿ.ಎಲ್ ರಾವತ್: ಪೂರ್ವೋಕ್ತ, ಪುಟ ೧೩೩.

೨೨. ಹಾಲಿಡೇ ಎಫ್.ಜೆ: ೧೮೫೦, ಸೆಕ್ರೆಟರಿ ಟು ದಿ ಗವರ್ನಮೆಂಟ್ ಆಫ್ ಇಂಡಿಯಾ, ಸಿಲೆಕ್ಷನ್ಸ್ ಫ್ರಾಂ ಎಡುಕೇಶನಲ್ ರೆಕೋರ್ಡ್ಸ್, ಕಲ್ಕತ್ತಾ, ಪುಟಗಳು ೫೨-೬೦.

೨೩. ಪಿ.ಎಲ್ ರಾವತ್: ಪೂರ್ವೋಕ್ತ, ಪುಟ ೧೭೭.

೨೪. ಸ್ಯಾಮುಯೆಲ್ ಮಿಲ್ಲೆ: ೧೮೮೪, ಕೆನರಾ ಪಾಸ್ಟ್ ಆಂಡ್ ಪ್ರೆಸೆಂಟ್, ಬಾಸೆಲ್ ಮಿಷನ್ ಬುಕ್ ಆಂಡ್ ಟ್ರಾಕ್ಟ್ ಡೆಪೋಸಿಟರಿ, ಪುಟಗಳು ೧೮-೧೯.

೨೫. ಜನಗಣತಿ ವರದಿ, ೧೮೭೧, ಪುಟ ೧೯೩.

೨೬. ಕುಂಕುಂ ಸಂಗಾರಿ ಮತ್ತು ಸುದೇಶ್ ವೈದ್ (ಸಂ): ೧೯೮೯, ರಿಕಾಸ್ಟಿಂಗ್ ವಿಮೆನ್: ಎಸ್ಸೇಸ್ ಇನ್ ಕೊಲೋನಿಯಲ್ ಹಿಸ್ಟರಿ, ಸುಮಂತಾ ಬ್ಯಾನರ್ಜಿಯವರ ಲೇಖನ – 'ಮಾರ್ಜಿನಲೈಸೇಷನ್ ಆಫ್ ವಿಮೆನ್ಸ್ ಪಾಪ್ಯುಲರ್ ಕಲ್ಚರ್ ಇನ್ ನೈನ್ಟೀಂತ್ ಸೆಂಚುರಿ ಬೆಂಗಾಲ್', ಕಾಲಿ ಫಾರ್ ವಿಮೆನ್, ಪುಟಗಳು ೧೩೦-೧೩.

೨೭. ಎಫ್.ಜೆ ಹಾಲಿಡೇ: ಪೂರ್ವೋಕ್ತ, ಪುಟ ೪೯.

೨೮. ರಾವತ್ ಪಿ.ಎಲ್: ಪೂರ್ವೋಕ್ತ, ಪುಟ ೧೪೩.

೨೯. ವಿಜಯಕುಮಾರ್: ಪೂರ್ವೋಕ್ತ, ಪುಟಗಳು ೨೧೪-೨೧೫.

೩೦. ೫೫ನೇ ವರದಿ, ಬಿ. ಎಂ.ಆರ್, ೧೮೯೫, ಪುಟಗಳು ೮೮-೮೯.

೩೧. ೩೫ನೇ ವರದಿ, ಬಿ. ಎಂ.ಆರ್, ೧೮೭೫, ಪುಟ ೩೩.

೩೨. ೫೬ನೇ ವರದಿ, ಬಿ.ಎಂ.ಆರ್, ೧೮೯೬, ಪುಟ ೩೪.

೩೩. ೬೨ನೇ ವರದಿ, ಬಿ. ಎಂ.ಆರ್, ೧೯೦೨, ಪುಟ ೩೧.

೩೪. ೩೩ನೇ ವರದಿ, ಬಿ. ಎಂ.ಆರ್, ೧೮೭೩, ಪುಟ ೩೦.

೩೫. ೧೮ನೇ ವರದಿ, ಬಿ. ಎಂ.ಆರ್, ೧೮೫೮, ಪುಟ ೧೭.

೩೬. ೪೦ನೇ ವರದಿ, ಬಿ. ಎಂ.ಆರ್, ೧೮೮೦, ಪುಟ ೩೫.

೩೭. ೨೯ನೇ ವರದಿ, ಬಿ. ಎಂ.ಆರ್, ೧೮೬೯, ಪುಟ ೨೦.

೩೮. ಜನಗಣತಿ ವರದಿ, ೧೮೭೧, ಪುಟಗಳು ೧೯೫- ೧೯೬.

೩೯. ದಿ ಎಡ್ವಾಂಟೇಜಸ್ ಆಫ್ ಫಿಮೇಲ್ ಎಡುಕೇಶನ್, ದಿ ಕ್ರಿಸ್ಟಿಯನ್ ಲಿಟರೇಚರ್ ಸೊಸೈಟಿ ಫಾರ್ ಇಂಡಿಯ, ಎಂ.ಇ. ಪಬ್ಲಿಶಿಂಗ್ ಹೌಸ್, ೧೮೯೨, ಪುಟಗಳು ೧-೨.

೪೦. ೪೧ನೇ ವರದಿ, ಬಿ. ಎಂ.ಆರ್, ೧೮೮೧, ಪುಟಗಳು ೧೬-೧೭.

೪೧. ೬೬ನೇ ವರದಿ, ಬಿ. ಎಂ.ಆರ್, ೧೯೦೬.

೪೨. ೪೫ನೇ ವರದಿ, ಬಿ. ಎಂ.ಆರ್, ೧೮೮೫, ಪುಟ ೧೨.

೪೩. ೪೬ ವರದಿ, ಬಿ. ಎಂ.ಆರ್, ೧೮೮೬, ಪುಟ ೨೫.

೪೪. ೪೪ನೇ ವರದಿ, ಬಿ. ಎಂ.ಆರ್, ೧೮೮೪, ಪುಟ ೨೯.

೪೫. ೫೫ ನೇ ವರದಿ, ಬಿ. ಎಂ.ಆರ್, ೧೮೯೫, ಪುಟ ೮೧.

೪೬. ೩೩ನೇ ವರದಿ, ಬಿ. ಎಂ.ಆರ್, ೧೮೭೩, ಪುಟಗಳು ೭೦- ೭೧.

೪೭. ೭೩ನೇ ವರದಿ, ಬಿ. ಎಂ.ಆರ್, ೧೯೧೩, ಪುಟ ೬೧.

೪೮. ೪೨ನೇ ವರದಿ, ಬಿ.ಎಂ.ಆರ್, ೧೮೮೨, ಪುಟ ೭೧.

೪೯. ೧೭ನೇ ವರದಿ, ಬಿ. ಎಂ.ಆರ್, ೧೮೫೭, ಪುಟಗಳು ೬೮-೭೦.

೫೦. ೭೪ನೇ ವರದಿ, ಬಿ. ಎಂ.ಆರ್, ೧೯೧೩, ಪುಟ ೭೪.

೫೧. ಐ.ಎ. ಸೋನ್ಸ್ (ಸಂ): ೧೯೬೨, ಶಾಂತಿ ಚರ್ಚ್ ಬಲ್ಮಠ, ಮಂಗಳೂರು ಶತಮಾನೋತ್ಸವದ ಸ್ಮರಣಿಕೆ ಮಂಗಳೂರು, ಪುಟ ೬೧.

೫೨. ೫೫ನೇ ವರದಿ, ಬಿ. ಎಂ.ಆರ್, ೧೮೯೫, ಪುಟ ೬೨.

೫೩. ೪೫ನೇ ವರದಿ, ಬಿ. ಎಂ.ಆರ್, ೧೮೮೫, ಪುಟ ೩೪.

೫೪. ಸಿಲೆಕ್ಷನ್ಸ್ ಫ್ರಾಂ ಎಡುಕೇಶನಲ್ ರೆಕೋರ್ಡ್ಸ್, ಪಾರ್ಟ್ ೨, ೧೮೪೦-೧೮೫೪, ಜೆ.ಎ.ರಿಚೀ, ಸಿ.ಐ.ಇ, ಕಲ್ಕತ್ತಾ, ಸೂಪರಿಟೆಂಡೆಂಟ್ ಗವರ್ನಮೆಂಟ್ ಪ್ರಿಂಟಿಂಗ್, ಇಂಡಿಯಾ, ೧೯೨೨. ಪುಟ ೩೩೯.

೫೫. ೨ನೇ ವರದಿ, ಬಿ. ಎಂ.ಆರ್, ೧೮೪೨, ಪುಟ ೧೭.

೫೬. ಬಿ. ಸುರೇಂದ್ರ ರಾವ್: ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ೨೦೧೦, ಪುಟ ೨೨೨.

೫೭. ಒಂದು ಹಿಂದು ಹುಡುಗಿಯ ಕಥೆ: ೧೯೨೫, ಕೆನರೀಸ್ ಮಿಷನ್ ಪ್ರೆಸ್ ಆಂಡ್ ಬುಕ್ ಡಿಪೋ, ಮಂಗಳೂರು, ಪುಟ ೮.

೫೮. ೩೩ನೇ ವರದಿ, ಬಿ.ಎಂ.ಆರ್, ೧೮೭೩, ಪುಟಗಳು ೩೩-೩೪.

೫೯. ೩೫ನೇ ವರದಿ, ಬಿ.ಎಂ.ಆರ್, ೧೮೭೫, ಪುಟ ೧೧.

೬೦. ೩೭ನೇ ವರದಿ, ಬಿ.ಎಂ.ಆರ್, ೧೮೭೭, ಪುಟಗಳು ೨೬-೨೭.

೬೧. ೩೩ನೇ ವರದಿ, ಬಿ.ಎಂ.ಆರ್, ೧೮೭೩, ಪುಟಗಳು ೬೫-೬೬.

೬೨. ೨ನೇ ವರದಿ, ಬಿ.ಎಂ.ಆರ್, ೧೮೪೨, ಪುಟ ೧೭.

೬೩. ಗೌರಿ ವಿಶ್ವನಾಥನ್: ೧೯೯೮, ಅವ್ಟ್ ಸೈಡ್ ದಿ ಫೋಲ್ಡ್ ಕನ್ವರ್ಶನ್ ಮೋಡರ್ನಿಟಿ ಆಂಡ್ ಬಿಲೀಫ್, ಪ್ರಿನ್ಸ್ ಟನ್ ಯುನಿವರ್ಸಿಟಿ ಪ್ರೆಸ್, ನ್ಯೂ ಜೆರ್ಸಿ.

೬೪. ೧೪ನೇ ವರದಿ, ೧೮೫೪, ಪುಟ ೭.

೬೫. ಅದೇ, ಪುಟ ೨೧.

೬೬. ೫೫ನೇ ವರದಿ, ಬಿ.ಎಂ.ಆರ್, ೧೮೯೫, ಪುಟಗಳು ೬೪-೬೬.

೬೭. ೧೯ನೇ ವರದಿ, ಬಿ.ಎಂ.ಆರ್, ೧೮೫೯, ಪುಟ ೪೨.

೬೮. ಬಿ. ಸುರೇಂದ್ರ ರಾವ್: ಪೂರ್ವೋಕ್ತ, ಪುಟ ೨೨೨.

೬೯. ಜನಗಣತಿ ವರದಿ, ಮದ್ರಾಸ್ ಪ್ರೆಸಿಡೆನ್ಸಿ, ೧೮೭೧, ಪುಟ ೧೯೨.

೭೦. ವಿಜಯ ಕುಮಾರ್: ಪೂರ್ವೋಕ್ತ, ಪುಟಗಳು ೧೧೭-೧೨೦.

೭೧. ಜನಗಣತಿಯ ವರದಿ, ಮದ್ರಾಸ್ ಪ್ರೆಸಿಡೆನ್ಸಿ, ೧೮೭೧, ಪುಟ ೧೯೪.

೭೨. ಹೆರಾಲ್ಡ್ ಎ. ಸ್ಟುವರ್ಟ್: ೧೮೯೫, ಸೌತ್ ಕೆನರಾ ಮದ್ರಾಸ್ ಡಿಸ್ಟ್ರಿಕ್ಟ್ ಮ್ಯಾನ್ಯುವಲ್ಸ್(ಸಂಪುಟ) II, ೧೮೯೫, ಪುಟಗಳು ೧೧೦-೧೧೪.

೭೩. ರಿಪೋರ್ಟ್ ಆನ್ ದಿ ಆಡ್ಮಿನಿಸ್ಟ್ರೇಶನ್ ಆಫ್ ದಿ ಮದ್ರಾಸ್ ಪ್ರೆಸಿಡೆನ್ಸಿ, ೧೮೭೯-೮೦, ಮದ್ರಾಸ್, ೧೮೮೦, ಪುಟ ೨೯೧.

೭೪. ಹೆರಾಲ್ಡ್ ಎ. ಸ್ಟುವರ್ಟ್: ಪೂರ್ವೋಕ್ತ, ಪುಟ ೧೧೬.

೭೫. ಇಂಡಿಯನ್ ಎಡುಕೇಶನ್ ಪಾಲಿಸಿ ೧೯೧೩, ಸೂಪರಿನ್ಟೆಂಡೆಂಟ್ ಗವರ್ನಮೆಂಟ್ ಪ್ರಿಂಟಿಂಗ್ ಇಂಡಿಯಾ, ೧೯೧೪, ಪುಟಗಳು ೧೫-೧೬.

೭೬. ಪಿ.ಎಲ್ ರಾವತ್: ಪೂರ್ವೋಕ್ತ, ಪುಟ ೧೭೭.

೭೭. ಸೌತ್ ಕೆನರಾ ಗಜೆಟ್, ಸುಪರಿನ್ ಟೆಂಡೆಂಟ್, ಗವರ್ನಮೆಂಟ್ ಪ್ರೆಸ್, ಮದ್ರಾಸ್, ೧೯೦೧, ಪುಟ ೫೯.

೭೮. ಸೆನ್ಸಸ್ ಆಫ್ ಇಂಡಿಯಾ ೧೯೨೧, ಮದ್ರಾಸ್ ವಾಲ್ಯೂಮ್ XIII ಪಾರ್ಟ್ I ಸುಪರಿನ್ಟೆಂಡೆಂಟ್, ದಿ ಗವರ್ನಮೆಂಟ್ ಪ್ರೆಸ್ ಕಲ್ಕತ್ತಾ, ೧೯೨೨.

೭೯. ರಾವತ್ ಪಿ.ಎಲ್: ಪೂರ್ವೋಕ್ತ, ಪುಟ ೨೩೭.

೮೦. ಅದೇ, ಪುಟ ೨೪೯.

೮೧. ಹೆಲ್ಸ್. ಆರ್ ಲಿಟಲ್: ಪ್ರೋಗ್ರೆಸ್ ಆಫ್ ಎಡುಕೇಶನ್ ಇನ್ ಇಂಡಿಯಾ ೧೯೨೨-೨೭, ನೈನ್ತ್ ಕ್ವಿನ್ನಿನಿಯಲ್ ರಿವ್ಯೂ, ಸಂಪುಟ ೧, ಗವರ್ನಮೆಂಟ್ ಆಫ್ ಇಂಡಿಯ ಸೆಂಟ್ರಲ್ ಪಬ್ಲಿಕೇಶನ್, ಪುಟಗಳು ೧೫೬-೧೫೭.

೮೨. ರಾವತ್ ಪಿ.ಎಲ್: ಪೂರ್ವೋಕ್ತ, ಪುಟ ೨೩೩.

೮೩. ದಿ ಆಡ್ವಾನ್ಟೇಜಸ್ ಆಫ್ ಫಿಮೇಲ್ ಎಡುಕೇಶನ್, ದಿ ಕ್ರಿಸ್ಟಿಯನ್ ಲಿಟರೇಚರ್ ಸೊಐಟಿ ಫಾರ್ ಇಂಡಿಯ, ಎಂ.ಇ. ಪಬ್ಲಿಶಿಂಗ್ ಹೌಸ್, ವೆಪರಿ, ೧೮೯೨, ಪುಟಗಳು ೧-೨.

೮೪. ಲಿಟಲ್ ಹೆಲ್ಸ್. ಆರ್: ಪೂರ್ವೋಕ್ತ, ಪುಟ ೧೫೮.

೮೫. ಅದೇ, ಪುಟಗಳು ೭೦-೭೧.

೮೬. ಸೌತ್ ಕೆನರಾ ಗಜೆಟ್, ಪಬ್ಲಿಶ್ಡ್ ಬೈ ಆಥೋರಿಟಿ, ಮದ್ರಾಸ್, ೧೯೩೪, ಪುಟಗಳು ೧೭-೨೦.

೮೭. ಸೌತ್ ಕೆನರಾ ಗಜೆಟ್, ೧೯೩೫, ಪಬ್ಲಿಶ್ಡ್ ಬೈ ಆಥೋರಿಟಿ, ಮದ್ರಾಸ್, ಪುಟಗಳು ೪-೬

೮೮. ರಿಪೋರ್ಟ್ ಆನ್ ದ ಮದ್ರಾಸ್ ಪ್ರೆಸಿಡೆನ್ಸಿ ಫಾರ್ ದ ಇಯರ್ ೧೯೩೩, ಮದ್ರಾಸ್, ಪುಟ ೧೬೯.

೮೯. ಆಡ್ಮಿನಿಸ್ಟ್ರೇಷನ್ ರಿಪೋರ್ಟ್ ಸೌತ್ ಕೆನರಾ ಡಿಸ್ಟ್ರಿಕ್ಟ್ ೧೯೩೯-೪೦, ಪುಟ ೨೧.

೯೦. ಸೌತ್ ಕೆನರಾ ಜಿಲ್ಲಾ ಗಜೆಟ್: ಪಬ್ಲಿಶ್ಡ್ ಬೈ ಆಥೋರಿಟಿ, ಜುಲೈ ೨೦, ೧೯೩೫.

೯೧. ಲೋಕಲ್ ಫಂಡ್ ಶೀಟ್, ಪ್ರೊಸೀಡಿಂಗ್ಸ್ ಆಫ್ ದಿ ಅರ್ಜೆಂಟ್ ಮೀಟಿಂಗ್ ಆಫ್ ದಿ ಮೆಂಬರ್ಸ್ ಆಫ್ ದಿ ಡಿಸ್ಟ್ರಿಕ್ಟ್ ಬೋರ್ಡ್, ಸೌತ್ ಕೆನರಾ, ದಿನಾಂಕ ೮-೭-೧೯೩೯, ಪುಟ ೧.

೯೨. ಬಿ. ಸುರೇಂದ್ರ ರಾವ್ : ಪೂರ್ವೋಕ್ತ, ಪುಟ ೨೧೨.

೯೩. ಪಿ.ಎಲ್ ರಾವತ್: ಹಿಸ್ಟರಿ ಆಫ್ ಇಂಡಿಯನ್ ಎಡುಕೇಶನ್, ೧೯೫೬, ರಾಮ್ ಪ್ರಸಾದ್ ಆಂಡ್ ಸನ್ಸ್, ಆಗ್ರ, ಪುಟಗಳು ೧೨೫-೧೨೬.

೯೪. ಮ್ಯಾಂಗಲೋರ್ ಮ್ಯಾಗಜೀನ್, ಸಂಪುಟ ೨, ನಂ:೨, ೧೯೦೧, ಪುಟ ೯೯, ೧೦೦.

೯೫. ಬಿ.ಎ ವಿವೇಕ್ ರೈ. (ಸಂ): ಮಂಗಳೂರು ದರ್ಶನ, ಸಂಪುಟ ೨, ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ಪುಟಗಳು ೫೩೫-೫೩೬.

೯೬. ಕ್ರಾಂತಿ ಫರಾಯಿಸ್: ಪೂರ್ವೋಕ್ತ, ಪುಟ ೧೦೩-೧೧೦.

೯೭. ಬಿ.ಎ ವಿವೇಕ್ ರೈ. (ಸಂ): ಪೂರ್ವೋಕ್ತ ಪುಟ ೫೩೯.

೯೮. ಭಗಿನಿ ಸಿಲ್ವೆಟ್ ಎ.ಸಿ, ನಿವೃತ್ತ ಪ್ರಾಧ್ಯಾಪಕರು, ಸಂತ ಆಗ್ನೇಸ್ ಕಾಲೇಜು, ಮಂಗಳೂರು, ಸಂದರ್ಶನದ ದಿನಾಂಕ : ಡಿಸೆಂಬರ್ ೧೪, ೨೦೧೬.

೯೯. ಬಿ.ಎ ವಿವೇಕ್ ರೈ (ಸಂ): ಪೂರ್ವೋಕ್ತ, ಪುಟಗಳು ೬೦೪, ೬೦೫, ೬೦೬.

೧೦೦. ದಿ ವಿಮೆನ್ ಆಫ್ ಇಂಡಿಯಾ ವಾಟ್ ಕ್ಯಾನ್ ಬಿ ಡನ್ ಫಾರ್ ದೆಮ್, ದಿ ಕ್ರಿಸ್ಟಿಯನ್ ವೆರ್ನಾಕ್ಯುಲರ್ ಎಡುಕೇಶನ್ ಸೊಸೈಟಿ, ವೆಪರಿ, ೧೮೮೮, ಮದ್ರಾಸ್, ಪುಟಗಳು ೨೪ -೨೫.

೧೦೧. ಡೈರೆಕ್ಟರಿ ಡಯಾಸಿಸ್ ಆಫ್ ಮ್ಯಾಂಗಲೋರ್, ಮಂಗಳೂರು, ೨೦೧೧, ಪುಟ ೨೧೨.

೧೦೨. ಗವರ್ನಮೆಂಟ್ ಕಾಲೇಜು ಶತಮಾನೋತ್ಸವ ಸ್ಮರಣಿಕೆ, ೧೯೭೦.

೧೦೩. ಬಿ.ಎ ವಿವೇಕ್ ರೈ (ಸಂ): ಮಂಗಳೂರು ದರ್ಶನ, ಸಂಪುಟ ೨, ಪೂರ್ವೋಕ್ತ, ಪುಟಗಳು ೪೪೦,೪೫೭.

೧೦೪. ಕೆನರಾ ಶಾಲೆಯ ಸ್ಮರಣ ಸಂಚಿಕೆ, ೧೯೯೧.

೧೦೫. ೬ಂನೇ ವಾರ್ಷಿಕ ಸಂಚಿಕೆ ೧೮೭೦-೧೯೩೦, ಗಣಪತಿ ಪ್ರೌಢ ಶಾಲೆ, ಮಂಗಳೂರು.

೧೦೬. ಸ್ವದೇಶಾಭಿಮಾನಿ, ಮೇ ೧೫, ೧೯೨೫.

೧೦೭. ಸ್ವದೇಶಾಭಿಮಾನಿ, ಜೂನ್ ೧, ೧೯೩೨.

೧೦೮. ಸ್ವದೇಶಾಭಿಮಾನಿ, ಎಪ್ರಿಲ್ ೧, ೧೯೩೩.

೧೦೯. ಸ್ವದೇಶಾಭಿಮಾನಿ, ಆಗಸ್ಟ್ ೨೨, ೧೯೪೧.

೧೧೦. ಬಿ. ಸುರೇಂದ್ರ ರಾವ್: ಪೂರ್ವೋಕ್ತ, ಪುಟ ೨೧೬.

೧೧೧. ಸ್ವದೇಶಾಭಿಮಾನಿ, ಆಗಸ್ಟ್ ೧, ೧೯೩೨.

೧೧೨. ಸ್ವದೇಶಾಭಿಮಾನಿ, ಅಕ್ಟೋಬರ್ ೩೧, ೧೯೪೧.

೧೧೩. ಸ್ವದೇಶಾಭಿಮಾನಿ, ಜೂನ್ ೧೮, ೧೯೪೩.

೧೧೪. ಸ್ವದೇಶಾಭಿಮಾನಿ, ಎಪ್ರಿಲ್ ೨೩, ೧೯೪೩.

೧೧೫. ಗಣಪತಿ ಹೈಸ್ಕೂಲ್ ಸ್ಮರಣ ಸಂಚಿಕೆ, ೧೯೩೦.

೧೧೬. ಡೇವಿಡ್ ಅರ್ನೋಲ್ಡ್: ೨೦೦೧, ದಿ ನ್ಯೂ ಕೇಂಬ್ರಿಡ್ಜ್ ಹಿಸ್ಟರಿ ಆಫ್ ಇಂಡಿಯಾ: ಸೈನ್ಸ್, ಟೆಕ್ನೋಲಜಿ ಆಂಡ್ ಮೆಡಿಸಿನ್ ಇನ್ ಕೊಲೋನಿಯಲ್ ಇಂಡಿಯಾ, ಕೇಂಬ್ರಿಡ್ಜ್ ಪುಟಗಳು ೮೭-೮೮.

೧೧೭. ಹೆರಾಲ್ಡ್ ಎ ಸ್ಟುವರ್ಟ್: ಪೂರ್ವೋಕ್ತ, ಪುಟ ೭೯.

೧೧೮. ಮೋಹನ್ ಕೃಷ್ಣ ರೈ. ಕೆ: ಅರ್ಬನೈಸೇಶನ್ ಆಫ್ ಮ್ಯಾಂಗಲೋರ್: ಎ ಕೊಲೋನಿಯಲ್ ಎಕ್ಸ್ ಪೀರಿಯನ್ಸ್, ೧೭೯೯-೧೯೪೭, ಅಪ್ರಕಟಿತ ಪ್ರಂಬಂಧ, (ಮಂಗಳೂರು ವಿಶ್ವವಿದ್ಯಾನಿಲಯ, ೨೦೦೩) ಇತಿಹಾಸ ವಿಭಾಗ, ಪುಟ ೮೦.

೧೧೯. ಹೆರಾಲ್ಡ್ ಎ ಸ್ಟುವರ್ಟ್: ಪೂರ್ವೋಕ್ತ, ಪುಟಗಳು ೮೩-೮೮, ೯೭.

೧೨೦. ಅನ್ಯುವಲ್ ಮೆಡಿಕಲ್ ರಿಪೋರ್ಟ್ ಆನ್ ಸಿವಿಲ್ ಹೋಸ್ಪಿಟಲ್ಸ್ ಆಂಡ್ ಡಿಸ್ಪೆನ್ಸರೀಸ್ ೧೮೫೩- ೫೪ ಕೆನರಾ ಡಿಸ್ಟ್ರಿಕ್ಟ್, ಮದ್ರಾಸ್ ಪ್ರೆಸಿಡೆನ್ಸಿ, ಪುಟ ೫.

೧೨೧. ಸೌತ್ ಕೆನರಾ ಗಜೆಟ್, ಸಪ್ಲಿಮೆಂಟ್, ಡಿಸೆಂಬರ್ ೧೨, ೧೮೭೪, ಪುಟ ೧೮೧.

೧೨೨. ಮುನ್ಸಿಪಲ್ ಮತ್ತು ಸ್ಥಳೀಯ ಔಷಧಾಲಯಗಳಿಗೆ ಅನ್ವಯಿಸಿದ ಕಾಯ್ದೆ, ಸೌತ್ ಕೆನರಾ ಗಜೆಟ್, ಮಂಗಳೂರು, ೧೮೭೪, ಪುಟ ೬೫೭.

೧೨೩. ಆಡ್ಮಿನಿಸ್ಟ್ರೇಷನ್ ರಿಪೋರ್ಟ್ ಆಫ್ ದಿ ಕುಂದಾಪುರ ತಾಲೂಕು ಬೋರ್ಡ್, ೧೮೯೧-೯೨, ಸೌತ್ ಕೆನರಾ ಗಜೆಟ್, ಜುಲೈ- ಅಕ್ಟೋಬರ್ ೧೮೯೨, ಪುಟ ೧೮.

೧೨೪. ಆಡ್ಮಿನಿಸ್ಟ್ರೇಷನ್ ರಿಪೋರ್ಟ್ ಆಫ್ ದಿ ಉಡುಪಿ ತಾಲೂಕ್ ಬೋರ್ಡ್, ೧೯೦೯ ಸೌತ್ ಕೆನರಾ ಗಜೆಟ್, ಪುಟ೯.

೧೨೫. ಹೆರಾಲ್ಡ್ ಎ. ಸ್ಟುವರ್ಟ್ : ಪೂರ್ವೋಕ್ತ, ಪುಟ ೯೬.

೧೨೬. ಆಡ್ಮಿನಿಸ್ಟ್ರೇಷನ್ ರಿಪೋರ್ಟ್ ಆಫ್ ದಿ ಉಡುಪಿ ತಾಲೂಕ್ ಬೋರ್ಡ್, ಸೌತ್ ಕೆನರಾ ಗಜೆಟ್, ೧೯೦೮ - ೦೯, ಪುಟ ೨೩.

೧೨೭. ಆಡ್ಮಿನಿಸ್ಟ್ರೇಶನ್ ರಿಪೋರ್ಟ್ ಆನ್ ದಿ ವರ್ಕಿಂಗ್ ಆಫ್ ದಿ ಲೋಕಲ್ ಬೋರ್ಡ್ಸ್ ಇನ್ ಸೌತ್ ಕೆನರಾ, ೧೮೨೨-೨೩, ಪುಟ ೨೦.

೧೨೮. ರಿಪೋರ್ಟ್ ಆನ್ ದಿ ವರ್ಕಿಂಗ್ ಆಫ್ ಲೋಕಲ್ ಹಾಸ್ಪಿಟಲ್ಸ್ ಆಂಡ್ ಡಿಸ್ಪೆನ್ಸರೀಸ್ ಆಫ್ ಸೌತ್ ಕೆನರಾ, ೧೮೯೧-೯೨, ಪುಟ ೧೮.

೧೨೯. ರಿಪೋರ್ಟ್ ಆನ್ ದಿ ಆಡ್ಮಿನಿಸ್ಟ್ರೇಶನ್ ಆಫ್ ದಿ ಕುಂದಾಪುರ್ ತಾಲೂಕು ಬೋರ್ಡ್ ಫಾರ್ ದಿ ಯಿಯರ್ ೧೯೧೮-೧೯, ಮದ್ರಾಸ್ ಪ್ರೆಸಿಡೆನ್ಸಿ.

೧೩೦. ಆಡ್ಮಿನಿಸ್ಟ್ರೇಶನ್ ರಿಪೋರ್ಟ್ ಆಫ್ ಸೌತ್ ಕೆನರಾ ೧೯೨೨-೨೩, ಪುಟ ೨೦.

೧೩೧. ಹೆರಾಲ್ಡ್ ಎ ಸ್ಟುವರ್ಟ್: ಪೂರ್ವೋಕ್ತ, ಪುಟ ೬.

೧೩೨. ಆಡ್ಮಿನಿಸ್ಟ್ರೇಶನ್ ರಿಪೋರ್ಟ್ ಆಫ್ ಸೌತ್ ಕೆನರಾ ೧೯೨೨-೨೩, ಮದ್ರಾಸ್ ಪ್ರೆಸಿಡೆನ್ಸಿ, ಪುಟ ೨೧.

೧೩೩. ಮೈಲ್ ಸ್ಟೋನ್ಸ್: ೧೮೪೮-೧೯೯೮ (ಸವಿಸಂಚಿಕೆ), ಸರಕಾರಿ ಜಿಲ್ಲಾ ವೆನ್ಲಾಕ್ ಆಸ್ಪತ್ರೆ, ಮಂಗಳೂರು, ೧೯೯೮, ಪುಟಗಳು ೨೨-೨೩.

೧೩೪. ರಿಪೋರ್ಟ್ ಆನ್ ಸಿವಿಲ್ ಹಾಸ್ಪಿಟಲ್ಸ್ ಆಂಡ್ ಡಿಸ್ಪೆನ್ಸರೀಸ್ ೧೮೫೫-೫೬, ಮದ್ರಾಸ್ ಪ್ರೆಸಿಡೆನ್ಸಿ, ಪುಟ ೧೮.

೧೩೫. ಪ್ರಭಾಕರ್ ಪೀಟರ್ ವಿಲ್ಸನ್, ದಿ ಬಾಸೆಲ್ ಮಿಷನ್ ಇನ್ ಸೌತ್ ಕೆನರಾ ೧೮೩೪-೧೯೪೭, ಅಪ್ರಕಟಿತ ಸಂಶೋಧನಾ ಪ್ರಬಂಧ, (ಮಂಗಳೂರು ವಿಶ್ವವಿದ್ಯಾನಿಲಯ, ೧೯೮೮) ಇತಿಹಾಸ ವಿಭಾಗ, ಪುಟಗಳು ೨೪೫-೪೬.

೧೩೬. ಡೇವಿಡ್ ಆರ್ನೋಲ್ಡ್: ಪೂರ್ವೋಕ್ತ, ಪುಟ ೬೫.

೧೩೭. ಆಡ್ಮಿನಿಸ್ಟ್ರೇಶನ್ ರಿಪೋರ್ಟ್ ಆಫ್ ದಿ ಮ್ಯಾಂಗಲೂರ್ ಮುನ್ಸಿಪಾಲಿಟಿ ಫಾರ್ ದಿ ಯಿಯರ್ ೧೯೨೨-೨೩, ಪುಟ ೯.

೧೩೮. ಎಡ್ವರ್ಡ್ ಗೊನ್ಸಾಲ್ವಿಸ್: ಎ ಶೋರ್ಟ್ ಹಿಸ್ಟರಿ ಆಫ್ ದಿ ಇನ್ ಸ್ಟಿಟ್ಯೂಷನ್ಸ್, ಮಂಗಳೂರು ಶತಮಾನೋತ್ಸವದ ಸ್ಮರಣಿಕೆ, ೧೮೮೦-೧೯೮೦, ಮಂಗಳೂರು, ೧೯೮೦, ಪುಟ ೧೧.

೧೩೯. ಆಡ್ಮಿನಿಸ್ಟ್ರೇಶನ್ ರಿಪೋರ್ಟ್ ಆಫ್ ದಿ ಮ್ಯಾಂಗಲೂರ್ ಮುನ್ಸಿಪಾಲಿಟಿ ಫಾರ್ ದಿ ಇಯರ್ ೧೯೩೧-೩೨, ಪುಟ ೮.

೧೪೦. ಲೊಂಬಾರ್ಡ್ ಸ್ಮಾರಕ (ಮಿಷನ್) ಆಸ್ಪತ್ರೆಯ ಡೈಮಂಡ್ ಜುಬಿಲಿ ಸ್ಮರಣಿಕೆ, ಉಡುಪಿ, ೧೯೨೩-೮೩.

೧೪೧. ಸಿ.ಎಸ್.ಐ. ಉಡುಪಿ ಲೊಂಬಾರ್ಡ್ ಸ್ಮಾರಕ (ಮಿಷನ್) ಆಸ್ಪತ್ರೆಯ ಚರಿತ್ರೆ ಹಾಗೂ ಸೇವೆಯ ಒಂದು ಅಧ್ಯಯನ-ನೋಯಲ್ ಪ್ರಶಾಂತ್ ಕರ್ಕಡ, ಬಿ.ಡಿ ಮಹಾಪ್ರಬಂಧ, ಕರ್ನಾಟಕ ತಿಯೋಲಾಜಿಕಲ್ ಕಾಲೇಜು, ೨೦೦೯, ಪುಟಗಳು ೧-೫.

೧೪೨. ಲೋಕಲ್ ಸೆಲ್ಫ್ ಗವರ್ನಮೆಂಟ್ ರಿಪೋರ್ಟ್ ೧೯೨೮, ಮೆಮೊರಾಡಂ ನಂಬ್ರ ೧೯೮೪, ಫೆಬ್ರವರಿ ೩, ೧೯೨೮.

೧೪೩. ಪಬ್ಲಿಕ್ ಹೆಲ್ತ್ ವರದಿ ೧೯೨೮, ಗವರ್ನಮೆಂಟ್ ಆರ್ಡರ್ ಸಂಖ್ಯೆ ೨೬೫೬.

೧೪೪. ಪಬ್ಲಿಕ್ ಹೆಲ್ತ್ ವರದಿ ೧೯೩೧, ಅಕ್ಟೋಬರ್ ೨೨, ಗವರ್ನಮೆಂಟ್ ಆರ್ಡರ್ ಸಂಖ್ಯೆ೧೧೫೦.

೧೪೫. ಸೌತ್ ಕೆನರಾ ಗಜೆಟ್ ೧೯೩೫, ಪುಟಗಳು ೬-೭, ೩೬.

೧೪೬. ಪಬ್ಲಿಕ್ ಹೆಲ್ತ್ ವರದಿ, ಜಿ. ಒ. ನಂಬ್ರ.೧೧೫೦, ತಾ.೧೪ -೯- ೧೯೨೧.

೧೪೭. ಕೃಷ್ಣಸ್ವಾಮಿ ಅಯ್ಯರ್ ಕೆ.ಎನ್, ಅಂಡ್ ಹಾಲ್, ಜೆ.ಎಫ್(ಸಂ): ೧೯೩೮, ಮದ್ರಾಸ್ ಡಿಸ್ಟ್ರಿಕ್ಟ್ ಗಜೆಟಿಯರ್ಸ್: ಸ್ಟಟಿಸ್ಟಿಕಲ್ ಅಪೆಂಡೆಕ್ಸ್ ಟುಗೆದರ್ ವಿದ್ ಎ ಸಪ್ಲಿಮೆಂಟ್ ಟು ದಿ ಡಿಸ್ಟ್ರಿಕ್ಟ್ ಮ್ಯಾನುವಲ್ಸ್ ಫಾರ್ ಸೌತ್ ಕೆನರಾ ಡಿಸ್ಟ್ರಿಕ್ಟ್, ಗವರ್ನಮೆಂಟ್ ಇಂಡಿಯಾ ಪ್ರೆಸ್, ಮದ್ರಾಸ್, ಪುಟ, ೨೪೦.

೧೪೮. ನವಯುಗ, ೧೫ನೇ ಜನವರಿ, ೧೯೪೦.

# ಅಧ್ಯಾಯ: ನಾಲ್ಕು

## ಮಹಿಳೆ ಮತ್ತು ಸಾಮಾಜಿಕ ಸುಧಾರಣೆಗಳು

ಳ.೧ ಮಹಿಳೆಯರ ಶ್ರೇಯೋಭಿವೃದ್ಧಿಗೆ ಶ್ರಮಿಸಿದ ಸುಧಾರಕರು

ಳ.೨ ಪ್ರಮುಖ ಮಹಿಳಾಪರ ಸಾಮಾಜಿಕ ಸಂಸ್ಥೆಗಳು

ಳ.೩ ಸಮಾಜ ಸುಧಾರಣೆ ಮತ್ತು ಮಹಿಳಾಪರ ನೀತಿಗಳು

# ಅಧ್ಯಾಯ : ನಾಲ್ಕು

## ಮಹಿಳೆ ಮತ್ತು ಸಾಮಾಜಿಕ ಸುಧಾರಣೆಗಳು

ಪಾಶ್ಚಿಮಾತ್ಯ ಸಂಸ್ಕೃತಿಯೊಡನೆ ಸಂಪರ್ಕ ಬೆಳೆದ ಪರಿಣಾಮಗಳಿಂದ ಪ್ರಭಾವಿತರಾದ ಹಲವಾರು ಬೌದ್ಧಿಕ ವ್ಯಕ್ತಿಗಳಲ್ಲಿ ಲೋಕತಾಂತ್ರಿಕ ಮತ್ತು ಉದಾರನೀತಿಗಳ ಬಗ್ಗೆ ಹೊಸ ಅರಿವು ಮೂಡತೊಡಗಿದವು. ಅದರಿಂದ ಉಂಟಾದ ಬದಲಾವಣೆಗಳ ಸಮಗ್ರ ಪರಿಣಾಮಗಳು ಭಾರತ ದೇಶದ ಸಾಮಾಜಿಕ ಜೀವನದ ಮೇಲೆ ಸ್ಥಾನವಾಗಿ ಆದರೆ ಸ್ಥಿರವಾಗಿ ಕಾಣಿಸಿಕೊಳ್ಳತೊಡಗಿತು.[೧] ಆದರೆ ಬ್ರಿಟಿಷ್ ಆಡಳಿತದ ಅವಶ್ಯಕತೆಗಳನ್ನು ಪೂರೈಸುವ ಹಿನ್ನೆಲೆಯಲ್ಲಿ ಬ್ರಿಟಿಷ್ ಮಾದರಿಯ ಆಧುನಿಕತೆ ಅಥವಾ ಅಭಿವೃದ್ಧಿ ಜಾರಿಗೆ ಬಂತು. ಕ್ರೋಢೀಕೃತ ಉದ್ದೇಶವನ್ನು ಮರೆದ ಇವರು ತಮ್ಮ ಆಳ್ವಿಕೆ ಅನಿವಾರ್ಯ ಎಂಬ ಭಾವನೆಯನ್ನು ಮೂಡಿಸಿದರು.[೨] ಸುಧಾರಣಾವಾದಿಗಳು ಲಿಂಗ ವ್ಯವಸ್ಥೆಯ ಆಯಾಮದ ಸಂಬಂಧಗಳಲ್ಲಿ ಸುಧಾರಣೆಯ ಔಚಿತ್ಯವನ್ನು ಮನಗಂಡರು.

ಸೂಸಿ ಥಾರು ಮತ್ತು ಕೆ.ಲಲಿತರವರ ಪ್ರಕಾರ 'ಸಾಮಾಜಿಕ ಸುಧಾರಣೆಗಳು ಸ್ವಾರ್ಥ ಅಥವಾ ಹಿಂಸೆಯಿಂದ ಉದಯಿಸಿರದೆ ಪುನಶ್ಚೇತನದ ಹೊಣೆಹೊತ್ತು ಹುಟ್ಟಿಕೊಂಡವು' ಎಂಬುವುದಾಗಿದೆ.[೩] ಭಾರತದಲ್ಲಿ ೧೮ನೇ ಶತಮಾನದ ಉತ್ತರಾರ್ಧದಲ್ಲಿ ಹಾಗೂ ೧೯ನೇ ಶತಮಾನದ ಆದಿಯಲ್ಲಿ ಹಲವಾರು ಸುಧಾರಣಾವಾದಿಗಳು ಹಾಗೂ ಸುಧಾರಣಾ ಸಂಘಟನೆಗಳು ಹುಟ್ಟಿಕೊಂಡವು.[೪] ಆರಂಭಿಕ ಬ್ರಿಟಿಷ್ ಬರವಣಿಗೆಗಳಲ್ಲಿ ಭಾರತದ ಹಿಂದೂ ಸಂಪ್ರದಾಯದಲ್ಲಿ ರೂಢಿಯಲ್ಲಿದ್ದ ಮಹಿಳಾ ಸಂಬಂಧಿ ಕ್ರೌರ್ಯಗಳು ವಿಷಯವಸ್ತುಗಳಾಗಿದ್ದವು. ಸಾಮ್ರಾಜ್ಯಶಾಹಿ ಶಕ್ತಿಗಳು ದೇಶವನ್ನು ರಾಜಕೀಯ ಮತ್ತು ಆರ್ಥಿಕ ಶೋಷಣೆಗೆ ಒಳಪಡಿಸುವುದರೊಂದಿಗೆ ಭಾರತೀಯ ಸಂಸ್ಕೃತಿಯನ್ನು ನಿಂದಿಸಿ ಪಾಶ್ಚಾತ್ಯ ದೇಶಗಳಲ್ಲಿ ಸ್ತ್ರೀ ಸ್ವಾತಂತ್ರ್ಯ ಮತ್ತು ಭಾರತೀಯ ಮಹಿಳೆಯರಿಗಿದ್ದ ನಿರ್ಬಂಧಗಳ ಹೊಂದಾಣಿಕೆಯನ್ನು ಮಾಡತೊಡಗಿದರು. ಆದರೆ ಭಾರತದಲ್ಲಿ ಬ್ರಿಟಿಷ್ ಆಳ್ವಿಕೆ ಸಾಮಾಜಿಕ ಸುಧಾರಣೆಗಳಿಗೆ ಹೆಚ್ಚಿನ ಮನ್ನಣೆ ನೀಡಲಿಲ್ಲ ಬದಲಾಗಿ ಸಾಮಾಜಿಕ ಬದಲಾವಣೆಯಿಂದ ಭಾರತೀಯರು ಬ್ರಿಟಿಷರ ವಿರುದ್ಧ ದಂಗೆಯೇಳಬಹುದೆಂಬ ಭಯ ಬ್ರಿಟಿಷರನ್ನು ಕಾಡುತ್ತಿತ್ತು. ಬಹುಕಾಲದವರೆಗೆ ಸಾಮಾಜಿಕ ದಂಗೆಯ ಹಿನ್ನೆಲೆಯಲ್ಲಿ ಬ್ರಿಟಿಷರು ಕಾನೂನುಗಳನ್ನು ಜಾರಿಗೆ ತರಲು ಹಿಂಜರಿದರು. ಭಾರತದಲ್ಲಿದ್ದ ಹಲವಾರು ಕಂದಾಚಾರಗಳ ಅರಿವು ಇದ್ದರೂ ಸಹ ಶಾಂತಿಯನ್ನು

ಕಾಪಾಡುವ ನಿಟ್ಟಿನಲ್ಲಿ ಕ್ರಮಗಳನ್ನು ಕೈಗೊಂಡರು.[೫] ಆದರೆ ವಸಾಹತುಶಾಹಿ ಬರಹಗಾರರು ಮತ್ತು ಮಿಷನರಿಗಳು ಹಿಂದೂ ಸಂಪ್ರದಾಯದಲ್ಲಿದ್ದ ವಿಧವೆಯರ ಸಜೀವ ದಹನದ ಕುರಿತಂತೆ ಸುಧಾರಣೆ ಅಗತ್ಯವಿದೆ ಎಂದು ಮನಗಂಡರು. ಭಾರತದಲ್ಲಿ ಕ್ರೈಸ್ತಮತ ಪ್ರಚಾರಕರು, ಬಹುಜನ ಕಲ್ಯಾಣವಾದಿಗಳು ಮತ್ತು ಆಂಗ್ಲಿಕನ್ಸ್ ಇವರು ಲಿಂಗ ಸಂಬಂಧಿ ದುಷ್ಟರೂಢಿಯ ಆಚರಣೆಗಳಾದ ಬಾಲ್ಯ ವಿವಾಹ, ಬಹುಪತ್ನಿತ್ವ ಮತ್ತು ವಾಸಸ್ಥಾನದ ಗೂಢತ್ವ ಮೊದಲಾದ ವಿಷಯಗಳತ್ತ ಆಕ್ರಮಣಕಾರಕವಾಗಿ ಕೇಂದ್ರೀಕರಿಸತೊಡಗಿದರು.[೬] ೧೮ನೇ ಶತಮಾನದ ಅಂತ್ಯದಲ್ಲಿ ಹಾಗೂ ಹತ್ತೊಂಭತ್ತನೇ ಶತಮಾನದ ಆದಿಯಲ್ಲಿ ಪಾಶ್ಚಿಮಾತ್ಯ ಚಿಂತನೆಗಳ ಪ್ರಭಾವದಿಂದ ಪ್ರೇರಿತರಾದ ಸುಧಾರಣಾವಾದಿಗಳು ಸುಧಾರಣಾ ಸಂಸ್ಥೆಗಳ ಸ್ಥಾಪನೆಗೆ ನಾಂದಿ ಹಾಡಿದರು.

ವಿದೇಶಿ ಯಾತ್ರಿಕರು ಕೂಡಾ ಭಾರತದ ಸ್ತ್ರೀಯರ ಸ್ಥಿತಿಗತಿಯ ಕುರಿತು ಬೆಳಕು ಚೆಲ್ಲಿರುವರು. ಪಿಯತ್ರೋ ದೆಲ್ಲಾವಲ್ಲೆಯು ಇಕ್ಕೇರಿ ನಗರದಲ್ಲಿ ಪತಿಯನ್ನು ಕಳೆದುಕೊಂಡ ಹೆಂಗಸೊಬ್ಬಳು ಬೆಂಕಿಗೆ ಆಹುತಿಯಾಗಲು ಅಣಿಯಾಗುತ್ತಿರುವ ಕುರಿತು ತಿಳಿಸುವಂತೆ 'ಆಕೆ ತನ್ನ ಒಂದು ಕೈಯಲ್ಲಿ ನಿಂಬೆಹಣ್ಣು ಹಾಗೂ ಇನ್ನೊಂದು ಕೈಯಲ್ಲಿ ಕನ್ನಡಿ ಹಿಡಿದು, ಗೋಳೋ ಎಂದು ಅಳುತ್ತಿದ್ದು, ಆಕೆಯನ್ನು ಕುದುರೆಯ ಮೇಲೆ ಕುಳ್ಳಿರಿಸಲಾಗಿತ್ತು. ಈ ಸನ್ನಿವೇಶವನ್ನು ನೋಡಿ ಭಾಷೆ ಅರಿಯದ ತನಗೂ ಆಕೆಯ ದುಃಖವನ್ನು ನೋಡಿ ಕನಿಕರವಾಯಿತು. ವಾದ್ಯಗಳ ಸಮೇತವಾಗಿ ಛತ್ರಿ ಹಿಡಿದು ಆಕೆಯನ್ನು ಕೊಂಡೊಯ್ಯುತ್ತಿದ್ದಾಗ ಅವಳು ಶಾಂತಚಿತ್ತಳಾಗಿ ಕಣ್ಣಲ್ಲಿ ನೀರಿಲ್ಲದೆ ತನ್ನ ಗತಿಗಿಂತ ಹೆಚ್ಚಾಗಿ, ತಾನು ಕಳೆದುಕೊಂಡ ತನ್ನ ಗಂಡನ ಕುರಿತು ಯೋಚಿಸುತ್ತಿರುವಂತೆ ಕಂಡುಬರುತ್ತಿದ್ದಳು. ಇಲ್ಲಿ ಆಚರಣೆಯಲ್ಲಿದ್ದ ಸತಿ ಪದ್ಧತಿ ಬಹಳ ಕ್ರೂರ ಮತ್ತು ಅನಾಗರಿಕವಾಗಿದ್ದು ಇಲ್ಲಿನ ಹೆಂಗಸರ ಈ ಪಾತಿವ್ರತ್ಯ ಮತ್ತು ಸತೀತ್ವ ಬಹಳ ಮೆಚ್ಚತಕ್ಕದ್ದು' ಎಂದಿರುವನು.[೭] ೧೮೧೫-೧೮೨೮ರ ಅವಧಿಯಲ್ಲಿ ಬಂಗಾಳ, ಮದ್ರಾಸ್ ಮತ್ತು ಬಾಂಬೆ ಪ್ರೆಸಿಡೆನ್ಸಿಗಳಲ್ಲಿ ಒಟ್ಟು ೬೬೩೨ ಆತ್ಮಾಹುತಿಯ ಕುರಿತು ವರದಿಯಾಗಿದ್ದು ಅದರಲ್ಲಿ ೯೦ರಷ್ಟು ಬಂಗಾಳದಲ್ಲಿ ನಡೆದಿರುತ್ತದೆ. ಈ ಕ್ರೂರ ಪದ್ಧತಿಯು ಸಮಾಜದ ಕೆಳವರ್ಗಗಳಿಗಿಂತ ಬ್ರಾಹ್ಮಣರಲ್ಲಿ ಹೆಚ್ಚಾಗಿತ್ತು. ಬ್ರಿಟಿಷರೂ ಕೂಡಾ ಕಾನೂನು ರೀತಿಯಲ್ಲಿ ಈ ಅವಮಾನವೀಯವಾದ ಪದ್ಧತಿಯನ್ನು ನಿರ್ಮೂಲನ ಮಾಡಲು ಪ್ರಯತ್ನಿಸಿದರು.[೮]

ಭಾರತವು ಈಸ್ಟ್ ಇಂಡಿಯಾ ಕಂಪೆನಿಯಿಂದ ಬ್ರಿಟಿಷ್ ಪ್ರಭುಗಳ ಕೈಗೆ ಬಂದ ಮೇಲೆ ಸ್ತ್ರೀ ಶಿಕ್ಷಣದ ಸುಧಾರಣೆಯ ಹಾದಿಯಲ್ಲಿ ಸರಕಾರವು ಅನೇಕ ವ್ಯವಸ್ಥಿತ ಕ್ರಮಗಳನ್ನು ಕೈಗೊಂಡಿತು.[೯] ಭಾರತದಲ್ಲಿನ ಬುದ್ಧಿಜೀವಿಗಳು ತಮ್ಮ ಭೂತಕಾಲದ ಮರುಶೋಧನೆಗಳಲ್ಲಿ ಆಸಕ್ತರಾಗಿ ಹೊಸಬಗೆಯ ಬೌದ್ಧಿಕ ಚಟುವಟಿಕೆಗಳಲ್ಲಿ ತೊಡಗಲಾರಂಭಿಸಿದಾಗ ಬಂಗಾಳದ ಪುನರುತ್ಥಾನದ ಮೇಲೆ ಈ ಆಮದಿನ ಹೊಸ ಕಲ್ಪನೆಗಳು ಯಾವ ಪ್ರಭಾವಗಳನ್ನು ಬೀರಿದವೆಂಬುವುದನ್ನು ಇತಿಹಾಸಕಾರ ರಜತ್ ಕೆ ರೇ ಅವರು ಹೇಳುವಂತೆ 'ಆಮದಿನ ಸಂಗತಿಗಳನ್ನು ಸ್ವೀಕರಿಸಿದ್ದು ಹೌದಾದರೂ ಅದು ಆ ಹೊಸ ಕಲ್ಪನೆಗಳನ್ನು ಸಮರ್ಪಕವಾಗಿ ಅರಗಿಸಿಕೊಂಡಿತು. ಈ ಪ್ರಕ್ರಿಯೆಯಲ್ಲಿ ಮಾಡಿದ ಹೊಸ ಕಲ್ಪನೆಯ ಸಂಸ್ಕೃತಿ ಆಮದು ಸಂಸ್ಕೃತಿಯ ಮೇಲವ

ನಕಲಾಗಿಯೇನೂ ಇರಲಿಲ್ಲ, ಬದಲಾಗಿ ನಿಜವಾಗಿಯೂ ಪ್ರಾಮಾಣಿಕವಾದ ಒಂದು ಸಮಗ್ರ ಉತ್ಪನ್ನ ಎನಿಸಿತು' ಎಂದು ವ್ಯಾಖ್ಯಾನಿಸಿದರು.[೧೦] ಭಾರತದಲ್ಲಿ ಪಾಶ್ಚಾತ್ಯರ ಆಗಮನದಿಂದ ಅನೇಕ ಶಾಲೆಗಳು ತೆರೆಯಲ್ಪಟ್ಟರೂ ಸ್ತ್ರೀ ಶಿಕ್ಷಣದ ಹಾದಿ ಸುಗಮವಾದುದೇನೂ ಆಗಿರಲಿಲ್ಲ. ಓದುಬರಹದಿಂದ ಸ್ತ್ರೀ ವೈಧವ್ಯಕ್ಕೆ ಒಳಗಾಗುವಳು ಎಂಬಂತಹ ಅನೇಕ ಮೂಢನಂಬಿಕೆಗಳು, ಪುರುಷ ಪ್ರಧಾನತೆ, ಈರ್ಷ್ಯೆ, ಬಾಲ್ಯವಿವಾಹ ಸಮಾಜದಲ್ಲಿ ಸ್ವತಂತ್ರವಾಗಿ ತಿರುಗಾಡಲು ಸ್ತ್ರೀಗೆ ಇದ್ದ ನಿರ್ಬಂಧ ಇವೇ ಮೊದಲಾದ ಅಡೆತಡೆಗಳು ಸ್ತ್ರೀ ಶಿಕ್ಷಣದ ತುಂಬ ತುಂಬಿಹೋಗಿ ಮುನ್ನಡೆಯುವುದು ದುಸ್ಸಾಹಸವಾಗಿದ್ದಿತು.

ಸರ್. ಡಬ್ಲ್ಯೂ. ಡಬ್ಲ್ಯೂ ಹಂಟರ್ ಪ್ರಕಾರ ಮದ್ರಾಸ್ ಜನಗಣತಿಯನ್ನು ಅವಲೋಕಿಸುವಾಗ ಬ್ರಾಹ್ಮಣ ಮಹಿಳೆಯರಿಗೆ ೬ ವರ್ಷದಿಂದ ೭ನೇ ವರ್ಷದ ಒಳಗೆ ಬಾಲ್ಯವಿವಾಹ ನಡೆಯುತ್ತಿದ್ದು ೧೦ ವರ್ಷದ ಒಳಗೆ ಹೆಚ್ಚಿನ ಬ್ರಾಹ್ಮಣ ಸ್ತ್ರೀಯರ ವಿವಾಹಕಾರ್ಯ ಮುಗಿದು ಬಿಡುತ್ತಿತ್ತು. ಇದರಿಂದಾಗಿ ೧/೩ನೇ ಭಾಗದಷ್ಟು ಬ್ರಾಹ್ಮಣ ಸ್ತ್ರೀಯರು ವಿಧವೆಯರಾಗಿರುವರು ಎಂದಿದ್ದಾರೆ.[೧೧] ಕಲ್ಕತ್ತಾ ಮೆಡಿಕಲ್ ಕಾಲೇಜಿನ ವೈದ್ಯರಾಗಿದ್ದ ಡಾ. ಡೇವಿಡ್ ಬಿ.ಸ್ಮಿತ್ ಇವರು 'ಬಾಲ್ಯವಿವಾಹ ಅನಿವಾರ್ಯವಾಗಿ ಕೆಟ್ಟದಾಗಿದ್ದು ದೇಶದ ಶಕ್ತಿಗೆ ಮಾರಕವಾಗಿದೆ. ಇದು ಮಾನಸಿಕವಾಗಿ ಅವಮಾನವೀಯವಾಗಿದ್ದು ದೈಹಿಕವಾಗಿ ಆಕ್ಷೇಪಾರ್ಹವಾಗಿದೆ'ಎಂದಿದ್ದಾರೆ. ಡಾ.ನೋಬಿನ್ ಕೃಷ್ಣಾ ಬೋಸ್ ಪ್ರಕಾರ 'ದೈಹಿಕ ಸಾಮರ್ಥ್ಯ ಕ್ಷೀಣಿಸಲು ಬಾಲ್ಯವಿವಾಹ ಕಾರಣ ಮಾತ್ರವಲ್ಲದೆ ಬೌದ್ಧಿಕ ಬೆಳವಣಿಗೆಗೆ ಮತ್ತು ಸಾಮಾಜಿಕ ಸುಧಾರಣೆಗಳಿಗೂ ಇದು ಅಡಚಣೆಯನ್ನು ಉಂಟುಮಾಡುತ್ತದೆ. ಎಂಬುವುದಾಗಿ ತಿಳಿಸಿ ಆ ಮೂಲಕ ಜಾಗೃತಿ ಮೂಢಿಸುವ ಪ್ರಯತ್ನ ಮಾಡಿದರು.

ತುಳುನಾಡಿನಲ್ಲೂ ಹಲವು ಮಹಿಳಾ ಸಂಬಂಧಿ ಕಟ್ಟಳೆಗಳು ಕಂಡು ಬರುತ್ತದೆ. ಮುಖ್ಯವಾಗಿ ಹೆಣ್ಣು ಮಕ್ಕಳು ಬಾಲ್ಯಾವಸ್ಥೆಯನ್ನು ಕಳೆದು ಯೌವನಕ್ಕೆ ಕಾಲಿರಿಸುವಾಗ ಜೈವಿಕ ಕ್ರಿಯೆಗಳಿಂದಾಗಿ ಅವಳಲ್ಲಿ ಸಹಜವಾಗಿ ಕಂಡು ಬರುವ ದೈಹಿಕ ಬದಲಾವಣೆಗಳಿಗಾಗಿ ಅವಳನ್ನು ಕೆಲವು ದಿನಗಳವರೆಗೆ ಜನರಿಂದ ಬೇರ್ಪಡಿಸಿ ಸಾಂಪ್ರದಾಯಿಕ ಕಟ್ಟುಪಾಡುಗಳಿಗೆ ಒಳಪಡಿಸುತ್ತಿದ್ದರು. ಊರಿನಲ್ಲಿ ಕೂಡುಕಟ್ಟಿನ ಮಡಿವಾಳ್ತಿ ಮತ್ತು ಸಮಾಜದ ಗುರಿಕಾರರ ಮನೆಗಳಿಗೆ ಸುದ್ದಿ ಕಳುಹಿಸಿ ಅವರನ್ನು ಕರೆಸಲಾಗುತ್ತಿತ್ತು. ಹಿಂದೆ ಬಹುತೇಕವಾಗಿ ಬಾಲ್ಯವಿವಾಹಗಳು ನಡೆಯುತ್ತಿದ್ದುದರಿಂದ ಹೆಣ್ಣು ಋತುಮತಿಯಾದ ಬಳಿಕವೇ ಗಂಡನ ಮನೆಗೆ ಕರೆತರಲಾಗುತ್ತಿತ್ತು. ಬಾಲ್ಯವಿವಾಹವಾದ ಹೆಣ್ಣು ತವರು ಮನೆಯಲ್ಲಿ ಮೈನೆರತಾಗ ಅವಳನ್ನು ಶುದ್ಧಿಗೊಳಿಸುವ ಕಾರ್ಯವನ್ನು 'ಪ್ರಸ್ತ' ಎಂದು ಕರೆಯಲಾಗುತ್ತಿತ್ತು. ಋತುಮತಿಯಾದ ಹುಡುಗಿಯನ್ನು ಆರಾಧನಾ ಸ್ಥಳದಲ್ಲಿ ಶುದ್ಧಿ ಹೊಂದುವ ಮೊದಲು 'ನಾಗಬನ'(ನಾಗನಕಲ್ಲು ಸ್ಥಾಪನೆಯಾದ ಸ್ಥಳ) ಇದರ ಹತ್ತಿರ ಹೋಗಲು ಬಿಡುತ್ತಿರಲಿಲ್ಲ. 'ಪುಂಚ' ನಾಗರಹಾವಿನ ಹುತ್ತದ ಬಳಿಯಂತೂ ಅವಳು ಸುಳಿದಾಡುವುದೇ ಅಪರಾಧವಾಗಿತ್ತು. ಅದೇ ರೀತಿ 'ಬಾಳೆನೆಟ್ಟು' ಕಾರ್ತಿ ಬೆಳೆ ಮಾಡುವ 'ಬಾಕ್ಯಾರು' (ಬಾಕಿಮಾರು) ಗದ್ದೆಗೆ

ಕೂಡಾ ಇಳಿಯುತ್ತಿರಲಿಲ್ಲ. ಇವೆಲ್ಲಾ ಪೂಜಾಸ್ಥಾನ ಆದುದರಿಂದ ಈ ಕ್ರಮವನ್ನು ಕಟ್ಟುನಿಟ್ಟಾಗಿ ಅನುಸರಿಸುತ್ತಿದ್ದರು.[೧೨] ಸಾಮಾಜಿಕ ಪಿಡುಗುಗಳಲ್ಲೊಂದಾದ ಬಾಲ್ಯವಿವಾಹ ಪದ್ಧತಿಗೂ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಸಾಕ್ಷಿಯಾಗಿದೆ. ವಸಾಹತುಕಾಲಘಟ್ಟದ ಪತ್ರಿಕೆಗಳಾದ 'ಸ್ವದೇಶಾಭಿಮಾನಿ' ಹಾಗೂ 'ನವಯುಗ' ಪತ್ರಿಕೆಗಳು ಈ ಕುರಿತು ಬೆಳಕು ಚೆಲ್ಲುತ್ತದೆ. ಉದಾಹರಣೆಗೆ ಬೋಳಾರ ಶ್ರೀಮತಿ ಸರೋಜಿನಿದೇವಿಯವರ ಬಾಲ್ಯವಿವಾಹ ಆರ್ಯಸಮಾಜದ ನೇತೃತ್ವದಲ್ಲಿ ಪಂಡಿತ ದ್ವಿಜೇಂದ್ರನಾಥ ಶಾಸ್ತ್ರಿ ಸಿದ್ಧಾಂತ ಶಿರೋಮಣಿ ಮತ್ತು ಶ್ರೀಮಾನ್ ಪಂಡಿತ ರಾಮಚಂದ್ರಜಿ ಸಿದ್ಧಾಂತಾಲಂಕಾರರ ಪೌರೋಹಿತ್ಯದಲ್ಲಿ ಬಹಳ ವಿಜೃಭಂಣೆಯಿಂದ ನಡೆದ ಬಗ್ಗೆ ಮಾಹಿತಿ ಪತ್ರಿಕೆಗಳಲ್ಲಿ ದೊರಕುತ್ತದೆ.[೧೩] ಸಮಾಜ ಸುಧಾರಕಿಯಾದ ಕಮಲಾದೇವಿ ಚಟ್ಟೋಪಾಧ್ಯಾಯರು ಮತ್ತು ಬರಹಗಾರ್ತಿ ಸರಸ್ವತಿಬಾಯಿ ರಾಜವಾಡೆಯವರೂ ಈ ದುಷ್ಟ ಪದ್ಧತಿಯ ಬಲಿಪಶುಗಳಾಗಿದ್ದರು. ಜಿಲ್ಲೆಯಲ್ಲಿ ವಿಧವಾಸಮಸ್ಯೆ ಹೆಚ್ಚಾಗಿ ಬ್ರಾಹ್ಮಣ ವರ್ಗದಲ್ಲಿ ಅಸ್ತಿತ್ವದಲ್ಲಿದ್ದು, ಈ ಪದ್ಧತಿಯು ಮಹಿಳೆಯರ ಪಾಲಿಗೊಂದು ಶಾಪವೆನಿಸುವಂತಿತ್ತು.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಹಿರಿಯ ಪತ್ರಕರ್ತರಾದ ಎಂ.ವಿ ಕಾಮತ್ ರವರನ್ನು ಸಂದರ್ಶಿಸಿದ ಸಂದರ್ಭ ಅವರು ವಿಧವೆಯರ ಬವಣೆಗಳ ಕುರಿತು ತಿಳಿಸುವಂತೆ 'ತನ್ನ ಸ್ವಂತ ಅಕ್ಕ ಚಿಕ್ಕ ವಯಸ್ಸಿಗೇ ವಿಧವೆಯಾದ ಸಂದರ್ಭ ಒತ್ತಾಯಪೂರ್ವಕವಾಗಿ ಆಕೆಯ ತಲೆಬೋಳಿಸಿ ಕೆಂಪು ವಸ್ತ್ರ (ಸೀರೆ) ತೊಡಿಸಲಾಯಿತು. ಆಕೆ ತನ್ನ ಮೇಲೆ ಹೇರಲಾದ ನಿರ್ಬಂಧಗಳನ್ನು ಪ್ರಶ್ನಿಸಲಾರದೆ ಮೌನಿಯಾಗಿ ಇರಬೇಕಾಯಿತು' ಎಂದು ಹೇಳುತ್ತಾ ತನ್ನ ಅಕ್ಕನ ಕರುಣಾಜನಕ ಬದುಕನ್ನು ನೆನಪಿಸಿಕೊಂಡರು.[೧೪] ಇದು ಮೇಲ್ವವರ್ಗರದ, ಸ್ತ್ರೀಯರ ಹೀನಾಯವಾದ ಬದುಕಿನ ಚಿತ್ರಣವಾಗಿತ್ತು.

ಆದರೆ ದಕ್ಷಿಣ ಕನ್ನಡ ಜಿಲ್ಲೆಯ ಬಿಲ್ಲವ ಸಮುದಾಯದ, ವಿಧವಾ ಸ್ತ್ರೀಯರಲ್ಲಿ ಕಟ್ಟುಪಾಡುಗಳು ಅಷ್ಟೊಂದು ಬಿಗಿಯಾಗಿರಲಿಲ್ಲ. ಉದಾಹರಣೆಗೆ ಮೂಡಬಿದ್ರೆಯ ಮಿಜಾರ್ ನಲ್ಲಿ ಹುಟ್ಟಿದ ಗಂಗಾರವರು ತಮ್ಮ ಪತಿಯ (ಅಂಗರ ಪೂಜಾರಿ) ಮರಣದ ನಂತರ ಮಿಜಾರು, ಕಟೀಲು ಮತ್ತು ಕರ್ಮಾರ ಎಂಬಲ್ಲಿದ್ದ ತಮ್ಮ ಅಪಾರ ಕೃಷಿ ಭೂಮಿಯನ್ನು ಮಾರಾಟಮಾಡಿ ೧೯೨೨ರಲ್ಲಿ ತಮ್ಮ ಕುಟುಂಬದೊಂದಿಗೆ ಮಂಗಳೂರಿನಲ್ಲಿ ಬಂದು ನೆಲೆಸಿದರು. ಮಂಗಳೂರಿನ ಈಗಿನ ಲೇಡಿಗೋಶಾನ್ ಆಸ್ಪತ್ರೆಯಿರುವ ಸ್ಥಳವನ್ನು ಖರೀದಿಸಿ ಅಲ್ಲಿ ವಾಸ್ತವ್ಯ ಹೂಡಿ ಮಂಗಳೂರಿನ ಈಗಿನ ಕೇಂದ್ರ ಮಾರುಕಟ್ಟೆಯಿರುವ ಭವಂತಿ ಸ್ಟ್ರೀಟ್ ರಸ್ತೆಯಲ್ಲಿ ೧೯೨೪ರಲ್ಲಿ ಅವಲಕ್ಕಿ ವ್ಯಾಪಾರವನ್ನು ಪ್ರಾರಂಭಿಸಿದ್ದರು. ಇವರು ಈಗಿನ ಬಜಿಲಕೆರಿಯೆಂದೇ ಹೆಸರು ಪಡೆದಿರುವ ಸ್ಥಳದಲ್ಲಿ ಅವಲಕ್ಕಿ ತಯಾರಿಸುವ (ಕುಟ್ಟುವ) ಕೈಗಾರಿಕೆಯನ್ನು ಸ್ಥಾಪಿಸಿದ್ದರು. ವಸಾಹತು ಕಾಲಘಟ್ಟದಲ್ಲಿ ಇವರ ಕಾರ್ಖಾನೆಯಲ್ಲಿ ೫೦ ಜನ ಕೆಲಸಗಾರರು ಹಾಗೂ ಒರ್ವ ಲೆಕ್ಕ ಪರಿಶೋಧಕರಿದ್ದರು. ಕೆಲಸಗಾರರಿಗೆ ವಸತಿ ಮತ್ತು ಊಟದ ಸೌಲಭ್ಯವನ್ನು ಒದಗಿಸಲಾಗುತ್ತಿತ್ತು. ಮಹಿಳೆಯರಿಗೆ ಶಿಕ್ಷಣ ಮತ್ತು ಸ್ವಾತಂತ್ರ್ಯವಿಲ್ಲದ ಕಾಲದಲ್ಲಿ ಮಹಿಳೆಯೊಬ್ಬರು ಇಷ್ಟೊಂದು ದೊಡ್ಡ ಪ್ರಮಾಣದ ಉದ್ಯಮವನ್ನು ಪ್ರಾರಂಭಿಸಿ ಯಶಸ್ವಿಯಾಗಿ

ಮುನ್ನಡೆಸಿರುವುದು ವಿಶೇಷವಾಗಿದೆ. [೧೫] ವಸಾಹತು ಕಾಲಘಟ್ಟದ ಶೈಕ್ಷಣಿಕ ಪ್ರಗತಿಯ ಪರಿಣಾಮವಾಗಿ ಮಹಿಳೆಯರ ಸಾಮಾಜಿಕ ಅಭಿವೃದ್ಧಿಗೆ ಶಿಕ್ಷಣದ ಅಗತ್ಯವನ್ನು ಹಲವು ಸಮಾಜ ಸುಧಾರಕರೂ ಮನಗಂಡರು. ಜಿಲ್ಲೆಯ ಸಮಾಜ ಸುಧಾರಕರಲ್ಲೊಬ್ಬರಾದ ಎ.ಬಿ. ಶೆಟ್ಟರು ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದ ರೀತಿ ನೀತಿಗಳ ಕುರಿತು ತಿಳಿಸಿರುವಂತೆ 'ಹಿಂದು ದೇಶದಲ್ಲಿ ಪ್ರಾಥಮಿಕ ಶಿಕ್ಷಣವು ಕೂಡಾ ಧರ್ಮಾರ್ಥವಾಗಿ ಮತ್ತು ಕಡ್ಡಾಯವಾಗಿ ಕೊಡಲ್ಪಡದಿರುವುದು ದುರ್ದೈವವೇ ಸರಿ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇರುವ ೧೦ಳ ಹೈಯರ್ ಎಲಿಮೆಂಟರಿ ಶಾಲೆಗಳಲ್ಲಿ ೪ಳನ್ನು ಜಿಲ್ಲಾ ಬೋರ್ಡು ನಡೆಸುತ್ತಿದ್ದು ಬೋರ್ಡಿನವರು ಅನಾವಶ್ಯಕ ವೆಚ್ಚದ ಶಾಲೆಗಳಿಗೆ ಕಡಿತ ಹಾಕಿ ಬಾಲಕ ಬಾಲಕಿಯರ ಬೇರೆ ಬೇರೆ ಶಾಲೆಗಳನ್ನು ಒಂದುಗೂಡಿಸಿ ಉಳಿದ ಹಣವನ್ನು ಹೈಯರ್ ಎಲಿಮೆಂಟರಿ ಶಾಲೆಗಳನ್ನು ಹೆಚ್ಚಿಸುವುದಕ್ಕೂ, ಉಪಾಧ್ಯಾಯರ ಸಂಬಳ ಕಡಿತವನ್ನು ತೆಗೆದು ಹಾಕಲಿಕ್ಕೂ ಉಪಯೋಗಿಸುವುದು ಉಚಿತವೆಂದೂ, ಶಾಲೆಯು ಹಳ್ಳಿ ಜೀವನದ ಮುಖ್ಯ ಕೇಂದ್ರವಾಗಿ, ಇಡೀ ಹಳ್ಳಿಯ ಜನಸಮೂಹದ ಅಭಿವೃದ್ಧಿ ಸಾಧಿಸುವ ಉದ್ದೇಶ ನಮ್ಮದಾಗಬೇಕು' ಎಂದು ಅಭಿಪ್ರಾಯಪಟ್ಟರು.[೧೬]

ಕನ್ನಡ ವಾರಪತ್ರಿಕೆಯಾದ 'ಅಂತರಂಗ' ಇದರ ದಸರಾ ಸಂಚಿಕೆಯಲ್ಲಿ ಶ್ರೀಮತಿ ವಿಮಲಾದೇವಿಯವರ ಲೇಖನವಾದ ಭಾರತೀಯ ಸ್ತ್ರೀ ಸಮಾಜವನ್ನು ಹೇಗೆ ಉದ್ಧರಿಸಬಹುದು? ಮತ್ತು ವಿಧವಾ ಪುನರ್ವಿವಾಹದ ಕುರಿತಂತೆ ಪ್ರಕಟವಾದ ಲೇಖನದಲ್ಲಿ ವಿಧವೆಯರು ಪುನರ್ವಿವಾಹ ಆಗಬಾರದೆಂದು ತಡೆಗಟ್ಟುವ ಸಂಕುಚಿತ ಸ್ವಭಾವದ ಮಹನೀಯರು ಈ ಕಾಲದಲ್ಲೂ ಏಕೆ ತಮ್ಮ ಮನೋಭಾವವನ್ನು ಬದಲಿಸಲಾರರು? ಎಂಬ ಪ್ರಶ್ನೆಯನ್ನು ಎತ್ತಿ ಹಿಡಿದು, ಮಂಗಲೋತ್ಸವಗಳಲ್ಲಿ ವಿಧವೆಯರಿಗೆ ಆಸ್ಪದ ನೀಡದೆ, ಹೊಟ್ಟೆಗೆ ಸಾಕಷ್ಟು ಅನ್ನವನ್ನು ಹಾಕದೆ ಕಿರುಕುಳ ನೀಡುವವರ ವಿರುದ್ಧ ಕಿಡಿಕಾರಿದ್ದಾರೆ.[೧೭] ಈ ಕಟ್ಟುಪಾಡುಗಳನ್ನು ಮೆಟ್ಟಿನಿಂತು ಮಂದವಾದಿಗಳ ಮಂದಬುದ್ಧಿಯನ್ನು ಬಗ್ಗು ಬಡೆದು ನೆಲಸಮ ಮಾಡಿ ಸಮಾಜದಲ್ಲಿನ ದುಷ್ಟಪದ್ಧತಿಗಳ ಕಟ್ಟನ್ನು ಒಗೆದು ಬಿಡುವವರೇ ಧೈರ್ಯವಂತರು ಎಂದಿದ್ದಾರೆ.[೧೮] ವಿಧವಾ ವಿವಾಹದ ಕುರಿತು 'ನಾನು' ಎಂಬುವವರ ಲೇಖನದಲ್ಲಿ ಹೇಗೆ ಪುರುಷನಿಗೆ ಭಾರತೀಯ ಸಮಾಜದಲ್ಲಿ ಸರ್ವಾಧಿಕಾರವಿದೆ, ಸ್ತ್ರೀಗೆ ಸ್ವಾತಂತ್ರ್ಯ ಕೊಟ್ಟರೆ ಲೋಕವೇ ಹಾಳಾದೀತು ಎಂಬುವುದು ಭ್ರಮೆ ಎಂದೂ, ಇದಕ್ಕೆ ಪುರುಷರನ್ನು ದೂರಿ ಪ್ರಯೋಜನವಿಲ್ಲ ಎನ್ನಲಾಗಿದೆ.[೧೯]

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಮಹಿಳೆಯರು ವಿವಿಧ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡು ಬರುತ್ತದೆ. ಉದಾಹರಣೆಗೆ ಮಂಗಳೂರಿನ ಕಂಕನಾಡಿಯಲ್ಲಿ ಬಿಲ್ಲವರಾದ ದೂಮಪ್ಪನವರ ತಾಯಿಯವರಾದ ಗಂಗೆಯವರು ಕೃಷಿಯಲ್ಲಿ ತೊಡಗಿಸಿಕೊಂಡು ಭತ್ತವನ್ನು ಕುಟ್ಟುವುದರ ಮೂಲಕ ಮುಡಿಅಕ್ಕಿಯನ್ನು ತಯಾರಿಸಿ ತಮ್ಮ ಮಕ್ಕಳಿಗೆ ಶಿಕ್ಷಣ ನೀಡಿದ್ದರು.ಬಡತನವಿದ್ದರೂ ತಮ್ಮ ಮಕ್ಕಳು ಶಿಕ್ಷಿತರಾಗಬೇಕೆಂಬ ನಿಲುವು ಆಕೆಯದಾಗಿತ್ತು. ಅದೇ ರೀತಿ ಮಂಗಳೂರು ತಾಲೂಕಿನ ದೇರಳಕಟ್ಟೆಯ ಬೆಳ್ಮಗ್ರಾಮದ ಮಾಗಂದಡಿ ಗುತ್ತುಮನೆಯ ಸಂಜೀವಿನಿ ಭಂಡಾರಿಯವರು ಮತ್ತು ಕಾವೂರು ಗುತ್ತು ಮನೆಯ

ಕೃಷ್ಣಶೆಟ್ಟಿಯವರ ಪತ್ನಿ ಗಿರಿಜರವರು ಜಮೀನುದಾರಿಕೆ ವಹಿಸಿಕೊಂಡಿದ್ದರು. ನರಿಕೊಂಬು ಗ್ರಾಮದ ಏಲಬ್ಬಿ ಮನೆಯಲ್ಲಿ ಗಾಣಿಗ ಹೆಂಗಸರು ಶೇಂದಿಯಿಂದ ಬೆಲ್ಲ ತಯಾರಿಸುತ್ತಿದ್ದರು. ಪಾಣೆಮಂಗಳೂರಿನಲ್ಲಿ ಸೋಮ ಪೂಜಾರಿಯವರ ಪತ್ನಿಯವರಾದ ಲಕ್ಷ್ಮಿ ಅಮ್ಮ ಎಂಬಾಕೆ ಬೆಲ್ಲ ತಯಾರಿಸಿ ನಂತರ ಅದನ್ನು ಸೆಗಣಿ ಸಾರಿಸಿದ ನೆಲದಲ್ಲಿ ಹರಡಿಸಿ ಇಡುತ್ತಿದ್ದರು.[೨೦] ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಕಂಕನಾಡಿಗುತ್ತಿನ ದೇವಕಿ ಶೆಟ್ಟಿಯವರು ಕೌಟುಂಬಿಕ ಕಲಹದಿಂದ ಕಳೆದುಕೊಂಡಿದ್ದ ಭೂಮಿಯನ್ನು ಮರುಪಡೆದು ಜಮೀನುದಾರಿಕೆ ನಡೆಸಿ ಮೂಲಗೇಣಿಯನ್ನು ಪಡೆಯುತ್ತಿದ್ದರು. ಕಂಕನಾಡಿಗುತ್ತಿನಲ್ಲಿ ಮೊದಲ ಬಾರಿಗೆ ಹೆಣ್ಣೊಬ್ಬಳು ಧರ್ಮನೇಮ ಮಾಡಿರುವುದು ವಿಶೇಷವಾಗಿತ್ತು. ದೇವಕಿ ಶೆಟ್ಟಿಯವರ ತನ್ನ ಮಗಳಾದ ಕಮಲಾ ಡಿ ಶೆಟ್ಟಿಯವರಿಗೆ ಸರಕಾರಿ ಕಾಲೇಜಿನಲ್ಲಿ ಶಿಕ್ಷಣವನ್ನು ಮುಂದುವರಿಸಲು ಅವಕಾಶವನ್ನು ನೀಡಿದರು.[೨೧]

೧೯೨೦ನೇ ಇಸವಿಯಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಉಳ್ಳಾಲದಿಂದ ಕೇರಳದ ಮಂಜೇಶ್ವರಕ್ಕೆ ಹೋಗುವ ದಾರಿಯಲ್ಲಿ ಕೋಟೆಕಾರು ಸಂಕೊಳಿಗೆ ಎಂಬ ಪ್ರದೇಶದಲ್ಲಿ ಮರದ ಕಟ್ಟೆಯ ಬಳಿಯ ಯಮುನಮ್ಮ ಎಂಬುವವರು ಉಪಹಾರ ಗೃಹವನ್ನು ನಡೆಸುತ್ತಿದ್ದರು. ತುಳುನಾಡಿನ ಜನರಲ್ಲಿ ಹೆಚ್ಚಾಗಿ ಹೊಟೇಲುಗಳಿಗೆ ಹೋಗುವ ಅಭ್ಯಾಸವಿರಲಿಲ್ಲದಿದ್ದರೂ, ಎತ್ತಿನಗಾಡಿ ಹಾಗೂ ಕುದುರೆಗಳಲ್ಲಿ ಸಂಚರಿಸುತ್ತಿದ್ದವರುಮತ್ತು ಸಾಮಾನುಗಳನ್ನು ಸಾಗಿಸುತ್ತಿದ್ದವರಿಗಾಗಿ ರಸ್ತೆಯ ಪಕ್ಕದಲ್ಲಿ ಸಣ್ಣ ಸಣ್ಣ ಉಪಹಾರ ಗೃಹಗಳಿದ್ದವು.[೨೨] ಜಿಲ್ಲೆಯ ನರಿಕೊಂಬು ಗ್ರಾಮದ ಏಲಬ್ಬಿ ಮನೆಯಲ್ಲಿ ಗಾಣಿಗ ಹೆಂಗಸರು ಶೇಂದಿಯಿಂದ ಬೆಲ್ಲ ತಯಾರಿಸುತ್ತಿದ್ದರು. ಪಾಣೆಮಂಗಳೂರಿನಲ್ಲಿ ಸೋಮ ಪೂಜಾರಿಯವರ ಪತ್ನಿಯವರಾದ ಲಕ್ಷ್ಮಿಅಮ್ಮ ಎಂಬಾಕೆ ಬೆಲ್ಲ ತಯಾರಿಸಿ ನಂತರ ಅದನ್ನು ಸೆಗಣಿ ಸಾರಿಸಿದ ನೆಲದಲ್ಲಿ ಹರಡಿಸಿ ಇಡುತ್ತಿದ್ದರು. ಇಂತಹ ಅನುಭವಗಳು ನಂತರದಲ್ಲಿ ಮಹಿಳೆಯರು ಕೈಗಾರಿಕೋದ್ಯಮದಲ್ಲಿ ತೊಡಗಿಸಿಕೊಳ್ಳಲು ಸಹಕಾರಿಯಾಯಿತು. ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಮಂಗಳೂರು ತಾಲೂಕಿನ ಪಾಂಡೇಶ್ವರ ಪ್ರದೇಶದಲ್ಲಿದ್ದ ಕಂಸೋಲಿಡೇಟೆಡ್ ಕಾಫಿ ಆಂಡ್ ಕ್ಯಾಶ್ಯೂ ಫಾಕ್ಟರಿಯಲ್ಲಿ ಮಹಿಳೆಯರು ವಿವಿಧ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.[೨೩]

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನ ಹಳೆ ಬಂದರು ಪ್ರದೇಶದಲ್ಲಿ (ಈಗಿನ ಲೇಡಿ ಗೋಶಾನ್ ಆಸ್ಪತ್ರೆಯ ಹಿಂಭಾಗದಲ್ಲಿ) ಏಲಕ್ಕಿ ಕಾರ್ಖಾನೆಗಳಿದ್ದವು.ಇಲ್ಲಿ ಮಹಿಳೆಯರು ಏಲಕ್ಕಿ ಸ್ವಚ್ಛ ಮಾಡುವ ಕೆಲಸ, ತುಂಡರಿಸಿ ಹಬೆ ನೀಡುವ ಕೆಲಸವನ್ನು ಮಾಡುತ್ತಿದ್ದರು. ವಿಧವೆಯರೂ ಸೇರಿದಂತೆ ಜಿಲ್ಲೆಯ ವಿವಿಧ ವರ್ಗದ ಮಹಿಳೆಯರು ಇಲ್ಲಿ ಕೆಲಸ ನಿರ್ವಹಿಸುತ್ತಿದ್ದರು. ಆದರೆ ಹದಿಹರೆಯದ ಹೆಣ್ಮಕ್ಕಳನ್ನು ಈ ಪ್ರದೇಶಗಳಲ್ಲಿ ಕೆಲಸಕ್ಕೆ ಕಳುಹಿಸುತ್ತಿರಲಿಲ್ಲ. ವೇಶ್ಯಾವಾಟಿಕೆಗಳಂಥಹ ಅನೈತಿಕ ಚಟುವಟಿಕೆಗಳು ನಡೆಯುತ್ತಿದ್ದುದರಿಂದ ಹೆಚ್ಚಾಗಿ ೫೦ರ ಹರೆಯ ದಾಟಿದ ಮಹಿಳೆಯರು ಇಲ್ಲಿನ ಏಲಕ್ಕಿ ಕಾರ್ಖಾನೆಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದರು.[೨೪]

### ೪.೧ ಮಹಿಳೆಯರ ಶ್ರೇಯೋಭಿವೃದ್ಧಿಗೆ ಶ್ರಮಿಸಿದ ಸುಧಾರಕರು

೧೯ನೇ ಶತಮಾನದ ಮಧ್ಯಭಾಗದ ವೇಳೆಗೆ ಬ್ರಿಟಿಷ್ ಇಂಡಿಯಾದ ಎಲ್ಲಾ ಭಾಗಗಳಲ್ಲೂ ಸುಧಾರಣಾವಾದಿಗಳ ಗುಂಪುಗಳು ಹಬ್ಬಿ ಹರಡಿದ್ದವು.[೨೫] ಮಹಿಳೆಯರ ಸ್ಥಿತಿಗತಿಗಳನ್ನು ಉತ್ತಮಪಡಿಸುವ ಬಗ್ಗೆ ಲಕ್ಷ್ಯವಹಿಸಿದ ಸುಧಾರಣಾವಾದಿಗಳ ಪಟ್ಟಿಯಲ್ಲಿ ರಾಮ್ ಮೋಹನ್ ರಾಯ್ ಇವರ ಹೆಸರು ಮುಂಚೂಣಿಯಲ್ಲಿ ಕಂಡುಬರುತ್ತದೆ. ೧೭೭೨ರಲ್ಲಿ ಬಂಗಾಳದ ರಾಧಾನಗರ್ ಎಂಬ ಪ್ರದೇಶದಲ್ಲಿ ಜನಿಸಿದ ಇವರ ಕುಟುಂಬವರ್ಗದವರು ಹಲವಾರು ತಲೆಮಾರುಗಳ ಕಾಲ ಮೊಘಲರಿಗೆ ಸೇವೆ ಸಲ್ಲಿಸಿದವರಾಗಿದ್ದರು. ೧೮೨೮ರಲ್ಲಿ ಬ್ರಹ್ಮೋ ಸಮಾಜವನ್ನು ಸ್ಥಾಪಿಸಿ ಆ ಮೂಲಕ ದೇವರು ಒಬ್ಬನೇ, ಆ ಏಕೈಕ ಭಗವಂತನನ್ನೇ ಪೂಜಿಸಿ ಎಂಬ ಕರೆನೀಡಿದರು. ಹಿಂದೂ ಮಹಿಳೆಯು ತನ್ನ ಪಾವಿತ್ರ್ಯವನ್ನು ಸಾಕ್ಷಾತ್ಕರಿಸಿ ತೋರುವ ವಿಧಾನವೆಂದರೆ ತನ್ನ ಪತಿಯು ಮರಣಿಸಿದರೆ ಆತನ ಚಿತೆಯನ್ನು ಆಕೆ ಸಜೀವವಾಗಿಯೇ ಏರಿ ತನ್ನನ್ನು ಅರ್ಪಿಸಿಕೊಂಡು 'ಸತಿ'ಎನಿಸಬೇಕು ಎನ್ನುವ ಘೋರ ಪದ್ಧತಿಯನ್ನು ರಾಮ್ ಮೋಹನ್ ರಾಯ್ ತೀವ್ರವಾಗಿ ವಿರೋಧಿಸಿದರು. ಇವರು ವಿಧವೆಯರನ್ನು ಪತಿಯ ಚಿತೆಯ ಮೇಲೆ ಬಲಿಯಾಗುವಂತೆ ಆಗ್ರಹಪಡಿಸುವ ಪದ್ಧತಿಯನ್ನು ವಿರೋಧಿಸಲು ಕರೆ ನೀಡುವ ಕಿರು ಹೊತ್ತಿಗೆಯೊಂದನ್ನು ೧೮೧೮ರಲ್ಲಿ ಬಂಗಾಳಿ ಭಾಷೆಯಲ್ಲಿ ಬರೆದು ನಂತರ 'ವಿಧವೆಯರನ್ನು ಜೀವಂತ ಸುಡುವವರ ಪರ ಮತ್ತು ವಿರೋಧ ಕುರಿತು ಒಂದು ಸಮಾಲೋಚನೆ' ಎನ್ನುವ ಇಂಗ್ಲಿಷ್ ಆವೃತ್ತಿಯನ್ನು ಪ್ರಕಟಿಸಿದರು.

ಈ ಕೃತಿಯಲ್ಲಿ ಕಂಡು ಬರುವಂತೆ 'ಸ್ತ್ರೀಯರನ್ನು ಅವರ ದೈಹಿಕ ದೌರ್ಬಲ್ಯದ ನೆಪದಲ್ಲಿ ಘನತ್ತರವಾದ ಕೆಲಸಕಾರ್ಯಗಳಿಂದ ಅನರ್ಹಗೊಳಿಸಲಾಗಿದೆ. ಸರ್ವೆಸಾಧಾರಣವಾಗಿ ಹೆಂಗಸರನ್ನು ಶಿಕ್ಷಣ, ಜ್ಞಾನಾರ್ಜನೆಗಳಿಂದ ದೂರ ಇರಿಸಿ ಅವರನ್ನು ಕೀಳೆಂದು ಘೋಷಿಸುವುದು ನ್ಯಾಯ ಸಮ್ಮತವಲ್ಲ. ಮಹಿಳೆಯರಲ್ಲಿ ಸಂಕಲ್ಪಬಲವಿಲ್ಲ, ಅವರು ನಿರ್ಧಾರಗಳನ್ನು ತೆಗೆದುಕೊಳ್ಳಲಾರರು ಎನ್ನುವುದು ಅಪವಾದ ಯಾಕೆಂದರೆ ದೃಢ ಮನಸ್ಸಿನಿಂದ ಮೃತ ಗಂಡನ ಪಾರ್ಥೀವ ಶರೀರದೊಂದಿಗೆ ದಹಿಸಿಕೊಳ್ಳಲು ಮುಂದಾಗುವ ಸ್ತ್ರೀಯರಲ್ಲಿ ಸಂಕಲ್ಪ ಬಲವಿಲ್ಲ ಎನ್ನುವ ಆಪಾದನೆ ಸಲ್ಲ' ಎನ್ನುತ್ತಾರೆ.

ಸ್ತ್ರೀಯರಿಗೆ ಶಿಕ್ಷಣ ನೀಡದಿದ್ದರೆ ಯಾವುದೇ ಬಗೆಯ ಕಾರ್ಯಕ್ರಮಗಳು ಹೆಚ್ಚು ಅರ್ಥಪೂರ್ಣವಾಗಲಾರದು ಎಂಬ ಸತ್ಯವನ್ನು ಮನಗಂಡಿದ್ದ ಬಂಗಾಳದ ಸುಧಾರಕರಾದ ಈಶ್ವರಚಂದ್ರ ವಿದ್ಯಾಸಾಗರ್ ಇವರ ಪರಿಶ್ರಮದಿಂದ ಹೆಣ್ಣುಮಕ್ಕಳಿಗಾಗಿಯೇ ಶಾಲೆಗಳು ಪ್ರಾರಂಭವಾದವು.[೨೬] ಹೂಗ್ಲಿ ಜಿಲ್ಲೆಯ ಬಿರ್ಸಿಂಗ ಎಂಬ ಪ್ರದೇಶದಲ್ಲಿ ೧೮೨೦ರಲ್ಲಿ ಜನಿಸಿದ ವಿದ್ಯಾಸಾಗರರು ವಿಧವಾ ಮರುವಿವಾಹವನ್ನು ಕಾಯಿದೆಯ ಚೌಕಟ್ಟಿನಲ್ಲಿ ತರಬೇಕೆಂದು ಬ್ರಿಟಿಷ್ ಸರಕಾರಕ್ಕೆ ಒತ್ತಾಯದ ಮನವಿಯನ್ನು ಸಲ್ಲಿಸಿದರು. ತಮ್ಮ ಕೋರಿಕೆಗೆ ಬೆಂಬಲವಾಗಿ ಸಾವಿರಾರು ಜನರ ಸಹಿ ಸಂಗ್ರಹಿಸಿ ಇಂಡಿಯನ್ ಲೆಜಿಸ್ಲೇಟಿವ್ ಕೌನ್ಸಿಲಿಗೆ

ಸಲ್ಲಿಸಿದರು. ಆದರೆ, ಈ ಕೋರಿಕೆಯನ್ನು ವಿರೋಧಿಸುವ ಸಹಿ ಸಂಗ್ರಹವೂ ಅದಕ್ಕಿಂತ ಹೆಚ್ಚಿನ ಪ್ರಮಾಣದಲ್ಲೇ ಕೌನ್ಸಿಲನ್ನು ತಲುಪಿತು. ಬ್ರಿಟಿಷ್ ಕೌನ್ಸಿಲಿನ ಸದಸ್ಯರು 'ಎಚ್ಚೆತ್ತ ಅಲ್ಪಸಂಖ್ಯಾತ' ರ ಮನವಿಯನ್ನು ಪುರಸ್ಕರಿಸಲು ತೀರ್ಮಾನಿಸಿದರು. ೧೮೫೬ರಲ್ಲಿ ಹಿಂದೂ ಮರು ವಿವಾಹ ಕಾಯಿದೆಯು ಜಾರಿಗೆ ಬಂದಿತು.

ಈ ಕಾಯಿದೆಯು ವಾಸ್ತವದಲ್ಲಿ ವಿಧವೆಯರ ಬದುಕುಗಳನ್ನು ಉದ್ಧರಿಸಿದ್ದೆಷ್ಟು ಎಂಬುವುದು ಪ್ರಶ್ನೆಯೇ ಆಗಿರಬಹುದಾದರೂ, ಹೆಚ್ಚು ಮಾನವೀಯವೆನಿಸುವ ಸಮಾಜ ನಿರ್ಮಾಣದ ಬಗೆಗೆ ಈಶ್ವರಚಂದ್ರರು ಪ್ರಾಮಾಣಿಕವಾಗಿ ಆಶಿಸಿದ್ದರು ಎಂಬುವುದನ್ನಂತೂ ಒಪ್ಪಲೇಬೇಕು. ಮಹಿಳೆಯರ ಮತ್ತು ಪುರುಷರ ವಿವಾಹದ ವಯಸ್ಸನ್ನು ನಿಗದಿ ಪಡಿಸಲು ಧ್ವನಿಯೆತ್ತಿದವರಲ್ಲಿ ಅವರು ಮೊದಲಿಗರಾಗಿದ್ದರು.[೨೭] ವಿದ್ಯಾಸಾಗರರು ತಮ್ಮ 'ಮ್ಯಾರೇಜ್ ಆಫ್ ಹಿಂದೂ ವಿಡೋಸ್' ಎಂಬ ಕೃತಿಯಲ್ಲಿ ವಿಧವಾ ವಿವಾಹಕ್ಕೆ ಇರುವ ಶಾಸ್ತ್ರಾಧಾರಗಳನ್ನು ಉಲ್ಲೇಖಿಸಿ ಆ ಮೂಲಕ ವಿಧವಾ ವಿವಾಹಕ್ಕೆ ಪ್ರಚೋದಿಸಿದರು.[೨೮] ಸಮಾಜ ಸುಧಾರಣಾ ಚಟುವಟಿಕೆಗಳಿಗಾಗಿ ಅವರು ಜೀವಭಯ ಎದುರಿಸಬೇಕಾಯಿತು. ಮದುವೆಯಾಗಲು ಬಯಸಿದ ವಿಧವೆಯರನ್ನು ದೂರದೂರಿಗೆ ಕಳುಹಿಸಲಾಗುತ್ತಿತ್ತು. ಇವರು ತಮ್ಮ ಕುಟುಂಬದವರಿಂದ ಹೊರಹಾಕಲ್ಪಟ್ಟ ವಿಧವೆಯರ ವಿವಾಹವನ್ನು ತಮ್ಮ ಸ್ವಂತ ಖರ್ಚಿನಲ್ಲಿ ನೆರವೇರಿಸಿ ಅವರಿಗೆ ಸಂಸಾರ ಸಾಗಿಸಲು ಧನ ಸಹಾಯ ಮಾಡುತ್ತಿದ್ದರು. [೨೯]

ಸಮಾಜ ಸುಧಾರಕರಾಗಿ ಸ್ತ್ರೀ ಶಿಕ್ಷಣ ಮತ್ತು ವಿಧವಾ ಪುನರ್ವಿವಾಹ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಇನ್ನೊರ್ವ ಮಹನೀಯರೆಂದರೆ ಜ್ಯೋತಿಬಾ ಫುಲೆಯವರು. ೧೮೨೭ರಲ್ಲಿ ಜನಿಸಿದ ಇವರು ಪೂನಾದಲ್ಲಿ ಸ್ಕಾಟ್ಲೆಂಡಿನ ಧರ್ಮಪ್ರಚಾರಕರು ನಡೆಸುತ್ತಿದ್ದ ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಅಸ್ಪೃಶ್ಯರೂ ಸೇರಿದಂತೆ ಎಲ್ಲಾ ವರ್ಗದ ಹುಡುಗರೊಡನೆ ಬೆರೆತರು. ತಮ್ಮ ಇಪ್ಪತ್ತನೆಯ ವಯಸ್ಸಿನಲ್ಲಿ ಅಹಮ್ಮದ್ ನಗರದಲ್ಲಿ ಅಮೆರಿಕನ್ ಧರ್ಮಪ್ರಚಾರಕರು ನಡೆಸುತ್ತಿದ್ದ ಬಾಲಕಿಯರ ಶಾಲೆಗೆ ನೀಡಿದ ಭೇಟಿ ಅಸ್ಪೃಶ್ಯ ಹೆಣ್ಣುಮಕ್ಕಳಿಗಾಗಿ ಶಾಲೆಯೊಂದನ್ನು ತೆರೆಯಲು ಕೇಳಿಕೊಂಡರು. ೧೮೬೦ರಲ್ಲಿ ಫುಲೆಯವರ ಆಸಕ್ತಿ ಮತ್ತು ಕಾರ್ಯ ಚಟುವಟಿಕೆಗಳು ವಿಸ್ತಾರಗೊಂಡು ಶಾಲೆಗಳನ್ನು ನಡೆಸುವುದರ ಜೊತೆಗೆ ವಿಧವೆಯರ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ೧೮೭೩ರಲ್ಲಿ ಫುಲೆ 'ಸತ್ಯಶೋಧಕ ಸಮಾಜ' ಎಂಬ ಸತ್ಯಾನ್ವೇಷಿಗಳ ಸಂಘವೊಂದನ್ನು ಸ್ಥಾಪಿಸಿದರು. ಸಂಘದ ನಿಯಮಗಳು ಆ ಕಾಲದ ಸುಧಾರಣಾ ಮನೋಧರ್ಮಕ್ಕೆ ವಿಚಿತ್ರವಾಗಿದ್ದವು. ತಂದೆ ತಾಯಿಯರ ಸಾಮಿಪ್ಯವನ್ನು ಪಡೆಯಲು ಹೇಗೆ ಮಧ್ಯವರ್ತಿಯ ಅಗತ್ಯವಿಲ್ಲವೋ ಅಂತೆಯೇ ದೇವರ ಸಾಮಿಪ್ಯಕ್ಕೆ ಮಧ್ಯವರ್ತಿಯ ಅಗತ್ಯವಿಲ್ಲ ಎಂಬುವುದು ಅವರ ವಾದವಾಗಿತ್ತು.[೩೦] ಅನಾದಿಕಾಲದಿಂದಲೂ ಬ್ರಾಹ್ಮಣರಲ್ಲಿ ರೂಢಿಯಲ್ಲಿದ್ದ ವಿಧವೆಯರ ಕೇಶಮುಂಡನ ಕಾರ್ಯವನ್ನು ಫುಲೆ ಅತ್ಯಂತ ಅವಮಾನವೀಯವೆಂದರು. ಹೆಣ್ಣನ್ನು ವಿರೂಪಗೊಳಿಸುವ ವಿಕೃತಗೊಳಿಸುವ ಆಚರಣೆಗಳು ವಿಕೃತ ಮನಸ್ಸಿನ ಪುರುಷ ಸಮಾಜದಲ್ಲಿರುತ್ತದೆ ಎಂಬುವುದನ್ನು ಮನಗಂಡು ಇಂಥಹ ಅನಿಷ್ಟ ಆಚರಣೆಗಳನ್ನು ತಡೆಯಲು ಹೋರಾಡಿದರು.[೩೧]

೧೮೯೦ರ ಹೊತ್ತಿಗೆ ಧೋಂಡೋ ಕೇಶವ ಕರ್ವೆ ಪೂನಾದಲ್ಲಿ ಹಲವಾರು ಮಹಿಳಾ ಶಾಲೆಗಳನ್ನು ತೆರೆದರು. ತಮ್ಮ ಆತ್ಮಕಥೆಯಾದ 'ಲುಕಿಂಗ್ ಬ್ಯಾಕ್' ಎಂಬ ಕೃತಿಯಲ್ಲಿ ಸ್ವಂತ ಅನುಭವಗಳೇ ವಿಧವೆಯರಿಗಾಗಿ ಶಾಲೆಯನ್ನು ೧೮೯೬ರಲ್ಲಿ ಸ್ಥಾಪಿಸಲು ಕಾರಣವಾದವು ಎಂದಿದ್ದಾರೆ. ಗೋಧೂಬಾಯಿ ಜೋಷಿ ಎಂಬ ಬಾಲವಿಧವೆಯನ್ನು ಕರ್ವೆ ತಮ್ಮ ಎರಡನೆಯ ಹೆಂಡತಿಯಾಗಿ ಮದುವೆಯಾದ ವಿಷಯವೂ ಕೃತಿಯಲ್ಲಿ ಉಕ್ತವಾಗಿದೆ. ಕರ್ವೆಯವರು ತಮ್ಮ ಪತ್ನಿ ಮರಣಿಸಿದಾಗ ಒಬ್ಬ ವಿಧವೆಯನ್ನು ಪುನಃ ವಿವಾಹವಾಗುವುದಾಗಿ ತೀರ್ಮಾನಿಸಿ ತಮ್ಮ ಗೆಳೆಯನ ತಂಗಿಯಾದ ಗೋದೂಬಾಯಿಯನ್ನು ವಿವಾಹವಾದಾಗ ಊರಿನ ಜನರು ಅವರನ್ನು ಜಾತಿಯಿಂದ ಹೊರಹಾಕಿದರು. ಇದರಿಂದ ತಲ್ಲಣಗೊಂಡ ಕರ್ವೆಯವರಲ್ಲಿ ಬಾಲವಿಧವೆಯರಿಗೆ ಮರುವಿವಾಹವು ನಿಜವಾಗಿಯೂ ಸ್ವಾತಂತ್ರ್ಯದ ಹಾದಿಯಾಗೀತೇ? ಎಂಬ ಪ್ರಶ್ನೆ ಹುಟ್ಟಿಸಿತು. ಬಾಲವಿಧವೆಯರಿಗೆ ಶಿಕ್ಷಣ ನೀಡಿ ಅವರನ್ನು ಆರ್ಥಿಕವಾಗಿ ಸ್ವಾವಲಂಬಿಗಳಾಗಿ ಮಾಡುವುದೇ ಹೆಚ್ಚು ಉಚಿತವೆಂಬ ಭಾವನೆ ಅವರಲ್ಲಿ ಬೆಳೆಯಿತು. ೧೮೯೬ರಲ್ಲಿ ವಿಧವೆಯರಿಗಾಗಿ ಒಂದು ಆಶ್ರಮವನ್ನು ತೆರೆದರು. ಮುಂದೆ ಇದು ಶಾಲೆಯಾಗಿ ಅಭಿವೃದ್ಧಿ ಹೊಂದಿತು.

ಶಾಲೆಯ ಪಠ್ಯಕ್ರಮವು ಭವಿಷ್ಯದಲ್ಲಿ ವಿಧವೆಯರು ಸ್ವಾವಲಂಬಿಗಳಾಗಲು ನೆರವಾಗುವಂತಿತ್ತು. ಬಾಲಕಿಯರಿಗೆ ಇದ್ದ ಶಾಲೆಗಳ ಸಂಖ್ಯೆ ವಿರಳವಾದುದರಿಂದ ಮಹಿಳಾ ವಿದ್ಯಾಲಯವನ್ನು ತೆರೆದರು.[೨೧] ವಿವಾಹ ನಂತರ ಆನಂದಿಬಾಯಿಯಾದ ಗೋದೂಬಾಯಿಯವರು ಪಂಡಿತಾ ರಮಾಬಾಯಿಯವರ ಪ್ರಥಮ ವಿದ್ಯಾರ್ಥಿಯಾಗಿ ವಿಧವೆಯರಿಗಾಗಿ ಒಂದು ಆಶ್ರಯ ತಾಣವನ್ನು ತೆರೆಯಬೇಕೆಂಬ ಕನಸು ಕಂಡಿದ್ದರು. ಕರ್ವೆಯವರ ಶಾಲೆಗಳು ಬೆಳೆದು ವಿಸ್ತರಿಸುವುದರಲ್ಲಿ ಆನಂದಿಬಾಯಿಯವರ ತಂಗಿ ಪಾರ್ವತಿಬಾಯಿ ಅತವಾಳೆಯವರ ಪರಿಶ್ರಮ ಬಹಳ ಇತ್ತು. ಹನ್ನೊಂದು ವರ್ಷಕ್ಕೆ ವಿವಾಹವಾದ ಪಾರ್ವತಿಬಾಯಿ ಇಪ್ಪತ್ತು ವರ್ಷಕ್ಕೆ ವಿಧವೆಯಾದಳು. ಮರು ಮದುವೆಗಳ ಸಾಧ್ಯತೆಗಳ ಪ್ರಸ್ತಾಪ ಬಂದಾಗ ನಿರಾಸಕ್ತಿ ವಹಿಸಿದ ಪಾರ್ವತಿಬಾಯಿ ತಾನು ಓದಿ ಏನಾದರೊಂದು ಮಹತ್ವದ ಕಾರ್ಯದಲ್ಲಿ ತೊಡಗಿಸಬೇಕೆಂಬ ಆಸೆಯನ್ನೇ ವ್ಯಕ್ತಪಡಿಸಿದರು.[೨೨]

ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ಸಮಾಜ ಸುಧಾರಣಾ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ಕುಂದುಕೋರಿ ವೀರೇಶಲಿಂಗಂ ಪಂತುಲು ೧೮೪೮ರಲ್ಲಿ ಗೋದಾವರಿ ಜಿಲ್ಲೆಯ ರಾಜಧಾನಿಯಾದ ರಾಜಮುಂಡ್ರಿಯಲ್ಲಿ ಜನಿಸಿದರು. ಧಾರ್ಮಿಕ ಪದ್ಧತಿಗಳಲ್ಲಿ ಸೇರಿ ಹೋಗಿದ್ದ ಕೆಟ್ಟ ರೂಢಿಗಳನ್ನು ವಿರೋಧಿಸಿ ಅವುಗಳನ್ನು ತಡೆಗಟ್ಟಿ ಧರ್ಮವನ್ನು ಶುದ್ಧಿಗೊಳಿಸುವ ಅಗತ್ಯವಿದೆ ಎಂಬುವುದು ಪಂತುಲುರವರ ವಾದವಾಗಿತ್ತು. ಬ್ರಹ್ಮಸಮಾಜ ಮತ್ತು ಪ್ರಾರ್ಥನಾ ಸಮಾಜಗಳ ಸದಸ್ಯರಾಗಿದ್ದ ಇವರು ಸಮಾಜ ಸುಧಾರಣೆಯ ಉದ್ದೇಶದಿಂದ 'ವಿವೇಕ ವರ್ಧಿನಿ' ಎಂಬ ಸ್ವಂತ ಪತ್ರಿಕೆಯನ್ನು ಪ್ರಕಟಿಸುತ್ತಿದ್ದರು. ವೀರೇಶಲಿಂಗಂರವರು ೧೯೭೮ರಲ್ಲಿ ರಾಜಮುಂಡ್ರಿ ವಿಧವಾ ವಿವಾಹ ಸಂಘವನ್ನು ಸ್ಥಾಪಿಸಿ ಆ ಮೂಲಕ

ವಿಧವೆಯರ ಸಬಲೀಕರಣಕ್ಕಾಗಿ ಶ್ರಮಿಸಿದರು.[೩೪] ೧೮೩೦ರ ದಶಕದಲ್ಲಿ ಹುಟ್ಟಿದ ತಾರಾಬಾಯಿ ಶಿಂಧೆಯವರು ಮಹಾರಾಷ್ಟ್ರದ ಬುಲ್ಡಾನದ ಮರಾಠಿ ಕುಟುಂಬವೊಂದರಲ್ಲಿ ಜನಿಸಿದರು. ಬುಲ್ಡಾನಾ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಸೀನಿಯರ್ ಕ್ಲರ್ಕ್ ಆಗಿದ್ದ ಇವರ ತಂದೆ ಸತ್ಯಶೋಧಕ ಸಮಾಜದ ಸದಸ್ಯರಾಗಿದ್ದರು. ೧೮೭೭ರಲ್ಲಿ ಮಹಿಳೆಯರಿಗಾಗಿಯೇ ಪ್ರಾರಂಭವಾದ ಮರಾಠಿ ನಿಯತಕಾಲಿಕೆಯು ಕುಟುಂಬಗಳಲ್ಲಿನ ಪತ್ನಿ ಪುತ್ರಿಯರನ್ನು ದೃಷ್ಟಿಯಲ್ಲಿಟ್ಟುಕೊಂಡು, ಅವರ ಬೇಕು ಬೇಡಗಳಿಗೆ ದನಿಯಾಗಿ ಹತ್ತೊಂಭತ್ತನೆಯ ಶತಮಾನದುದ್ದಕ್ಕೂ ವಿಧವಾ ವಿವಾಹ, ಹೆಣ್ಣುಮಕ್ಕಳ ಶಿಕ್ಷಣ, ಸತಿನಿಷೇಧ ಮೊದಲಾದುವುಗಳಿಗೆ ಕರ ನೀಡಿತು. ಆದರೆ ತಾರಾಬಾಯಿಯವರ ಕರೆ ಬೇರೆಯದೇ ಆಗಿದ್ದು ಹೆಚ್ಚು ತೀವ್ರಗಾಮಿಯಾಗಿತ್ತು.[೩೫] ಸ್ತ್ರೀ ಪುರುಷರ ನಡುವೆ ಸಮಾನತೆ ಕಾಯ್ದುಕೊಳ್ಳಬೇಕೆಂಬ ಧೋರಣೆಯನ್ನು ಹೊಂದಿದ್ದ ತಾರಾಬಾಯಿ ಶಿಂಧೆ ಯವರು 'ಸ್ತ್ರೀ ಪುರುಷ ತುಲನಾ' ಎಂಬ ಸಣ್ಣ ಪುಸ್ತಿಕೆಯನ್ನು ಬರೆದು ಪ್ರತಿಭಟಿಸಿದರು. ಇದು ನತದೃಷ್ಟ ವಿಧವೆಯರ ಪಾಡು ಮತ್ತು ವಿಧವಾ ಮರುವಿವಾಹವನ್ನು ಕುರಿತು ಜನರು ಚರ್ಚೆಗಳಲ್ಲಿ ತೊಡಗುವಂತೆ ಮಾಡಿತು. ಸಮಾಜದಲ್ಲಿ ಮಹಿಳೆಯರ ದೇಹಗಳು ಮಾತ್ರವೇ ಎಲ್ಲ ಪಾಪಕೂಪಗಳ ಆಗರವೇ? ಈ ಯಾವ ಪಾಪಗಳೂ ಪುರುಷರ ದೇಹದಲ್ಲಿ ಇಲ್ಲವೇ? ಎಂದು ಆಕೆ ಪ್ರಶ್ನಿಸಿದರು. ಪುರುಷಪ್ರಧಾನ ವ್ಯವಸ್ಥೆಯ ಸಮಾಜದ ಸಾಂಸ್ಕೃತಿಕ ಪೂರ್ವಾಗ್ರಹಗಳನ್ನೂ, ಸಾಮಾಜಿಕ ವ್ಯವಸ್ಥೆಗಳನ್ನು ಪ್ರಶ್ನಿಸಿದವರಲ್ಲಿ ತಾರಾಬಾಯಿ ಮೊದಲಿಗರಾಗಿದ್ದಾರೆ.

ಪಶ್ಚಿಮ ಭಾರತದಲ್ಲಿ ಮಹಾದೇವ ಗೋವಿಂದ ರಾನಡೆಯವರು ರಾಷ್ಟ್ರೀಯ ಸಾಮಾಜಿಕ ಸಮ್ಮೇಳನ ಒಂದನ್ನು ಆಯೋಜಿಸಿ ಸಮಾಜ ಸುಧಾರಣೆಯ ವಿಷಯವನ್ನು ಮುಖ್ಯ ಪ್ರಸ್ತಾಪವನ್ನಾಗಿ ಇಟ್ಟರು. ಅದೇ ರೀತಿ ಬಾಲವಿಧವೆಯರು ಶಿಕ್ಷಣ ಪಡೆದು ಬಾಲಕಿಯರ ಶಾಲೆಗಳಲ್ಲಿ ಅಧ್ಯಾಪಿಕೆಯರಾಗಲು ಸೂಕ್ತವಾಗುವಂತಹ ಸಂಸ್ಥೆಗಳನ್ನು ಪೂನಾದಲ್ಲಿ ಸ್ಥಾಪಿಸುವ ಮೂಲಕ ಧೋಂಡೂ ಕೇಶವ ಕರ್ವೆಯವರು ವಾಸ್ತವದ ಪರಿಹಾರವನ್ನು ಒದಗಿಸಿದರು. ದಕ್ಷಿಣ ಭಾರತದಲ್ಲಿ ಆರ್. ವೆಂಕಟರತ್ನಂ ನಾಯ್ಡುರವರು ದೇವದಾಸಿ ಪದ್ಧತಿಯನ್ನು ವಿರೋಧಿಸಿ ಕೆಲಸ ಮಾಡಿದರು. ಸಮಾಜ ಸುಧಾರಕರೆಲ್ಲರೂ ಬಹುಮಟ್ಟಿಗೆ ವಿವಾಹ, ಸ್ತ್ರೀ ಶಿಕ್ಷಣಗಳನ್ನು ಪ್ರಧಾನ ಮಹಿಳಾ ಸಂಗತಿಗಳೆಂದು ಭಾವಿಸಿದರೆಂಬುವುದು ಗಮನಾರ್ಹ. ೧೯ನೆಯ ಶತಮಾನದ ಈ ಎಲ್ಲಾ ಸುಧಾರಣಾವಾದಿಗಳೂ ಕ್ರಿಯಾಶೀಲ ಚಳುವಳಿಗಾರರಾಗಿದ್ದರೆಂಬುವುದು ಬಂದು ವಿಶೇಷ. ಲಿಂಗವ್ಯವಸ್ಥೆಯ ಆಯಾಮದ ಚಿಂತನೆಗಳಿಗೆ ಅವರ ಸ್ವಂತ ಅನುಭವಗಳೇ ಆಧಾರವಾಗಿದ್ದವು.[೩೬]

## ಪಂಡಿತ ರಮಾಬಾಯಿ

೧೮೫೮ರಲ್ಲಿ ಕಾರ್ಕಳ ತಾಲೂಕಿನ ಚಿಕ್ಕ ಹಳ್ಳಿಯಲ್ಲಿ ಜನಿಸಿದ ರಮಾಬಾಯಿಯವರು ಪಂಡಿತ ರಮಾಬಾಯಿ ಸರಸ್ವತಿಯಾದ ಹಾದಿಯಲ್ಲಿ ದಾಟಿದ್ದ ಕಷ್ಟ ಕೋಟಲೆ, ನೋವುಗಳು ಅವರ ಅನುಭವವನ್ನು ಪಕ್ವಗೊಳಿಸಿ ಜಾಗತಿಕವಾಗಿ ಅವರನ್ನು ಗುರುತಿಸುವಂತೆ ಮಾಡಿದ್ದವು. ಹೆಣ್ಣು ಮಕ್ಕಳು ಪುರಾಣ ಗ್ರಂಥಗಳನ್ನು

ಅಭ್ಯಾಸಿಸುವುದೇ ಅಪರಾಧವೆಂದು ತಿಳಿದಿದ್ದ ಕಾಲದಲ್ಲಿ ಗುರುಕುಲದಂತಹ ಮನೆಯಲ್ಲಿ, ಹೆತ್ತವರಿಂದಲೇ (ತಂದೆಯಿಂದ) ದೊರೆತ ಸಂಸ್ಕೃತ ಪಾಠ ರಮಾಬಾಯಿಯವರ ಭವಿಷ್ಯದ ಜೀವನಕ್ಕೆ ಅಡಿಗಲ್ಲಾಗಿತ್ತು. ಅಂದಿನ ಸಮಾಜದಲ್ಲಿದ್ದ ಜಾತಿಪದ್ಧತಿಯ ಕೆಟ್ಟ ಆಚರಣೆಗಳು, ಹೆಣ್ಣಿಗೆ ದೊರಕದ ಶಿಕ್ಷಣ ಅವಕಾಶಗಳು, ಬಾಲ್ಯವಿವಾಹ, ಸತಿಪದ್ಧತಿಯಂತಹ ಹೆಣ್ಣುಮಕ್ಕಳ ಮೇಲಿನ ದೌರ್ಜನ್ಯಗಳು ಅವರ ಆಲೋಚನಾ ಗತಿಯನ್ನೇ ಬದಲಾಯಿಸಿದ್ದವು. ಆಕೆಯ ತಂದೆ ತಾಯಿ ತೀರಿಕೊಂಡಾಗ ಆಕೆಗೆ ಹದಿನಾರು ವರ್ಷಗಳಷ್ಟೇ ಪೂರೈಸಿದ ಅವಿವಾಹಿತೆಯಾದ ಹುಡುಗಿಗೆ ಸಂಸ್ಕೃತವನ್ನು ಓದುವಷ್ಟು ವಿದ್ಯಾಭ್ಯಾಸವಾಗಿತ್ತು. ಆಕೆ ತನ್ನ ಸಹೋದರನೊಡನೆ ಸೇರಿಕೊಂಡು ಭಾರತದ ಉದ್ದಗಲಕ್ಕೂ ಪ್ರವಾಸ ಮಾಡುತ್ತಾ ಸ್ತ್ರೀ ಶಿಕ್ಷಣ ಹಾಗೂ ಸಮಾಜ ಸುಧಾರಣೆಯ ವಿಷಯಗಳ ಬಗ್ಗೆ ಉಪನ್ಯಾಸಗಳನ್ನು ನೀಡಿದರು. ಕಲ್ಕತ್ತಾದ ಗಣ್ಯರು ರಮಾಬಾಯಿಯವರನ್ನು ವಿದ್ಯಾಧಿದೇವತೆ 'ಸರಸ್ವತಿ' ಎಂದು ಪ್ರಶಂಸೆ ಮಾಡಿದರು. ಬ್ರಾಹ್ಮಣ ಪಂಡಿತರಂತೆ ಜ್ಞಾನನಿಧಿಯಾದ ಆಕೆಯನ್ನು 'ಪಂಡಿತಾ' ಎಂದು ಕರೆದರು. ಆದರೆ ಈ ರೀತಿಯ ಪ್ರಶಂಸೆಯನ್ನು ಸಹಿಸದ ಹಲವರು ಅಸಮಧಾನಗಳಿಂದ ಆಕೆಯ ಭಾಷಣಗಳಲ್ಲಿ ಗಲಾಟೆ ಎಬ್ಬಿಸಿದ್ದೂ ಉಂಟು.

ರಮಾಬಾಯಿಯವರ ಸೋದರ ಕಲ್ಕತ್ತಾದಲ್ಲಿ ನಿಧನಗೊಂಡ ನಂತರ ಆತನ ಆಪ್ತಮಿತ್ರ ಬಿಪಿನ್ ಬಿಹಾರಿ ಬೋಸ್ ಮೇಧಾನಿಯನ್ನು ಮದುವೆಯಾದ ರಮಾಬಾಯಿ, ತಮ್ಮ ಇಪ್ಪತ್ತ ಮೂರನೆಯ ವಯಸ್ಸಿನಲ್ಲಿ ಹೆಣ್ಣು ಮಗುವಿನ ತಾಯಿಯಾದರು. ಆದರೆ ದುರದೃಷ್ಟವಶಾತ್ ಪತಿಯನ್ನು ಕಳೆದುಕೊಂಡದ್ದು ಆಕೆಗೆ ನುಂಗಲಾರದ ತುತ್ತಾಯಿತು. ಪೂನಾಗೆ ಹಿಂದಿರುಗಿದ ರಮಾಬಾಯಿ ಸಮಾಜ ಸುಧಾರಕರೊಂದಿಗೆ ಗುರುತಿಸಿಕೊಂಡು ಆರ್ಯ ಮಹಿಳಾ ಸಮಾಜದಲ್ಲಿ ಕಾರ್ಯ ನಿರತರಾಗಿ ಮಹಿಳೆಯರ ಶಿಕ್ಷಣದ ಬಗ್ಗೆ ತಮ್ಮ ಗಮನಹರಿಸತೊಡಗಿದರು. ಪೂನಾದಲ್ಲಿ ಹಂಟರ್ ಆಯೋಗದೆದುರು ಮಹಿಳಾವೈದ್ಯರು ಹಾಗೂ ಅಧ್ಯಾಪಿಕೆಯರ ತೀವ್ರ ಅಗತ್ಯವನ್ನು ನಿದರ್ಶನ ಸಹಿತವಾಗಿ ವಿವರಿಸಿದರು. ಸ್ವತ: ತಾನೇ ಇಂಗ್ಲಿಷ್ ಕಲಿಯಬೇಕೆಂದೂ, ವೈದ್ಯಕೀಯವನ್ನು ಅಭ್ಯಸಿಸಬೇಕೆಂದೂ ತೀರ್ಮಾನಿಸಿದ ರಮಾಬಾಯಿ ಇಂಗ್ಲೆಂಡಿನ ವಾಂಟೇಜ್ ಇನ್ ಆಕ್ಸಫರ್ಡ್ ಮೂಲದ ಆಂಗ್ಲೋ ಕೆಥೋಲಿಕ್ ಕಮ್ಯುನಿಟಿ ಆಫ್ ಸೈಂಟ್ ಮೇರಿ ದ ವರ್ಜಿನ್ ಸದಸ್ಯರಲ್ಲಿ ನೆರವು ಕೋರಿದರು. ಅವರು ಕೆಲಮಟ್ಟಿನ ಧನಸಹಾಯವನ್ನೇನೋ ಮಾಡಿದರು. ಉಳಿದ ಖರ್ಚು ರಮಾಬಾಯಿಯವರೇ ಬರೆದ 'ಸ್ತ್ರೀ ಧರ್ಮ ನೀತಿ' ಎಂಬ ಕೃತಿಯ ಮಾರಾಟದಿಂದ ನಿರ್ವಹಣೆಯಾಗಬೇಕಾಯಿತು.

ರಮಾಬಾಯಿಯವರು ೧೮೮೩ರಲ್ಲಿ ತಮ್ಮ ಪುಟ್ಟ ಮಗಳನ್ನು ಮತ್ತು ಆನಂದಿಬಾಯಿ ಭಗತ್ ಎಂಬ ಜೊತೆಗಾರ್ತಿಯನ್ನು ಕೂಡಿಕೊಂಡು ಇಂಗ್ಲೆಂಡಿನತ್ತ ಪ್ರಯಾಣ ಬೆಳೆಸಿದರು. ಬಹುಬೇಗನೆ ಅವರೆಲ್ಲರೂ ವಾಂಟೇಜ್‌ನಲ್ಲಿ ವಾಸ್ತವ್ಯ ಹೂಡಿದ ಕೆಲವೇ ತಿಂಗಳಿನಲ್ಲಿ ಆನಂದಿಬಾಯಿ ಆತ್ಮಹತ್ಯೆ ಮಾಡಿಕೊಂಡು ಬಿಟ್ಟಳು. ಕಾಣದ ದೇಶದಲ್ಲಿ ಪುಟ್ಟ ಮಗಳೊಂದಿಗೆ ಒಂಟಿಯಾಗಿ ಬಿಟ್ಟ ರಮಾಬಾಯಿ ದಿಕ್ಕುಕಾಣದೆ ಬ್ಯಾಪ್ಟಿಸಂಗೆ

ಒಪ್ಪಿಕೊಂಡರು. ೧೮೮೬ರವರೆಗೆ ಶಿಕ್ಷಣವನ್ನು ಮುಂದುವರಿಸಿ ನಂತರದಲ್ಲಿ ಅಮೇರಿಕಾ ಸಂಯುಕ್ತ ಸಂಸ್ಥಾನಗಳು ಮತ್ತು ಕೆನಡಾದ ಉದ್ದಗಲಕ್ಕೂ ಸಂಚರಿಸಿ ಅಲ್ಲಿನ ಶಿಕ್ಷಣ ಸಂಸ್ಥೆಗಳನ್ನೂ, ಸೇವಾ ಸಂಸ್ಥೆಗಳನ್ನೂ ಸಂದರ್ಶಿಸಿ ಅವರ ಕಾರ್ಯ ವೈಖರಿಯನ್ನು ಅಭ್ಯಾಸ ಮಾಡಿದರು.

೧೮೮೯ರಲ್ಲಿ ಮುಂಬಯಿಯಲ್ಲಿ ವಿಧವೆಯರಿಗಾಗಿ 'ಶಾರದಾ ಸದನ' ವೆಂಬ ಶಾಲೆಯನ್ನು ತೆರೆದರು. ಸಮಾನತೆಯ ಆಶಯವನ್ನೇ ಹೊಂದಿದ್ದರೂ ಈ ಶಾಲೆಯ ನಿಯಮಗಳು ಬ್ರಾಹ್ಮಣರ ಕಟ್ಟುಪಾಡುಗಳನ್ನು ಅನುಸರಿಸುತ್ತಿರಲಿಲ್ಲ. ಸಮಾಜದ ಮೇಲ್ವರ್ಗದ ಹಿಂದೂ ವಿಧವೆಯರನ್ನು ಈ ಶಾಲೆ ಆಕರ್ಷಿಸಿತು. ಸಮಾಜ ಸುಧಾರಕರಾದ ಡಿ. ಕೆ. ಕರ್ವೆಯವರನ್ನು ವಿವಾಹವಾಗಿ, ಆನಂದಿಬಾಯಿ ಎಂದು ಹೆಸರು ಬದಲಿಸಿಕೊಂಡ ಗೋದೂಬಾಯಿ ಕೂಡಾ ಈ ಶಾಲೆಯ ವಿದ್ಯಾರ್ಥಿನಿಯಾಗಿದ್ದರು. ಶಾರದಾ ಸದನವು ಒಂದು ವರ್ಷ ಪೂರೈಸುವಷ್ಟರಲ್ಲಿ ಟೀಕೆಗಳು ಲೇಖನಗಳ ರೂಪದಲ್ಲಿ ಮುಂಬಯಿ ಪತ್ರಿಕೆಗಳಲ್ಲಿ ಬರತೊಡಗಿದವು. ಆರ್ಥಿಕ ಒತ್ತಡಗಳಿಂದಾಗಿ ಶಾಲೆಯನ್ನು ಮುಂಬಯಿಯಿಂದ ಪೂನಾಗೆ ಸ್ಥಳಾಂತರಿಸುವುದು ಅನಿವಾರ್ಯವಾಯಿತು. ಬಾಲಗಂಗಾಧರ ತಿಲಕರು ಹೊರಡಿಸುತ್ತಿದ್ದ 'ಕೇಸರಿ' ಪತ್ರಿಕೆಯು ವಿಧವೆಯರನ್ನು ಜಾತಿಗೆಡಿಸಿ ಕ್ರೈಸ್ತರನ್ನಾಗಿಸುವ ಹುನ್ನಾರ ಎಂದು ಟೀಕಾಪ್ರಹಾರ ಮಾಡಿತು. ನಂತರದಲ್ಲಿ ೧೮೯೩ರ ವೇಳೆಗೆ ಇಪ್ಪತ್ತೈದು ಬಾಲಕಿಯರು ತ್ಯಜಿಸಿದ್ದು ಮಾತ್ರವಲ್ಲದೆ, ಆಶ್ರಯದ ಅಗತ್ಯ ಬೇಡಿ ಬಂದ ವಿಧವೆಯರೂ ಶಾಲೆಯಲ್ಲಿರಲಿಲ್ಲ.[೩೭]

೧೮೮೨ರಲ್ಲಿ ಪಶ್ಚಿಮ ಭಾರತದ ಭಾಗದಲ್ಲಿ ಪಂಡಿತಾ ರಮಾಬಾಯಿಯವರು ಬಂದು ನೆಲೆಸಿದಾಗ, ನ್ಯಾಯಮೂರ್ತಿ ರಾನಡೆ ಹಾಗೂ ಆತನ ಗೆಳೆಯರು ಕೂಡಿ 'ಆರ್ಯ ಮಹಿಳಾ ಸಮಾಜ'ವನ್ನು ಸ್ಥಾಪಿಸಲು ನೆರವಾದರು. ಈ ಸಂಸ್ಥೆಯ ಮುಖ್ಯ ಧ್ಯೇಯ ಮಹಿಳಾ ಜಾಗೃತಿ ಮತ್ತು ಉದ್ಧಾರಗಳೇ ಆಗಿದ್ದು ನ್ಯಾಯಮೂರ್ತಿ ರಾನಡೆಯವರ ಪತ್ನಿ ರಮಾಬಾಯಿ ಈ ಸಂಸ್ಥೆಗೆ ಬೆನ್ನೆಲುಬಾದರು. ಸಮಾಜದ ಎಲ್ಲಾ ವರ್ಗಗಳ ಮಹಿಳೆಯರಿಗೂ ಉಪಯುಕ್ತವಾಗುವ ರೀತಿಯಲ್ಲಿ ಕಾರ್ಯಕ್ರಮಗಳನ್ನು ಹೊಂದಿರಬೇಕೆಂದು ಆಶಿಸಿದ ಇವರು ಮಹಿಳೆಯರು ಪರಸ್ಪರ ಭೇಟಿಯಾಗಿ ಗೆಳತಿಯರಾಗಲು ಅನುಕೂಲವಾಗುವ ರೀತಿಯಲ್ಲಿ ಮನೆಮನೆಗಳಲ್ಲಿ ಸಾಪ್ತಾಹಿಕ ಉಪನ್ಯಾಸಗಳನ್ನು ಏರ್ಪಡಿಸಲು ಉಪಾಯ ಮಾಡಿದರು.

ಹೀಗೆ ಆತ್ಮವಿಶ್ವಾಸವನ್ನು ಗಳಿಸುತ್ತಾ ಹೋದಂತೆ ಹೊಸದಾಗಿ ವಿದ್ಯಾವತಿಯರಾದ ಹೆಣ್ಣು ಮಕ್ಕಳು ಮುಂದೆ ತಾವೇನು ಮಾಡಬೇಕೆಂದು ನಿರ್ಧರಿಸಲು ಸಮರ್ಥರಾಗುತ್ತಾರೆ ಎಂಬುವುದು ಆಕೆಯ ಎಣಿಕೆಯಾಗಿತ್ತು. ಆರ್ಯ ಮಹಿಳಾ ಸಮಾಜದ ಮೂಲಕ ಅನಾಥ ಹಾಗೂ ವಿಧವಾ ಸ್ತ್ರೀಯರ ರಕ್ಷಣೆಗಾಗಿ, ತನ್ನ ಪ್ರಯತ್ನ ಮುಂದುವರಿಸಿ ೧೯೦೦ರ ವೇಳೆಗೆ ಶಾರದಾ ಸದನವು ಎಂಬತ್ತು ಮಂದಿ ಮಹಿಳೆಯರಿಗೆ ಅಧ್ಯಾಪಕಿಯರಾಗಿ, ನರ್ಸ್ ಗಳಾಗಿ ತಮ್ಮ ಅನ್ನವನ್ನು ತಾವು ಗಳಿಸುವ ಸಾಮರ್ಥ್ಯ ಪಡೆಯಲು ತಕ್ಕ ತರಬೇತಿಯನ್ನು ನೀಡಿ ದಾರಿ ತೋರಿಸಿತ್ತು.[೩೮] ೧೮೯೭ರಲ್ಲಿ ಬಂದ ಬರಗಾಲದ ವೇಳೆ ಪೂನಾದಿಂದ ಮೂವತ್ತು ಮೈಲಿಗಳಷ್ಟು ದೂರದ ಖೇಡಗಾಂವ್ ನಲ್ಲಿ ರಮಾಬಾಯಿ ತಮ್ಮ ಎರಡನೆಯ ಶಾಲೆ ಮುಕ್ತಿಯನ್ನು

ಆರಂಭಿಸಿದರು. ಬರಗಾಲದ ಕಷ್ಟಕ್ಕೆ ಸಿಲುಕಿದ ಹೆಂಗಸರನ್ನೂ, ಮಕ್ಕಳನ್ನೂ ರಮಾಬಾಯಿ ತಮ್ಮ ಶಾರದಾ ಸದನಕ್ಕೆ ಸೇರಿಸಿಕೊಳ್ಳತೊಡಗಿದರು. ಅಲ್ಲಿ ಅವರಿಗೆ ಊಟ, ವಸತಿ, ಬಟ್ಟೆಬರೆಗಳನ್ನು ನೀಡಿದರು. ಪೂನಾದಲ್ಲಿ ಬರಗಾಲದ ದುರ್ದೈವಿಗಳನ್ನು ಇರಿಸಿಕೊಳ್ಳುವುದು ಸಾಧ್ಯವಾಗದೆ ಹೋದಾಗ ರಮಾಬಾಯಿ ಖೇಡಾಗಾಂವಿನಲ್ಲಿ ತಾವು ಖರೀದಿಸಿದ್ದ ನೂರು ಎಕರೆ ಜಮೀನಿನಲ್ಲಿ ಅವರಿಗೆ ವಸತಿಯನ್ನು ಕಲ್ಪಿಸಲು ನಿರ್ಧರಿಸಿದರು. ರಮಾಬಾಯಿವರ ಸಂಸ್ಥೆಯಾದ 'ಮುಕ್ತಿಗೆ' ಆರ್ಥಿಕ ನೆರವು ಅಮೆರಿಕಾದಿಂದ ದೊರೆಯುತ್ತಿತ್ತು.

ಶಿಕ್ಷಣದ ಬಗೆಗೆ ರಮಾಬಾಯಿಯವರ ಕೊಡುಗೆಯನ್ನು ಆಕೆಯ ಸಮಕಾಲೀನರು ಗೌರವದಿಂದಲೇ ಗುರುತಿಸಿದರಾದರೂ, ಕ್ರೈಸ್ತಧರ್ಮದ ಜೊತೆಗಿನ ಆಕೆಯ ಸಂಬಂಧದಿಂದಾಗಿ ಸ್ತ್ರೀ ಶಿಕ್ಷಣಕ್ಕೆ ವಿಶೇಷವಾಗಿ ದುಡಿಯುವುದರಲ್ಲಿ ಆಕೆ ತೊಡಕುಗಳನ್ನೇ ಎದುರಿಸಬೇಕಾಯಿತು. ಬಹುಪಾಲು ವಿದ್ಯಾರ್ಥಿಗಳು ಮೇಲ್ವರ್ಗದವರಾದದ್ದೂ ಕೂಡಾ ಈ ಕೋಪಕ್ಕೆ ತುಪ್ಪವನ್ನು ಸುರಿಯುತ್ತಿತ್ತು ಎಂದು ರಮಾಬಾಯಿ ಗಮನಿಸಿದ್ದರು. ತನ್ನ ಕಾರ್ಯವ್ಯಾಪ್ತಿಯು ಕೇವಲ ಕೆಳಜಾತಿಯ ಮಹಿಳೆಯರಿಗಷ್ಟೇ ಸೀಮಿತವಾಗಿದ್ದರೆ ಈ ಕೋಪಿಷ್ಠರಾದ ಗಂಡಸರದೇನೂ ಅಭ್ಯಂತರವಿರಲಿಲ್ಲ ಎಂದು ಆಕೆ ಟೀಕಿಸಿದರು. ಇಂಥಹ ಅನೇಕ ಮೊನಚು ಹಾಗೂ ಜನರಿಗೆ ಅಪ್ರಿಯವೆನಿಸುವ ಟೀಕೆಗಳಿಗೆ ಪದೇಪದೇ ಒಳಗಾಗುತ್ತಿದ್ದ ಸಂಗತಿಗಳು ಹಲವಾರು ಇದ್ದವು.

ರುಕ್ಮಾಬಾಯಿ ಎಂಬಾಕೆಯ ಪ್ರಸಂಗದಲ್ಲಿ ರಮಾಬಾಯಿಯವರು ಬ್ರಿಟಿಷ್ ಹಾಗೂ ಭಾರತೀಯ ಮಹಿಳೆಯರಿಬ್ಬರ ಮೇಲೂ ಹರಿಹಾಯ್ದರು. ಬಾಲ್ಯದಲ್ಲಿಯೇ ವಿವಾಹವಾದ ರುಕ್ಮಾಬಾಯಿ ವಯಸ್ಸಿಗೆ ಬಂದಾಗ ತನ್ನ ಗಂಡನಾದವನೊಂದಿಗೆ ಹೆಂಡತಿಯಾಗಿ ಸಂಸಾರ ನಡೆಸಲು ನಿರಾಕರಿಸಿದಾಗ ಆಕೆಗೆ ವಿಚಾರಣೆಗೆ ಗುರಿಪಡಿಸಲಾಯಿತಲ್ಲದೆ ಜೀವಾವಧಿ ಶಿಕ್ಷೆಯನ್ನು ವಿಧಿಸಲಾಯಿತು. ಆದರೆ ಆಕೆಯನ್ನು ಜೈಲಿನಲ್ಲೆಂದೂ ಇಟ್ಟಿರಲಿಲ್ಲ. ಈ ಬಗ್ಗೆ ರಮಾಬಾಯಿ ಹೀಗೆ ಬರೆದರು 'ಈಗ ನಮ್ಮೆದುರಿಗಿರುವ ಒಂದು ಮಹಾದಾಶ್ಚರ್ಯವೆಂದರೆ ಯಾವುದೇ ರಕ್ಷಣೆ ಇಲ್ಲದ ರುಕ್ಮಾಬಾಯಿಯಂಥಹ ಹೆಂಗಸೊಬ್ಬಳು ಶಕ್ತಿಮತ್ತವಾದ ಹಿಂದೂ ನಿಯಮವನ್ನೂ, ಅಧಿಕಾರಮತ್ತವಾದ ಬ್ರಿಟಿಷ್ ಸರಕಾರವನ್ನೂ ಧೈರ್ಯದಿಂದ ಪ್ರಶ್ನಿಸಿ ತನ್ನ ಧ್ವನಿಯೆತ್ತಿದ್ದಾಳೆ. ಅಸಹಾಯಕ ಹೆಂಗಸೊಬ್ಬಳನ್ನು ರಕ್ಷಿಸಲಾಗದಕ್ಕೆ ಇಂಗ್ಲಿಷ್ ಸರಕಾರವನ್ನೇನೂ ನಾವು ದೂಷಿಸುವಂತಿಲ್ಲ. ಏಕೆಂದರೆ ಭಾರತದ ಪುರುಷ ಪ್ರಜೆಗಳೊಂದಿಗೆ ತಾನು ಮಾಡಿಕೊಂಡ ಒಪ್ಪಂದವನ್ನಷ್ಟೇ ಅದು ಪರಿಪಾಲಿಸುತ್ತದೆ'. ರಮಾಬಾಯಿಯವರದು ಅಸಾಧಾರಣ ಪ್ರಯತ್ನಗಳಾಗಿದ್ದು, ಇವರು ವಿಧವೆಯರನ್ನು ವಿದ್ಯಾವಂತರನ್ನಾಗಿಸುವ ಪ್ರಯತ್ನ ನಡೆಸಿದ ಮೊದಲ ಭಾರತೀಯರಾಗಿದ್ದಾರೆ.[೨೯]

### ಶ್ರೀ ನಾರಾಯಣ ಗುರು

೨೮ನೇ ಆಗಸ್ಟ್ ೧೮೫೪ರಲ್ಲಿ ಜನಿಸಿದ ಶ್ರೀ ನಾರಾಯಣ ಗುರುಗಳು ಸಮಾಜದ ಅಂಧಶ್ರದ್ಧೆಗಳನ್ನು ತಿರಸ್ಕರಿಸಿ ಜಾಗೃತಿ ಮೂಡಿಸಿದರು. ತಿರುವಾಂಕೂರಿನಲ್ಲಿ ಸವರ್ಣರಿಗೆ ಮಾತ್ರ ಮನುಷ್ಯನಂತೆ ಬಾಳಲು

ಅಧಿಕಾರವಿದ್ದು, ವರ್ಣ ವ್ಯವಸ್ಥೆಯೊಳಗಿದ್ದ ಶೂದ್ರ ನಾಯರ ಬಾಳು ಕೂಡಾ ಮೂರಾಬಟ್ಟೆಯಾಗಿತ್ತು. 'ಮುಂಡುಕೊಡು'ಪದ್ಧತಿಯಿಂದ ಅನೈತಿಕವನ್ನು, ನೈತಿಕವೆಂದು ಹೇಳಿಕೊಂಡು ಶರೀರ ಸಂಬಂಧ ಇಟ್ಟುಕೊಳ್ಳುವ ಬ್ರಾಹ್ಮಣರ ಕಾಮತೃಷೆಗಳಿಗೆ ತಮ್ಮ ಹೆಣ್ಣುಮಕ್ಕಳನ್ನು ಒಡ್ಡುವ ನೀಚ ಸಂಪ್ರದಾಯವನ್ನು ಸಹಿಸಿಕೊಳ್ಳುವ ಅಗೌರವದ ಬಾಳು ನಾಯರ್ ಮತ್ತು ಅಂಬಳವಾಸಿಗಳದ್ದಾಗಿತ್ತು. ಮುಂಡುಕೊಡು ಅಂದರೆ ನಾಯರ್ ಮತ್ತು ಅಂಬಳವಾಸಿ ಕನ್ನೆಯರನ್ನು ನಂಬೂದರಿಗಳು ತಮ್ಮ ಸ್ವಾಮಿತ್ವಕ್ಕೆ ಒಳಪಡಿಸಿ, ಮೀಸಲಾಗಿಟ್ಟುಕೊಳ್ಳುವ ವಿಧಿಯಲ್ಲಿ ಕನ್ಯೆಗೆ ಮತ್ತು ಆಕೆಯ ಕುಟುಂಬದವರಿಗೆ ಹಾಗೂ ಆ ನಂಬೂದಿರಿಯ ಸಂಬಂಧಿಗಳಿಗೆ ಮುಂಡು ಬಟ್ಟೆಗಳನ್ನು ಕೊಡುವ ವಿಧಿ. ಮುಂಡುಕೊಡು ವಿಧಿಯಿಂದ ಆ ಕನ್ಯೆ ನಂಬೂದರಿಗೆ ಮೀಸಲಾಗುತ್ತಾಳೆಯೇ ವಿನ: ಹೆಂಡತಿಯಾಗುತ್ತಿರಲಿಲ್ಲ. ದೈಹಿಕವಾಗಿ ಮದುವೆಗೆ ಸಿದ್ಧಳಾಗಿದ್ದಾಳೆ ಎಂದು ಸಾರ್ವತ್ರಿಕವಾಗಿ ಜಾಗೀರುಗೊಳಿಸುವ ಔತಣವನ್ನು ನಾರಾಯಣಗುರುಗಳು ಖಂಡಿಸಿದರು.

ಕೇರಳದ ನಾಯರರು, ಈಳವರು ಮೊದಲಾದ ಜನಾಂಗಗಳಲ್ಲಿ ಹನ್ನೆರಡು ವರ್ಷದೊಳಗಿನ ಬಾಲಕಿಯರಿಗೆ 'ತಾಳಿಕಟ್ಟು ಕಲ್ಯಾಣ' ಕಡ್ಡಾಯವಾಗಿತ್ತು. ನಾರಾಯಣ ಗುರುಗಳು ಇದನ್ನು ಅಂಧಶ್ರದ್ಧೆ ಎಂದರು. ವಿವಾಹ ಪದ್ಧತಿಯನ್ನು ಸರಳಗೊಳಿಸಿ ಮದುವೆಯ ಆಡಂಬರಗಳನ್ನು ಬಿಟ್ಟು, ಸರಳ ಧಾರ್ಮಿಕ ವಿಧಿ ಮತ್ತು ವಿಧಾನಗಳಿಂದ ಆಚರಿಸಲು ಕರೆಕೊಟ್ಟರು. ಬಾಲ್ಯವಿವಾಹವೆಂಬ ಸಾಮಾಜಿಕ ಪಿಡುಗಿನ ನಿಷೇಧಕ್ಕೆ ಕರೆಕೊಟ್ಟರು. ಯಾವುದೇ ಸಮಾಜವು ಹಳೆಯ ಅನಗತ್ಯ ಜಾಡ್ಯಗಳನ್ನು ಬಿಟ್ಟು ಕೊಡಲು ಮತ್ತು ಹೊಸತನವನ್ನು ರೂಢಿಸಿಕೊಳ್ಳಲು ಶಿಕ್ಷಣವೇ ಏಕಮಾತ್ರ ಮಾಧ್ಯಮ ಎನ್ನುವುದು ನಾರಾಯಣ ಗುರುಗಳ ಖಚಿತ ಅಭಿಪ್ರಾಯವಾಗಿತ್ತು. ಹೆಣ್ಣು ಸುಸಂಸ್ಕೃತ, ಸುಶೀಲ, ಪ್ರಜ್ಞಾಪೂರಿತ, ಕರ್ತವ್ಯ ನಿಷ್ಠೆ, ಪರಿವರ್ತನಶೀಲ ವಿದ್ಯಾವಂತೆ ಆಗಬೇಕು. ಆಗ ವಿವೇಕವುಳ್ಳ ಸಾಂಸ್ಕೃತಿಕ ಕೌಟುಂಬಿಕ ಹಿನ್ನೆಲೆಯುಳ್ಳ ಉತ್ತಮ ಸಮಾಜದ ನಿರ್ಮಾಣವಾಗುವುದು. ಹೀಗಾದಾಗ ಮಾತ್ರ ಆಧುನಿಕ ಸಾಮಾಜಿಕ ಪುನರುತ್ಥಾನ ಹಾಗೂ ಪ್ರಗತಿಯ ಸಾಧ್ಯತೆಯಾಗುವುದು ಎಂದು ನಾರಾಯಣ ಗುರುಗಳು ನಂಬಿದ್ದರು.[೮೦]

## ಕುದ್ಮುಲ್ ರಂಗರಾವ್

ದಕ್ಷಿಣ ಕನ್ನಡ ಜಿಲ್ಲೆಯ ಅತ್ಯಂತ ಗೌರವಾರ್ಹ ಹಾಗೂ ಪ್ರತಿಷ್ಠಿತ ಸಾರಸ್ವತ ಬ್ರಾಹ್ಮಣ ಕುಲದಲ್ಲಿ ೨೯-೬-೧೮೫೯ರಂದು ಜನಿಸಿದ ಕುದ್ಮುಲ್ ರಂಗರಾಯರು ಹರಿಜನೋದ್ಧಾರಕ ಎಂದು ಹೆಸರುವಾಸಿಯಾಗಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಸ್ಪೃಶ್ಯ ಪಂಗಡದವರು ಹಾಗೂ ಗುಡ್ಡಗಾಡು ಜನಾಂಗದವರು, ಒಂದು ತುತ್ತು ಅನ್ನಕ್ಕಾಗಿ ಮಾತ್ರವಲ್ಲ ಗೇಣು ಬಟ್ಟೆಗಾಗಿ, ಅನ್ಯರ ಹೊಲ, ಜಮೀನು, ಕಾಡು ಗುಡ್ಡಗಳಲ್ಲಿ ಅರೆಬಟ್ಟೆ ಉಟ್ಟುಕೊಂಡು, ದಿನವಿಡೀ ಪ್ರಾಣಿಗಳಂತೆ ದುಡಿಯುವುದರ ಜೊತೆಗೆ ಹಲವಾರು ಮೂಢನಂಬಿಕೆಗಳಿಗೆ ಕಟ್ಟು ಬಿದ್ದು ಸಮಾಜದಿಂದ ಬಲು ದೂರವಾಗಿ ಅಸ್ಪೃಶ್ಯರಾಗಿ ಜೀವಿಸುತ್ತಿದ್ದರು. ಇವರನ್ನು

ಎಲ್ಲಾ ಸಾಮಾಜಿಕ ಪಿಡುಗುಗಳಿಂದ ಹಾಗೂ ನಿತ್ಯ ಶೋಷಣೆ, ಬಡತನದ ಬವಣೆಗಳಿಂದ ವಿಮುಕ್ತಿಗೊಳಿಸುದಕ್ಕಾಗಿ ರಂಗರಾಯರು ಶ್ರಮಿಸಿದರು. ತಳಸಮುದಾಯದಲ್ಲಿ ನವಸ್ಫೂರ್ತಿ ಮತ್ತು ಸಾಮಾಜಿಕಪ್ರಜ್ಞೆ ಹಾಗೂ ಸಂಘಟನಾ ಮನೋಭಾವ ಉಂಟುಮಾಡಲು ರಂಗರಾಯರು ಶಕ್ತಿಮೀರಿ ದುಡಿದಿರುವರು. ರಂಗರಾಯರು ಸ್ಥಾಪನೆ ಮಾಡಿದ ಡಿ.ಸಿ ಮಿಶನ್ ಶಾಲೆಗಳಲ್ಲಿ, ಆಶ್ರಮ ಶಾಲೆಗಳಲ್ಲಿ ಓದು ಬರಹದ ಜೊತೆಗೆ ವೃತ್ತಿಪರ ಶಿಕ್ಷಣವನ್ನು ಕಲಿಸುವ ವ್ಯವಸ್ಥೆಯನ್ನು ಮಾಡಲಾಗಿತ್ತು. ಬಡಗಿ ಕೆಲಸ, ನೇಯ್ಗೆ ಕೆಲಸ, ತೋಟಗಾರಿಕೆ, ಕಸೂತಿ ಮತ್ತು ರೇಷ್ಮೆ ಹುಳಗಳನ್ನು ಸಾಕಿ ರೇಷ್ಮೆ ತಯಾರಿಸುವುದು ಮತ್ತು ತಕಲಿಯಲ್ಲಿ ನೂಲುಸುತ್ತುವುದು ಇತ್ಯಾದಿ ವೃತ್ತಿಪರ ತರಬೇತಿ ಶಿಕ್ಷಣವನ್ನು ಅವರಿಗೆ ಕೊಡಲಾಗುತ್ತಿತ್ತು. ರಂಗರಯರು ಸ್ಥಾಪಿಸಿದ ಕೆಲವು ಅನುದಾನಿತ (ಯೇಡೆಡ್) ಶಾಲೆಗಳು ನಂತರದಲ್ಲಿ ಸರಕಾರಿ ಲೇಬರ್ ಶಾಲೆಗಳಾಗಿ ಮಾರ್ಪಟ್ಟವು. ಮಂಗಳೂರು, ತೋಕೂರು, ಬೋಳೂರು, ದಡ್ಡಲ್ ಕಾಡ್, ಜಪ್ಪು, ಅತ್ತಾವರ, ತಲಪಾಡಿ, ಉಳ್ಳಾಲ, ಮುಲ್ಕಿ, ಉಡುಪಿ, ಬನ್ನಂಜೆ, ನೇಜಾರು, ಪುತ್ತೂರು ಮುಂತಾದ ಕಡೆ ಸ್ಥಾಪಿಸಿದ ಶಾಲೆಗಳನ್ನು ನಡೆಸಿಕೊಂಡು ಬರುಲು ಕಷ್ಟಸಾಧ್ಯವಾದಾಗ ಸರಕಾರದ ವಶಕ್ಕೆ ಒಪ್ಪಿಸಿದರು. ಮುಂದೆ ಅವುಗಳನ್ನು ಡಿ.ಸಿ ಮಿಶನ್ ವತಿಯಿಂದ ಬಂದರೂ ಆವುಗಳಲ್ಲಿ ಕೆಲವನ್ನು ಸರಕಾರಕ್ಕೆ ಒಪ್ಪಿಸಿದರು.[೪೧]

ಮಂಗಳೂರಿನಲ್ಲಿ ಶಿಕ್ಷಕ ವೃತ್ತಿಯಲ್ಲಿರುವಾಗಲೇ ರಾಯರಿಗೆ ಮಂಗಳೂರಿನ ಬ್ರಹ್ಮಸಮಾಜದ ಶಾಖೆಯ ಸ್ಥಾಪಕರಾದ ಅರಸಪ್ಪ ಮತ್ತು ಉಳ್ಳಾಲ ರಘುನಾಥಯ್ಯನವರ ನಿಕಟ ಸಂಪರ್ಕವಾಯಿತು. ಬ್ರಹ್ಮಸಮಾಜದ ಕ್ರಿಯಾಶೀಲ ಸದಸ್ಯರಾಗಿ ಮಂಗಳೂರಿನ ಪಂಚಮರ ಏಳಿಗೆಗಾಗಿ ದುಡಿದವರೆಂದರೆ ಕುದ್ಮುಲ್ ರಂಗರಾವ್.[೪೨] ಪಂಚಮರ ದುಸ್ಥಿತಿಯನ್ನು ಮನಗಂಡು ೧೮೯೭ರಿಂದ ೧೯೦೭ರವರೆಗೆ ಪಂಚಮರ ಶಿಕ್ಷಣ ಸಂಸ್ಥೆಗಳನ್ನು ತೆರೆದು, ಮಾರ್ಚ್ ೨೯, ೧೯೦೮ ರಂದು ಕಲ್ಕತ್ತಾದಿಂದ ಪ್ರಕಟವಾಗುತ್ತಿದ್ದ 'ಇಂಡಿಯನ್ ಮೆಸೆಂಜರ್' ಎಂಬ ಪತ್ರಿಕೆಯಲ್ಲಿ ಕುದ್ಮುಲ್ ರಂಗರಾಯರು, ತಾನು ಎದುರಿಸುತ್ತಿರುವ ಸಂಕಷ್ಟಗಳನ್ನು ಬಿಚ್ಚಿಟ್ಟಿದ್ದಾರೆ. 'ಪಂಚಮರ ಮಕ್ಕಳು ದಿನಾಲೂ ಶಾಲೆಗೆ ಹಾಜರಾಗುವಂತೆ ಮಾಡುವುದು ಕಷ್ಟಸಾಧ್ಯವಾದರೂ ವಿದ್ಯಾರ್ಥಿಗಳಿಗೆ ಹಣಕಾಸಿನ ಸೌಲಭ್ಯ ಒದಗಿಸಿ ಹಾಗೂ ಮಧ್ಯಾಹ್ನದ ಭೋಜನ ವ್ಯವಸ್ಥೆ ಮಾಡಿಸಿ ಶಾಲೆಗೆ ಹಾಜರಾಗುವಂತೆ ಪ್ರಯತ್ನಿಸುತ್ತಿದ್ದೇನೆ. ಪಂಚಮರ ಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಆಹಾರ ವ್ಯವಸ್ಥೆ ಕೈಗೊಳ್ಳದಿದ್ದರೆ ಶಾಲೆಗಳು ವೃದ್ಧಿ ಹೊಂದಲು ಸಾಧ್ಯವಿಲ್ಲ' ಎಂಬುವುದು ಅವರ ಅಭಿಪ್ರಾಯವಾಗಿತ್ತು.

ಕುದ್ಮುಲ್ ರಂಗರಾಯರ ಪತ್ನಿ ರುಕ್ಮಿಣಿ ಅಮ್ಮನವರು ಹೆಚ್ಚಿನ ವಿದ್ಯಾಭ್ಯಾಸ ಇಲ್ಲದಿದ್ದರೂ, ರಂಗರಾಯರಿಗೆ ಸಕಲ ರೀತಿಯಲ್ಲಿಯೂ ನೆರವಾಗಿ ಅವರ ಎಲ್ಲಾ ಸಾಮಾಜಿಕ ಹಾಗೂ ರಚನಾತ್ಮಕ ಕಾರ್ಯಕ್ರಮಗಳಲ್ಲೂ ಅವರು ಸಹಕರಿಸಿದ್ದಾರೆ. ಅವರ ನಿರಂತರ ಪ್ರೋತ್ಸಾಹ ಸಹಕಾರವೇ ರಂಗರಾಯರಿಗೆ ಮುಂದೆ ತನ್ನ ಸಮಾಜ ಸುಧಾರಣೆಯ ಕಾರ್ಯ ಹಾಗೂ ಧಾರ್ಮಿಕ ಚಟುವಟಿಕೆಗಳಿಗೆ ಪ್ರಾರಂಭಿಕ ಸ್ಫೂರ್ತಿ ಮತ್ತು ಚಾಲನೆ ಕೊಟ್ಟಿತು. ರಂಗರಾಯರ ಹೆಣ್ಣು ಮಕ್ಕಳಲ್ಲಿ ಹಿರಿಯವರಾದ ಶ್ರೀಮತಿ ಲಲಿತಾ ಬಾಯಿ ಇವರು

ದಿವಾನ್ ಬಹದೂರ್ ನಯಂಪಳ್ಳಿ ಸುಬ್ಬರಾವ್ ಇವರ ದ್ವಿತೀಯ ಧರ್ಮಪತ್ನಿ. ಅಂತೆಯೇ ಎರಡನೇ ಮಗಳು ಶ್ರೀಮತಿ ರಾಧಾಬಾಯಿಯವರು ಮದ್ರಾಸು ಸಂಸ್ಥಾನದ ಮಾಜಿಮಂತ್ರಿ, ಡಾ. ಸುಬ್ರಾಯನ್ ರವರನ್ನು ಅಂತರ್ಜಾತೀಯ ವಿವಾಹ ಪದ್ಧತಿಯಂತೆ ವಿವಾಹವಾಗಿದ್ದು, ಅವರ ಮದುವೆಯ ಪೌರೋಹಿತ್ಯವನ್ನು ಚಕ್ರವರ್ತಿ ರಾಜಗೋಪಾಲಾಚಾರ್ಯರು ವಹಿಸಿದ್ದು ವೈಶಿಷ್ಟ್ಯವಾಗಿತ್ತು. ಸಮಾಜಸೇವೆ, ಸ್ವಾತಂತ್ರ್ಯ ಹೋರಾಟಗಳಲ್ಲಿ ಪಾತ್ರ ವಹಿಸಿದ ಇವರು ಶಾಸನ ಸಭೆಯ ಸದಸ್ಯರಾಗಿದ್ದರು.[೪೩]

ಲಂಡನ್ ನಲ್ಲಿ ನಡೆದ ಮೊದಲ ರೌಂಡ್ ಟೇಬಲ್ ಕಾನ್ಫರೆನ್ಸ್ ನಲ್ಲಿ ಭಾಗವಹಿಸಿ ಮಹಿಳೆಯರಿಗೆ ಶೇಕಡಾ ೫೦ ಮೀಸಲಾತಿಗಾಗಿ ವಾದಿಸಿದ್ದರು. ೧೯೩೮ರಲ್ಲಿ ಕೌನ್ಸಿಲ್ ಸ್ಟೇಟ್ ಸದಸ್ಯತ್ವಕ್ಕೆ ಸ್ಪರ್ಧಿಸಿ ಗೆದ್ದು ಮೊದಲ ಸದಸ್ಯೆಯಾದರು.[೪೪] ರಂಗರಾಯರಿಗೆ ಹಿಂದೂ ಸಮಾಜದ ಕೆಲವೊಂದು ಸಾಮಾಜಿಕ ಭಿನ್ನತೆ, ಅಸ್ಪೃಶ್ಯತೆ ಹಾಗೂ ಜಾತೀಯತೆಯ ವಿವಿಧ ಸಾಮಾಜಿಕ ಅಸಮಾನತೆಗಳ ಬಗ್ಗೆ, ತೀವ್ರ ಅಸಮಧಾನವಿತ್ತು. ಮುಖ್ಯವಾಗಿ ಬಾಲ್ಯವಿವಾಹ, ವಿಧವಾ ಹಿಂದೂ ಸ್ತ್ರೀಯರಿಗೆ ಅಂದಿನ ಕಾಲದಲ್ಲಿ ಆಗುತ್ತಿದ್ದ ಸಾಮಾಜಿಕ ಅನ್ಯಾಯ, ದೇವದಾಸಿ ಪದ್ಧತಿ ಮತ್ತು ಹಿಂದೂ ಸಮಾಜದ ಸ್ತ್ರೀಯರನ್ನು ಅಂದಿನ ಸಮಾಜ ಪರಿಗಣಿಸುತ್ತಿದ್ದ ರೀತಿ ನೀತಿ ಇವೇ ಮುಂತಾದ ಸಾಮಾಜಿಕ ಪಿಡುಗುಗಳಿಂದ ರಂಗರಾಯರು ತೀವ್ರ ಚಿಂತೆಗೆ ಒಳಗಾಗಿದ್ದರು. ಅದಕ್ಕೆ ನಿಜವಾದ ಪರಿಹಾರ ಕಂಡುಹಿಡಿಯುವುದು ಅತೀ ಅಗತ್ಯ ಎಂದು ಮನಗಂಡ ಅವರು ಮೊದಲು ತನ್ನನ್ನು ತಾನೇ ಪರಿಶುದ್ಧ ಮಾಡಿಕೊಳ್ಳಬೇಕೆಂಬ ನಿರ್ಧಾರಕ್ಕೆ ಬಂದರು.

ಧಾರ್ಮಿಕ ಚಿಂತನೆ ಮತ್ತು ಸಮಾಜದ ಸೇವಾಕಾಂಕ್ಷೆಯ ಉದ್ದೇಶವನ್ನಿಟ್ಟುಕೊಂಡ ರಂಗರಾಯರು, ಸಮಾಜದಲ್ಲಿನ ಸಮಾನತೆಯನ್ನು ಸಾರುವ ಹಾಗೂ ರಚನಾತ್ಮಕ ಕೆಲಸಗಳಲ್ಲಿ ನಂಬಿಕೆ ಇಟ್ಟುಕೊಂಡಿರುವ ಬ್ರಹ್ಮ ಸಮಾಜವನ್ನು ಸೇರಿದರು. ಬ್ರಹ್ಮಸಮಾಜದ ಕ್ರೀಯಾಶೀಲ ಕಾರ್ಯಕರ್ತರಾಗಿ ಅದರ ನಿತ್ಯ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿದ್ದರು. ವಕೀಲಿ ವೃತ್ತಿಯಲ್ಲಿದ್ದಾಗ ರಂಗರಾಯರು ಸತ್ಯ, ನ್ಯಾಯಕ್ಕಾಗಿ ನ್ಯಾಯಾಲಯಗಳಲ್ಲಿ ಹೋರಾಡುತ್ತಿದ್ದರು.[೪೫] ೧೮೮೪ರಲ್ಲಿ ಉಪಾಸನಾ ಸಮಾಜವು ಪ್ರಾರ್ಥನಾ ಮಂದಿರವಾದ ಬ್ರಹ್ಮ ಮಂದಿರವನ್ನು ಸ್ಥಾಪಿಸಿತು. ೧೮೮೬ರಲ್ಲಿ ಯಾವುದೇ ವರ್ಗ, ವರ್ಣ ಮತ್ತು ಜಾತಿಬೇಧವಿಲ್ಲದೆ ಎಲ್ಲರಿಗೂ ಪ್ರವೇಶ ನೀಡಿತು. ಈ ವೇಳೆಗೆ ಒಟ್ಟು ಸದಸ್ಯರ ಸಂಖ್ಯೆ ಎಂಬತ್ತಕ್ಕೇರಿತು. ೧೮೮೮ರಲ್ಲಿ ಉಳ್ಳಾಲ ರಘುನಾಥಯ್ಯನವರು 'ಭ್ರಾತೃತ್ವ' ಎಂಬುವುದು ಇದರ ಮುಖ್ಯ ಧ್ಯೇಯವೆಂದು ಘೋಷಿಸಿದರು. ಆದರೆ ರಘುನಾಥಯ್ಯನವರ ಏಕೈಕ ಪುತ್ರರಾದ ಉಮಾನಾಥ ರಾವ್ ಸಿಡಿಲು ಬಡಿದು ಮರಣಹೊಂದಿದ್ದರಿಂದ ಸಮಾಜದ ಮೂಲಕ್ಕೆ ಬರಬಡಿದಂತಾಯಿತು. ೧೮೯೨ರಲ್ಲಿ ಉಪಾಸನಾ ಸಮಾಜದ ಸದಸ್ಯರ ಸಂಖ್ಯೆ ೪ಕ್ಕೆ ಇಳಿಯಿತು.[೪೬]

**ಕಾರ್ನಾಡ್ ಸದಾಶಿವ ರಾವ್**

ದಕ್ಷಿಣ ಕನ್ನಡ ಜಿಲ್ಲೆಯ ಧುರೀಣರಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಮುಂಚೂಣಿಯಲ್ಲಿದ್ದು, ಸರಳ ಸಜ್ಜನಿಕೆಯ ವ್ಯಕ್ತಿಯಾಗಿದ್ದು ಜಿಲ್ಲೆಯಲ್ಲಿ ರಾಜಕೀಯ ಜಾಗೃತಿ ಮೂಡಿಸಿದರು.[೪೭] ಕಾರ್ನಾಡ್ ಸದಾಶಿವರಾಯರ

ಪುತ್ರಿಯಾದ ಸುಗುಣಾ ಕಾರ್ನಾಡ್ ದೇಸಾಯಿಯವರು ತಮ್ಮ ತಂದೆಯವರ ಹೋರಾಟದ ಬದುಕಿನ ವಿವಿಧ ಮಜಲುಗಳನ್ನು ತೆರದಿಡುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಹಲವು ಸಾಮಾಜಿಕ ಸುಧಾರಣೆಗಳ ಹರಿಕಾರರಾಗಿದ್ದರು. ವೃತ್ತಿಯಲ್ಲಿ ವಕೀಲರಾಗಿದ್ದ ಕಾರ್ನಾಡರು ಸ್ತ್ರೀ ಶಿಕ್ಷಣ ಮತ್ತು ವಿಧವಾ ಪುನರ್ವಿವಾಹ ಚಟುವಟಿಕೆಗಳಲ್ಲಿ ಆಸ್ಥೆ ಹೊಂದಿದ್ದರು. ಬ್ರಹ್ಮಸಮಾಜದ ಮೂಲಕ ಜಾತಿಬೇಧಗಳ ನಿವಾರಣೆಗೆ ಶ್ರಮಿಸಿದರು ಮಾತ್ರವಲ್ಲದೆ ಜಿಲ್ಲೆಯ ಮಹಿಳೆಯರ ಸಬಲೀಕರಣದ ನಿಟ್ಟಿನಲ್ಲಿ ಹಲವಾರು ಕಾರ್ಯಗಳನ್ನು ಕೈಗೊಂಡಿರುವರು.[೪೮]

## ಅಮ್ಮೆಂಬಳ ಸುಬ್ಬರಾವ್ ಪೈ

ಸುಸಂಸ್ಕೃತ ಮನೆತನವೊಂದರಲ್ಲಿ ಜನಿಸಿ ಬಾಲ್ಯದ ತನ್ನ ಸಂಕಷ್ಟದ ದಿನಗಳ ನಡುವೆಯೂ ಸಮಾಜದ ಹಿತಚಿಂತನೆಯ ಸಂಸ್ಕಾರದಿಂದ ಬೆಳೆದು ಮುಂದೆ ಮಹಾನ್ ಸಾಧಕರಾಗಿ ಮೂಡಿಬಂದವರು ಅಮ್ಮೆಂಬಳ ಸುಬ್ಬರಾವ್ ಪೈ. ಆರ್ಥಿಕ ಸ್ವಾವಲಂಬನೆ ಮತ್ತು ಶಿಕ್ಷಣ ಅದರಲ್ಲಿಯೂ ಮಹಿಳಾ ಶಿಕ್ಷಣದಿಂದ ಮಾತ್ರ ಜನತೆ ಮತ್ತು ಸಮಾಜದ ಅಭಿವೃದ್ಧಿ ಸಾಧ್ಯ ಎನ್ನುವ ದೂರದೃಷ್ಟಿ ಹೊಂದಿದ್ದ ಅಮ್ಮೆಂಬಳ ಸುಬ್ಬರಾವ್ ಪೈಯವರು ಕೆನರಾ ಶಿಕ್ಷಣ ಸಂಸ್ಥೆಗಳ ಮತ್ತು ಕೆನರಾ ಬ್ಯಾಂಕ್ ಸ್ಥಾಪನೆಯ ಮೂಲಕ ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಗೆ ಶ್ರಮಿಸಿದ ಮಹಾನ್ ಸಾಧಕ.

ದಕ್ಷಿಣ ಕನ್ನಡ ಜಿಲ್ಲೆಯ ಮುಲ್ಕಿಯಲ್ಲಿ ಎ. ಉಪೇಂದ್ರ ಪೈ ದಂಪತಿಯ ನಾಲ್ಕನೇ ಸುಪುತ್ರನಾಗಿ ೧೮೫೨ರ ನವೆಂಬರ್ ೧೯ ರಂದು ಅಮ್ಮೆಂಬಳ ಸುಬ್ಬರಾವ್ ಪೈ ಜನಿಸಿದರು. ಇವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಿ.ಎ, ಬಿ.ಎಲ್. ಪದವಿ ಗಳಿಸಿದ ಮೊದಲ ವ್ಯಕ್ತಿಯಾಗಿರುವರು. ೧೮೯೧ರಲ್ಲಿ ನಾಲ್ವರು ಯುವಕರಾದ ಬಂಟ್ವಾಳ ಪದ್ಮನಾಭ ಬಾಳಿಗ, ಅರ್ಕುಳಾ ವಾಸುದೇವರಾವ್, ಬಂಟ್ವಾಳ ವಾಮನ ಬಾಳಿಗ ಮತ್ತು ಉದ್ಯಾವರ ಶ್ರೀನಿವಾಸ್‌ರಾವ್ ಇವರ ಉತ್ಸಾಹದ ಪ್ರತಿಫಲವಾಗಿ ಕೆನರಾ ಹೈಸ್ಕೂಲ್ ಜನ್ಮ ತಳೆಯಿತು. ಐವರು ಸ್ಥಾಪಕ ಮಹನೀಯರ ಪೈಕಿ ತರಬೇತಿ ಪಡೆದ ಏಕೈಕ ಪದವೀಧರರಾಗಿದ್ದ ಎ.ವಾಸುದೇವರಾವ್ ಮೊದಲು ಮುಖ್ಯೋಪಾಧ್ಯಾಯರಾದರು. ಈ ನಡುವೆ ಸುಬ್ರಾಯ ಪೈಯವರ ಪರಿಚಯದಲ್ಲಿ ಒಬ್ಬರಾದ ಫೆರ್ನಾಂಡಿಸ್ ಅವರ ಮನೆ ಮತ್ತು ಆವರಣ ಖರೀದಿಸಿ ೨-೨- ೧೮೯೨ರಲ್ಲಿ ಶಾಲೆ ಸ್ವಂತ ಆವರಣ ಪ್ರವೇಶಿಸಿತು.[೪೯] ೧೮೯೪ರಲ್ಲಿ ಕೆನರಾ ಹೆಣ್ಮಕ್ಕಳ ಪ್ರೌಢ ಶಾಲೆಯನ್ನು ಸ್ಥಾಪಿಸಲಾಯಿತು.

## ಉಳ್ಳಾಲ ರಘುನಾಥಯ್ಯ (೧೮೪೧ - ೧೯೨೧)

ಮಂಗಳೂರಿನ ಹಿರಿಯ ನ್ಯಾಯವಾದಿ, ಸಮಾಜ ಸುಧಾರಕ ಎನ್. ಅರಸಪ್ಪನವರೊಂದಿಗೆ ಬ್ರಹ್ಮ ಸಮಾಜವನ್ನು ಮಂಗಳೂರಿನಲ್ಲಿ ಆರಂಭಿಸಿದರು. ಕುದ್ಮುಲ್ ರಂಗರಾಯರಿಗೆ ಬೆಂಬಲವನ್ನಿತ್ತ ಇವರು ಅಮ್ಮೆಂಬಳ ಸುಬ್ಬರಾವ್ ಪೈ ಇವರ ಆತ್ಮೀಯ ಒಡನಾಡಿಯಾಗಿ ೩೫ ವರ್ಷಗಳ ಕಾಲ ಬ್ರಹ್ಮಸಮಾಜದ

ಕಾರ್ಯದರ್ಶಿಯಾಗಿದ್ದರು. ಜಿಲ್ಲೆಯಲ್ಲಿ ವಿಧವಾ ವಿವಾಹಕ್ಕೆ ಪ್ರೋತ್ಸಾಹ ನೀಡುವ ನಿಟ್ಟಿನಲ್ಲಿ ಶ್ರಮಿಸಿದ ಇವರು ಹಿಂದೂ ವಿಧಿಗಳಂತೆ ತಾಯಿಯ ಉತ್ತರಕ್ರಿಯೆಯನ್ನು ನೆರವೇರಿಸಲು ನಿರಾಕರಿಸಿದುದರಿಂದ ಚಿತ್ರಾಪುರ ಸಾರಸ್ವತ ಸಮಾಜವು ಇವರನ್ನು ಜಾತಿಯಿಂದ ಬಹಿಷ್ಕರಿಸಿತು.[೫೦]

## ಶ್ರೀನಿವಾಸ ಮಲ್ಯ

ಶ್ರೀನಿವಾಸ ಮಲ್ಯರು ೧೯೦೨ರ ನವೆಂಬರ್ ೨೧ರಂದು ಜಿಲ್ಲೆಯ ಹೆಸರಾಂತ ಉಳ್ಳಾಲ ಮಲ್ಯ ಕುಟುಂಬದಲ್ಲಿ ಜನಿಸಿದರು. ಇವರ ತಂದೆ ಶ್ರೀ ಉಳ್ಳಾಲ ಮಂಜುನಾಥ ಮಲ್ಯ ಮತ್ತು ತಾಯಿ ಸರಸ್ವತಿ ಯಾನೆ ರುಕ್ಮಾಬಾಯಿಯವರು. ೧೯೨೦ರಲ್ಲಿ ಮಹಾತ್ಮಾ ಗಾಂಧೀಜಿ ಮಂಗಳೂರಿಗೆ ಬಂದು ಹಲವಾರು ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಮಂಗಳೂರಿನ ಜನತೆಯ ಮುಂದೆ, ಸ್ವಾತಂತ್ರ್ಯ ಚಳವಳಿಯಲ್ಲಿ ದೇಶದ ಜನತೆ ವಹಿಸಬೇಕಾದ ಪಾತ್ರ, ಅಹಿಂಸಾತ್ಮಕ ಚಳವಳಿ, ಹರಿಜನೋದ್ಧಾರ, ಹರಿಜನರಿಗೆ ದೇವಳಗಳಲ್ಲಿ ಪ್ರವೇಶ, ಖಾದಿ-ಚರಕಗಳ ಬಗ್ಗೆ ಕೊಟ್ಟ ಸಂದೇಶಗಳಿಂದ ಶ್ರೀನಿವಾಸ ಮಲ್ಯರು ಪ್ರಭಾವಿತರಾದರು. ಮುಂದೆ ಜನಾನುರಾಗಿಯಾಗಿ ಜಿಲ್ಲೆಯ ಹಲವಾರು ಸಮಾಜಮುಖಿ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು.[೫೧]

## ಕಮಲಾದೇವಿ ಚಟ್ಟೋಪಾಧ್ಯಾಯ

ಕಮಲಾದೇವಿಯವರು ೧೯೦೩, ಎಪ್ರಿಲ್ ೩ರಂದು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಲ್ಲಿ ಜನಿಸಿದರು. ಇವರ ತಂದೆ ಅನಂತಯ್ಯ ಧಾರೇಶ್ವರರರು ಹಾಗೂ ತಾಯಿ ಗಿರಿಜಾಬಾಯಿ. ಚಿಕ್ಕಂದಿನಲ್ಲಿ ಕಮಲಾಳ ಮನಸ್ಸಿನ ಮೇಲೆ ಬಹಳಷ್ಟು ಪರಿಣಾಮ ಬೀರಿದವರು ಮೂವರು: ಅಜ್ಜಿ, ತಂದೆ ಮತ್ತು ತಾಯಿ. ಕಮಲಾರ ಅಜ್ಜಿಗೆ ಓದಿನಲ್ಲಿದ್ದ ಆಸಕ್ತಿ (ಧಾರ್ಮಿಕ ಗ್ರಂಥಗಳು) ಹಾಗೂ ಅಭಿರುಚಿ ಚಿಕ್ಕ ಕಮಲಾಳಿಗೂ ಮುಂದೆ ಭವಿಷ್ಯದಲ್ಲಿ ಓದಿನಲ್ಲಿ ಆಸಕ್ತಿ ಮೂಡಿಸಿತು. ಕಮಲಾರ ತಾಯಿಯವರಾದ ಗಿರಿಜಾಬಾಯಿಗೆ ಓದಬೇಕೆಂಬ ಉತ್ಕಟ ಇಚ್ಛೆಯಿದ್ದರೂ ಆಗಿನ ವಾತಾವರಣಕ್ಕನುಗುಣವಾಗಿ ಶಾಲೆಗೆ ಹೋಗಲಾರದೆ ಮನೆಯಲ್ಲಿಯೇ ಸಾಧ್ಯವಾದಷ್ಟು ಕಲಿತು ತೃಪ್ತಿಪಡಬೇಕಾಯಿತು. ಹುಡುಗಿಯರ ಶಿಕ್ಷಣದ ಮೇಲೆ ದುಡ್ಡು ಸುರಿಯುವುದು ದಂಡವೆಂದು ಪರಿಗಣಿಸಲಾಗುತ್ತಿದ್ದ ಕಾಲದಲ್ಲಿ, ತನ್ನಂತೆ ತನ್ನ ಮಕ್ಕಳು ಮನೆಯಲ್ಲಿ ಕೊಳೆಯಬಾರದೆನ್ನುವುದು ಗಿರಿಜಾಬಾಯಿಯವರ ಆಶೆಯಾಗಿತ್ತು. ತಮ್ಮ ಪತಿಯು ಬ್ರಿಟಿಷ್ ಸೇವೆಯಲ್ಲಿದ್ದರೂ ಗಿರಿಜಾಬಾಯಿಯವರ ಬಳಿ ದೇಶಪ್ರೇಮಕ್ಕೇನೂ ಕೊರತೆಯಿರಲಿಲ್ಲ.

'ಕೇಸರಿ' 'ಸಕಾಳ' ಮುಂತಾದ ಪತ್ರಿಕೆಗಳನ್ನು ತುಂಬ ಆಸಕ್ತಿಯಿಂದ ಓದುತ್ತಿದ್ದ ಅವರಿಗೆ ಸಾಮಾಜಿಕ ಪ್ರಜ್ಞೆಯೂ ಸಾಕಷ್ಟಿತ್ತು. ಮಂಗಳೂರಿನಲ್ಲಿ ಮಹಿಳಾ ಸಂಘವನ್ನು ಸ್ಥಾಪಿಸಿ ಅದರ ಸಭೆಯನ್ನು ತಮ್ಮ ಮನೆಯಲ್ಲೇ ನಡೆಸುತ್ತಿದ್ದರು. ಅನೇಕ ವರ್ಷಗಳವರೆಗೆ ಮಹಿಳಾ ಸಂಘದ ಅಧ್ಯಕ್ಷರಾಗಿದ್ದ ಇವರಿಗೆ ಸ್ತ್ರೀ ಶಿಕ್ಷಣದಲ್ಲೇ ಹೆಚ್ಚು

ಆಸಕ್ತಿ ಇತ್ತು. ಮನೆಮನೆಗೆ ಹೋಗಿ ತಂದೆ ತಾಯಂದಿರು ತಮ್ಮ ಹೆಣ್ಣುಮಕ್ಕಳನ್ನು ಶಾಲೆಗೆ ಸೇರಿಸಲು ಕೇಳಿಕೊಳ್ಳುತ್ತಿದ್ದರಲ್ಲದೆ, ಅವರಲ್ಲಿ ಓದುವ ಅಭಿರುಚಿಯನ್ನು ಕುದುರಿಸಲು ತಮ್ಮಲ್ಲಿಯ ಪುಸ್ತಕಗಳನ್ನೂ ದಿನಪತ್ರಿಕೆಗಳನ್ನೂ ಕೊಡುತ್ತಿದ್ದರು. ಗಿರಿಜಾಬಾಯಿ ಉತ್ಸಾಹ ಮತ್ತು ಸ್ಫೂರ್ತಿಯ ಕಾರಂಜಿಯಂತೆ ಇದ್ದರು. ಹಾಗೆಯೇ ಅಂದಶ್ರದ್ಧೆ, ರೂಢಿ ನಿಯಮಗಳಿಗಾದರೂ ಅವರು ಕಟ್ಟಾ ವಿರೋಧಿಗಳಾಗಿದ್ದರು.

ಕಮಲಾದೇವಿಯವರ ಸರ್ವಭಾವದಲ್ಲಿ ತಾಯಿಯ ಪ್ರಗತಿವಾದ, ಅಜ್ಜಿಯ ಶಾಂತಚಿತ್ತ ಮತ್ತು ವಿಚಾರಮಗ್ನತೆಗಳ ಸಂಗಮವನ್ನು ಕಾಣುತ್ತೇವೆ. ಧಾರೇಶ್ವರ ಅನಂತಯ್ಯರ ಹೆಂಡತಿಯಾದ ಗಿರಿಜಾಬಾಯಿಗೆ ತಾರುಣ್ಯಾವಸ್ಥೆಯನ್ನು ದಾಟದಿರುವಾಗಲೇ ವೈಧವ್ಯ ಪ್ರಾಪ್ತವಾಯಿತು. ಆಗಿನ ಕಾಲದಲ್ಲಿ ವಿಧವೆಯರ ದುರ್ದೆಸೆಯನ್ನು ಹೇಳತೀರದು. ಅವರ ತಲೆಯನ್ನು ಬೋಳಿಸಿ, ಅಚ್ಚ ಕೆಂಪಿನ ಅಥವಾ ಬಿಳಿಯ ಸೀರೆಗಳನ್ನು ಉಡಬೇಕೆಂಬ ನಿಯಮವಿತ್ತು. ಕಮಲಾದೇವಿಯವರ ದೊಡ್ಡಮ್ಮ ವಿಧವೆಯಾದ ಕಾಲದಲ್ಲಿ ಆಕೆಯ ತಲೆಯನ್ನು ಬೋಳಿಸಲಾಗಿತ್ತು. ಆ ಭಯಂಕರ ದೃಶ್ಯವನ್ನು ನೆನೆಯುತ್ತ ಕಮಲಾದೇವಿಯವರು 'ತಲೆಯನ್ನು ಬೋಳಿಸಲು ಕೆಲಸಿಯ ಮುಂದೆ ಮಹಿಳೆಯರನ್ನು ತಂದು ನಿಲ್ಲಿಸುವುದನ್ನು ನೋಡಿದರೆ ಕಟುಕರ ಮುಂದೆ ಗೋಮಾತೆ ತಲೆಬಾಗಿ ನಿಂತಂತೆ ಎನಿಸುತ್ತಿತ್ತು'. ಎಂದಿದ್ದಾರೆ.

ಕಮಲಾರ ತಂದೆ ಧಾರೇಶ್ವರ ಅನಂತಯ್ಯನವರದು ಬಹು ಸುಸಂಸ್ಕೃತ ಮನಸ್ಸು. ಸೂಕ್ಷ್ಮಮತಿಗಳೂ, ಸರಳ ಸ್ವಭಾವದವರೂ, ಶಾಂತಚಿತ್ತರೂ ಆದ ಇವರು ಆನಿಬೆಬೆಂಟರ ಪ್ರಭಾವದಿಂದ ಮಂಗಳೂರಿನಲ್ಲಿ ಗರ್ಲ್ಸ್ ಸ್ಕೂಲ್ ಪ್ರಾರಂಭವಾದ ಕಾಲದಲ್ಲಿ ತಮ್ಮದೇ ಒಂದು ಕಟ್ಟಡವನ್ನು ಅದಕ್ಕೆ ಪುಕ್ಕಟೆಯಾಗಿ ಕೊಟ್ಟರು. ಕಮಲಾ ಏಳು ವರ್ಷದ ಹಸುಳೆಯಾಗಿದ್ದಾಗ ತಂದೆ ಅನಂತ್ಯನವರು ಮರಣ ಹೊಂದಿದರು. ಪತಿಯ ಮೃತ್ಯುವಿನಿಂದ ಗಿರಿಜಾಬಾಯಿಯವರಿಗೆ ಆಕಾಶವೇ ಕಳಚಿ ಬಿದ್ದಂತಾಯಿತು. ಮಕ್ಕಳ ಪೋಷಣೆಯ ಹೊರೆ ತಮ್ಮ ಮೇಲಿದೆ ಎಂಬುವುದನ್ನು ಮನಗಂಡು ತಮ್ಮ ಕರ್ತವ್ಯದ ಕಡೆಗೆ ಓಗೊಟ್ಟರು. ಆಗ ಜಾರಿಯಲ್ಲಿದ್ದ ಕಾನೂನಿನ ಪ್ರಕಾರ ಹೆಣ್ಣು ಮಕ್ಕಳಿಗೆ ತಂದೆಯ ಸಂಪತ್ತಿನಲ್ಲಿ ಪಾಲು ಇಲ್ಲದೆ ಇದ್ದುದರಿಂದ ಮತ್ತು ಪತ್ನಿಗೂ ಪತಿಯ ಆಸ್ತಿಗೆ ಬಾಧ್ಯಸ್ಥಲಾಗದಿದ್ದುದರಿಂದ, ಆಸ್ತಿಯ ಅಧಿಕಾರ ಕಮಲಾರ ಅಣ್ಣನ ಪಾಲಾದವು. 'ತಂದೆಯ ಮೃತ್ಯುವಿನ ನಂತರ ನನಗೆ ಮಹಿಳೆಯರ ವಾಸ್ತವಿಕ ಜೀವನದ ಬಗ್ಗೆ ಅರಿವುಂಟಾಯಿತು'. ಆನಿಬೆಸೆಂಟರು ಮಂಗಳೂರಿಗೆ ಆಗಮಿಸಿದಾಗ ಗಿರಿಜಾಬಾಯಿಯವರು ಹತ್ತು ವರ್ಷದ ಕಮಲಾರನ್ನು ಆನಿಬೆಸೆಂಟರ ಬಳಿ ಕರೆದುಕೊಂಡು ಹೋಗಿ, 'ನನ್ನ ಮಗಳು ನಿಮ್ಮ ಹಾಗೆ ಸ್ವಾತಂತ್ರ್ಯ ಯೋಧಳಾಗಲಿ ಎಂದು ಹರಸಿ' ಎಂದಾಗ ಅನಿಬೆಸೆಂಟರು 'ನಿನಗೆ ನನ್ನ ಆಶೀರ್ವಾದಗಳು' ಎಂದಿದ್ದರು. ೧೯೧೭ರಲ್ಲಿ ಮಹಾತ್ಮಾ ಗಾಂಧಿಯವರು ಮಂಗಳೂರಿಗೆ ಭೇಟಿಕೊಟ್ಟ ಸಂದರ್ಭದಲ್ಲಿ ಅವರ ಮಾತಿನ ಮೋಡಿಯಿಂದ ಮಂತ್ರಮುಗ್ಧಳಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಬೇಕೆಂಬ ಹಂಬಲ ಹುಟ್ಟಿತು. ಗಿರಿಜಬಾಯಿಯವರು ಸ್ತ್ರೀ ಶಿಕ್ಷಣ ಪ್ರೇಮಿಗಳೂ ಬಾಲ್ಯವಿವಾಹ

ವಿರೋಧಿಗಳೂ ಆಗಿದ್ದರೆಂಬುವುದು ನಿಜ. ಆದರೆ ಮಗಳನ್ನು ಯೋಗ್ಯ ವರನಿಗೆ ಆದಷ್ಟು ಬೇಗ ಮದುವೆಮಾಡಿ ತಮ್ಮ ಜವಾಬ್ದಾರಿಯಿಂದ ಮುಕ್ತರಾಗಬೇಕೆಂಬ ಆಶೆಯೂ ಅಷ್ಟೇ ತೀವ್ರವಾಗಿತ್ತು. ತಮ್ಮ ಪಕ್ಕದ ಮನೆಯ ಪ್ರತಿಷ್ಠಿತ ಶ್ರೀಮಂತ ಸಾರಸ್ವತ ಬ್ರಾಹ್ಮಣರ ಮನೆತನದ ಪ್ರಸಿದ್ಧ ವಕೀಲರ ಮಗ, ಇನ್ನೂ ಕಾಲೇಜಿನಲ್ಲಿ ಓದುತ್ತಿದ್ದ ಹುಡುಗ, ಈತನೇ ಯೋಗ್ಯ ವರನೆಂದು ತಿಳಿದು ಗಿರಿಜಾಬಾಯಿಯವರು ಮಾತುಕತೆಗಳನ್ನು ಪ್ರಾರಂಭಿಸಿದರು. ಅಂತೆಯೇ ಬಹು ವಿಜೃಂಭಣೆಯಿಂದ ಮದುವೆಯನ್ನು ನೆರವೇರಿಸಲಾಯಿತು. ಮದುವೆಯ ನಂತರ ವಿದ್ಯಾಭ್ಯಾಸಕ್ಕೆಂದು ಮದರಾಸಿಗೆ ಹೋದವನು ಜ್ವರದಿಂದ ಮರಣವನ್ನಪ್ಪಿದನು. ಮಧುಚಂದ್ರದ ಕನಸು ಕಾಣುತ್ತಿದ್ದ ಮದುವಣಗಿತ್ತಿ ವೈಧವ್ಯವನ್ನು ಅಪ್ಪಿಕೊಳ್ಳಬೇಕಾಯಿತು. ಇದೇ ಸಮಯದಲ್ಲಿ ಕಮಲಾದೇವಿಯವರ ಅಕ್ಕನ ದೈಹಿಕ ಪರಿಸ್ಥಿತಿಯೂ ಕೆಟ್ಟು ಹೋಯಿತು. ಆಗ ಮಂಗಳೂರಿನಲ್ಲಿ ಚಿಕಿತ್ಸೆ ಫಲಕಾರಿಯಾಗದೆ ಮದರಾಸಿಗೆ ಪ್ರಯಾಣ ಬೆಳೆಸಿದರು. ಅಲ್ಲಿ ಒಂದು ಬಾಡಿಗೆ ಮನೆಯನ್ನು ತೆಗೆದುಕೊಂಡರು.

ಮದರಾಸಿನಲ್ಲಿಯೇ ಮೂಲತಃ ಬಂಗಾಲಿಯವರಾದ ಹರೀಂದ್ರನಾಥ ಚಟ್ಟೋಪಾಧ್ಯಾಯರ ಕುಟುಂಬದವರು ನೆಲೆಸಿದ್ದರು. ಮುಂದೆ ಕಮಲಾದೇವಿ ಮತ್ತು ಹರೀಂದ್ರರ ಪರಿಚಯ ವಿವಾಹದಲ್ಲಿ ಕೊನೆಗೊಂಡಿತು. ೧೯೧೯ರಲ್ಲಿ ನಡೆದ ಇವರ ವಿವಾಹ ಸಮಾಜದಲ್ಲಿ ಒಂದು ದೊಡ್ಡ ಬಿರುಗಾಳಿಯನ್ನೇ ಎಬ್ಬಿಸಿತು. ಕಮಲಾದೇವಿಯವರಲ್ಲಿ ಆಗಲೇ ಬಂಡಾಯ ವೃತ್ತಿ ರೂಪಗೊಂಡಿತ್ತು. ಆ ಕಪ್ಪು ಕಾರ್ಮೋಡಗಳ ನಡುವೆ ಕಂಡ ಬೆಳ್ಳಿಯ ಕೋಲ್ಮಿಂಚಿಗೆ ಹರೀಂದ್ರನಾಥರೊಡನೆ ಕಮಲಾದೇವಿಯವರು ಕಳೆದ ಜೀವನವನ್ನು ಹೋಲಿಸಬಹುದು. ಕೋಲ್ಮಿಂಚು ಕಾಣಕಾಣುತ್ತಲೇ ಮಾಯವಾಗುವಂತೆ ಸುಖದ ಬಟ್ಟಲನ್ನು ತುಟಿಗಳಿಗೆ ಹಚ್ಚಿ ಆಸ್ವಾದಿಸಲು ಪ್ರಾರಂಭಿಸುತ್ತಲೇ ವಿಧಿಯು ಆ ಬಟ್ಟಲನ್ನು ಕಿತ್ತುಕೊಂಡು ಹೋಯಿತು ಎಂದಿದ್ದಾರೆ.[೫೨]

ಬರಬರುತ್ತಾ ಹರೀಂದ್ರರ ಸ್ವಭಾವದಿಂದ ಬೇಸತ್ತ ಕಮಲಾ ವಿವಾಹದ ೧೫ ವರುಷಗಳ ನಂತರ ವಿಚ್ಛೇದನ ನೀಡಿದರು. ತಂದೆ ತೀರಿಕೊಂಡ ಮೇಲೆ ತಮ್ಮ ತಾಯಿಗೆ ಒದಗಿದ ದುರ್ದೆಸೆ ಬಾಲ್ಯದಲ್ಲಿಯೇ ವಿಧವೆಯಾದ ತಮ್ಮನ್ನು ನೋಡುತ್ತಿದ್ದ ಸಮಾಜದ ದೃಷ್ಟಿಕೋನ, ಅಕ್ಕಂದಿರಿಬ್ಬರೂ ತಮ್ಮ ಗಂಡಂದಿರ ಮನೆಯಲ್ಲಿ ನಿಸ್ಸಾಹಯಕರಾಗಿ ಅನುಭವಿಸಿದ ಯಾತನೆ, ಇವೆಲ್ಲ ಒಟ್ಟುಗೂಡಿ ಕಮಲಾದೇವಿಯವರನ್ನು ಮಹಿಳೆಯರ ಅಭ್ಯುದಯ ಕಾರ್ಯಗಳ ಕಡೆಗೆ ಎಳೆದು ತಂದವು. ಇದರೊಂದಿಗೆ ಗಾಂಧೀಜಿಯವರ ಪ್ರಭಾವವೂ ಜೊತೆಗೂಡಿತು. ಮಹಿಳೆಯರ ಪರವಾಗಿ ಹೋರಾಡುವುದರಲ್ಲಿ ಕಮಲಾ ಯಾವತ್ತೂ ಮುಂಚೂಣಿಯಲ್ಲಿರುತ್ತಿದ್ದರು. ಆನಿಬೆಸೆಂಟ್, ಪಂಡಿತ ರಮಾಬಾಯಿಯವರ ತತ್ವ ಆದರ್ಶಗಳನ್ನು ಕಾಣುತ್ತಾ ಬೆಳೆದ ಕಮಲಾಬಾಯಿಯವರಲ್ಲೂ ಹೋರಾಡುವ ಛಲ ಮೆಲ್ಲಮೆಲ್ಲನೆ ಪಡಿಮೂಡುತ್ತಿದ್ದವು. ಮಹರ್ಷಿ ಕರ್ವೆ, ಅವರ ಪತ್ನಿ ಆನಂದಿಬಾಯಿ, ಸೊಸೆ ಪಾರ್ವತಿ ಬಾಯಿ, ಪ್ರೇಮಲೀಲಾ ಅವರ ಸ್ತ್ರೀವಾದ, ಬಹಳ ಪರಿಣಾಮ ಬೀರಿದ್ದವು. ಕವಿ ರವೀಂದ್ರನಾಥ್ ಟಾಗೋರರ ಸ್ತ್ರೀಪರ ಚಿಂತನೆ, ಶೈಕ್ಷಣಿಕ ನ್ಯಾಯಕ್ಕೆ ಅವರು ಮಂಡಿಸುತ್ತಿದ್ದ ವಿಚಾರಗಳು ಕಮಲಾ ಅವರನ್ನು ಇನ್ನಷ್ಟು ಚಿಂತನೆಗೆ ಹಚ್ಚಿದವು ಹಾಗೆಯೇ ಪರಿಣಾಮವೂ

ಬೀರಿದವು. ಒಳನಾಡಿನ ಮೂಲೆಮೂಲೆಯ ಹೆಣ್ಣುಮಗಳೂ ಅಕ್ಷರ ಕಲಿಯುವಂತೆ ಮಾಡಬೇಕು ಅನ್ನುವ ತುಡಿತ ಇನ್ನಷ್ಟು ತೀವ್ರಗೊಂಡಿತು. ಮಹಿಳೆಯ ಬದುಕಿಗೆ ಶಕ್ತಿಯಾಗಿ ಸಮಾನತೆಯನ್ನು ಪ್ರತಿಷ್ಠಾಪಿಸುವಂತೆ ಕಾನೂನಿನಲ್ಲೇ ಬದಲಾವಣೆ ತರುವುದಕ್ಕೆ ಹೋರಾಡಿದರು.

## ೪.೨ ಪ್ರಮುಖ ಮಹಿಳಾಪರ ಸಾಮಾಜಿಕ ಸಂಸ್ಥೆಗಳು

ಹತ್ತೊಂಭತ್ತನೆಯ ಶತಮಾನದ ಮಧ್ಯಭಾಗದ ವೇಳೆಗೆ ಬ್ರಿಟಿಷ್ ಭಾರತದ ಎಲ್ಲಾ ಭಾಗಗಳಲ್ಲೂ ಸುಧಾರಣಾವಾದಿಗಳ ಗುಂಪುಗಳು ಹಬ್ಬಿ ಹರಡಿದ್ದವು. ಇವರ ಗಮನವೆಲ್ಲಾ ಸತಿಪದ್ಧತಿ, ಹೆಣ್ಣು ಶಿಶುಗಳ ಹತ್ಯೆ, ಬಹುಪತ್ನಿತ್ವ, ಬಾಲ್ಯವಿವಾಹ, ಪರ್ದಾ ಪದ್ಧತಿ, ಸ್ತ್ರೀ ಶಿಕ್ಷಣಕ್ಕಿದ್ದ ನಿರ್ಬಂಧ, ದೇವದಾಸಿ ಪದ್ಧತಿ, ಪುರುಷಪ್ರಧಾನ ಒಟ್ಟು ಕುಟುಂಬ ಮೊದಲಾದ ಸಂಗತಿಗಳನ್ನೇ ಸುತ್ತುತ್ತಿತ್ತು. ಈ ಮೊದಲೇ ಸುಧಾರಣಾ ಮನೋಭಾವದವರೇ ಆಗಿದ್ದಿರಬಹುದಾದ ವ್ಯಕ್ತಿಗಳಿಗೆ ಇಂತಹ ಚಟುವಟಿಕೆಗಳು ಪ್ರೇರಣೆ ಪ್ರೋತ್ಸಾಹಗಳನ್ನು ಒದಗಿಸಿದವು. ಕ್ರಮೇಣವಾಗಿ ಅಖಿಲ ಭಾರತ ಮಟ್ಟದ ಸುಧಾರಣಾವಾದಿ ಸಂಘ ಸಂಸ್ಥೆಗಳು ಅಸ್ತಿತ್ವಕ್ಕೆ ಬರ ತೊಡಗಿದವು.[೫೨]
ಈ ಸಂಸ್ಥೆಗಳು 'ಮಹಿಳೆಯರ ಅಭಿಪ್ರಾಯ' ಗಳನ್ನು ಅಭಿವ್ಯಕ್ತಿಪಡಿಸುವ ಮಾಧ್ಯಮಗಳಾದವು. ಜೊತೆಗೆ ಮುಂದಿನ ದಿನಗಳಲ್ಲಿ ರಾಜಕೀಯ ಮತ್ತು ಸಾಮಾಜಿಕ ಸಂಸ್ಥೆಗಳನ್ನು ನಡೆಸಿಕೊಂಡು ಹೋಗುವ ಮಹಿಳಾ ಮುಂದಾಳುಗಳಿಗೆ ಸೂಕ್ತ ತರಬೇತಿಯನ್ನು ಕೊಡುವ ಆಧಾರಗಳೂ ಆದವು. 'ನವ ಮಹಿಳೆ' ಯು ಪುರುಷನ ಉತ್ತಮ ಸಂಗಾತಿ ಹಾಗೂ ಆತನ ಸಹಾಯಕಿಯಾಗಿದ್ದು ಆದರ್ಶ ಮಾತೆಯಾಗಿ ದೇಶಕ್ಕೆ ಕೀರ್ತಿತರುವವಳಾಗಿದ್ದಾಳೆ ಎಂಬ ಪಾಶ್ಚಾತ್ಯ ಚಿಂತನೆಯನ್ನು ಈ ಸಂಸ್ಥೆಗಳು ಭಾರತೀಯ ಸಂದರ್ಭಕ್ಕೆ ಅಳವಡಿಕೆಯಾಗುವಂತೆ ಒಂದಿಷ್ಟು ಹೊಂದಿಸಿ ಪಡೆದುಕೊಂಡಿದ್ದವು.

### ಮಹಿಳಾ ಸಭಾ

ಗೃಹಿಣಿಯರಿಗೆ ಶೈಕ್ಷಣಿಕ ಹಾಗೂ ಮನೋರಂಜನಾ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಅನುವು ಮಾಡಿಕೊಳ್ಳುವ ನಿಟ್ಟಿನಲ್ಲಿ ೧೯೧೧ರ ಮೇ ತಿಂಗಳಿನಲ್ಲಿ ಮಂಗಳೂರಿನಲ್ಲಿ 'ಮಹಿಳಾ ಸಭಾ' ಸ್ಥಾಪನೆಯಾಯಿತು. ವಿವಿಧ ಜಾತಿ, ಮತ, ಧರ್ಮಗಳ ಮಹಿಳೆಯರ ಸಮ್ಮಿಲನಕ್ಕಾಗಿ ಈ ಸಂಘ ಹುಟ್ಟಿಕೊಂಡಿತು. ಗೃಹಿಣಿಯರು ಮನೆಯ ಹೊಸ್ತಿಲು ದಾಟಿ ಶಿಕ್ಷಣ, ಸಂಗೀತ ಮತ್ತು ವಿನೋದಾವಳಿಗಳಲ್ಲಿ ತೊಡಗಿಸಿಕೊಳ್ಳುವುದಕ್ಕೆ ಅಂಜಿಕೆ ಪಡುತ್ತಿದ್ದಂತಹ ಸಮಯದಲ್ಲಿ ವಿಶಾಲ ಮನಸ್ಕರಾದ ಬೆನೆಗಲ್ ಸಂಜೀವರಾವ್, ಕಾರ್ನಾಡ್ ಸದಾಶಿವರಾವ್, ತೊಂಬಾಟ್ ಕೇಶವರಾವ್, ಗೊಲ್ಲೆಕ್ಕೇರಿ ಕೃಷ್ಣರಾವ್ ಮುಂತಾದವರು ಸೇರಿ ಮಂಗಳೂರಿನಲ್ಲಿ ಮಹಿಳಾ ಸಭಾ ಸ್ಥಾಪಿಸುವ ಪ್ರಸ್ತಾಪ ಮಾಡಿದರು. ಹೀಗೆ ೧೯೧೧ರ ಮೇ ತಿಂಗಳಿನಲ್ಲಿ ಧಾರೇಶ್ವರ ಗಿರಿಜಾಬಾಯಿ (ಕಮಲಾದೇವಿ ಚಟ್ಟೋಪಾಧ್ಯಾಯರ ತಾಯಿ) ಯವರ

ಮನೆಯಲ್ಲಿ ಮಹಿಳಾ ಸಭಾ ಆರಂಭವಾಯಿತು. ಮಹಿಳಾ ಸಭೆಯ ಪ್ರಪ್ರಥಮ ಅಧ್ಯಕ್ಷೆಯಾಗಿ ಗಿರಿಜಾಬಾಯಿ ಮತ್ತು ಕಾರ್ನಾಡ್ ಸದಾಶಿವರಾಯರ ಪತ್ನಿ ಶಾಂತಾಬಾಯಿ ಕಾರ್ಯದರ್ಶಿಯಾಗಿ ಆಯ್ಕೆಗೊಂಡರು. ಪ್ರಾರಂಭದಲ್ಲಿ ಅತ್ಯಲ್ಪ ಮಹಿಳೆಯರು ಗಿರಿಜಾಬಾಯಿಯವರ ಮನೆಯಲ್ಲಿ ನಡೆಯುತ್ತಿದ್ದ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ವಿಷಯಗಳ ಕುರಿತು ಉಪನ್ಯಾಸ ಕಾರ್ಯಕ್ರಮಗಳು, ಇಂಗ್ಲಿಷ್ ಕಲಿಕೆ ಹಾಗೂ ಹೊಲಿಗೆ ತರಬೇತಿಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಕೆಲವು ವರ್ಷಗಳ ನಂತರ ಕುದ್ಮುಲ್ ರಂಗರಾಯರ ಅಧೀನದಲ್ಲಿದ್ದ ಕಟ್ಟಡದಲ್ಲಿ ಮಹಿಳಾ ಸಭೆಯ ಗೋಷ್ಠಿಗಳು ನಡೆದವು. ಮಹಿಳಾ ಸಭಾ ಆರಂಭದಿಂದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಾಗೂ ಭಾರತದಾದ್ಯಂತ ಉದಾರವಾಗಿ ದೇಣಿಗೆಗಳನ್ನು ನೀಡುತ್ತಾ ಬಂದಿದೆ. ೧೯೧೧ರಲ್ಲಿಯೇ ಪೂನಾದಲ್ಲಿರುವ ಮಹರ್ಷಿ ಕಾರ್ವೆ ವಿಧವಾ ಸಂಸ್ಥೆಗೆ ದೇಣಿಗೆಯನ್ನು ನೀಡಿರುತ್ತದೆ. ಮಹಿಳಾ ಸಭೆಯಲ್ಲಿ ನಡೆಯುತ್ತಿದ್ದ ಉಪನ್ಯಾಸಗಳು ಮತ್ತು ತರಗತಿಗಳು ಹೆಚ್ಚಿನ ಮಹಿಳೆಯರನ್ನು ಆಕರ್ಷಿಸಿದವು.

ಮಹಿಳೆಯರ ಸಂಖ್ಯೆ ಹೆಚ್ಚಿದಂತೆ, ಶಾಶ್ವತವಾದ ಕಟ್ಟಡ ಸಮಸ್ಯೆ ಎದುರಾಯಿತು. ಈ ಕೊರತೆ ದಿವಾನ್ ಬಹಾದ್ದೂರ್ ಎನ್. ಸುಬ್ಬರಾವ್, ಶ್ರೀ ಕೆ. ಸದಾಶಿವ ರಾವ್ ಮತ್ತು ಜಿಲ್ಲೆಯ ಆಗಿನ ಕಲೆಕ್ಟರ್ ಆಗಿದ್ದ ಲೈವೋಲೆಲ್ ಲಾರ್ಡ್ ಪೆಂಟಾಲೇಂಡ್ ಇವರು ಜಾಗವನ್ನು ಮಹಿಳಾ ಸಭೆಗೆ ಪರಾಧೀನಗೊಳಿಸಿ, ೧೯೧೭ರಲ್ಲಿ, ಮಹಿಳಾ ಸಭಾ ಕಟ್ಟಡದ ಶಿಲಾನ್ಯಾಸ ನೆರವೇರಿಸಿದರು. ದಾನಿಗಳ ಕೊಡುಗೆ, ಸರಕಾರದ ಅನುದಾನ ಹಾಗೂ ಬಿ. ಎನ್. ಸಾಲೆತ್ತೂರ್ ರಚಿಸಿದ ನಾಟಕವಾದ 'ಸಾವಿತ್ರಿಯ ಆಟ' ಗಳನ್ನು ಪ್ರದರ್ಶಿಸಿ ಮತ್ತು ಮಾರಾಟಮಾಡಿ ಒಟ್ಟು ರೂಪಾಯಿ ೭೫೦೦ ವೆಚ್ಚದಲ್ಲಿ ಈಗಿನ ಲೈಟ್ ಹೌಸ್ ಹಿಲ್ ರೋಡಿನಲ್ಲಿ ಮಹಿಳಾ ಸಭಾದ ಸ್ಥಾಪನೆಯಾಯಿತು. ೧೯೨೧ರ ಹೊತ್ತಿಗೆ ಇದರ ಜನಪ್ರಿಯತೆ ಹೆಚ್ಚಿದುದರಿಂದ ಸದಸ್ಯತ್ವ ಶುಲ್ಕವನ್ನು ಸದಸ್ಯರಿಂದ ಪಡೆದುಕೊಳ್ಳಲಾಯಿತು.

ಓದಿನಲ್ಲಿ ಆಸಕ್ತಿಯಿರುವವರಿಗಾಗಿ ಗ್ರಂಥಾಲಯವನ್ನು ೧೯೨೧ರಲ್ಲಿ ಸರಕಾರದ ಅನುದಾನದಿಂದ ಸ್ಥಾಪಿಸಿ, ೧೯೩೦ರಲ್ಲಿ ವಾಚನಾಲಯ ಅಸ್ತಿತ್ವಕ್ಕೆ ಬಂತು. ಇಂಗ್ಲಿಷ್ ತರಗತಿಗಳು, ಹೊಲಿಗೆ, ಸಂಗೀತ, ಚಿತ್ರ ಕಲೆ, ಅಡುಗೆ ಮುಂತಾದ ಚಟುವಟಿಕೆಗಳು ಮಹಿಳಾ ಸಭಾದಲ್ಲಿ ನಡೆಯುತ್ತಿತ್ತು. ಸದಸ್ಯರಿಗೆ ಕ್ರೀಡಾ ತರಬೇತಿ ನೀಡುವ ನಿಟ್ಟಿನಲ್ಲಿ ೧೯೨೧ರಲ್ಲಿ ಬ್ಯಾಡ್ಮಿಂಟನ್ ಮತ್ತು ಟೇಬಲ್ ಟೆನ್ನಿಸ್ ಹಾಗೂ ೧೯೩೦ರಲ್ಲಿ ಟೆನ್ನಿಕ್ವಟ್ ಮತ್ತು ಕೇರಂ ಆಟಗಳನ್ನು ಪ್ರಾರಂಭಿಸಲಾಯಿತು. ೧೯೨೯ರಲ್ಲಿ ಸಂಘಗಳ ನೊಂದಣಿ ಕಾಯ್ದೆ xxx of ೧೮೬೦ ರಂತೆ 'ಮಹಿಳಾ ಸಭಾ' ಇದರ ನೋಂದಣಿ ಮಾಡಲಾಯಿತು.[೫೪] ೧೯೩೧-೩೨ರಲ್ಲಿ ಶ್ರೀಮತಿ ಆನಂದಿಬಾಯಿ ಮಹಿಳಾ ಸಭಾದ ಅಧ್ಯಕ್ಷರಾಗಿದ್ದು, ಶ್ರೀಮತಿ ವೆಂಕಟರಾವ್ ಮತ್ತು ಲಲಿತಾಬಾಯಿ ಉಪಾಧ್ಯಕ್ಷರಾಗಿದ್ದರು. ಶ್ರೀಮತಿ ರತ್ನಾಬಾಯಿ ಗೌರವಯುತ ಖಜಾನಾಧಿಕಾರಿಯಾಗಿದ್ದು, ಶ್ರೀಮತಿ ಶಾಂಭವಿ ಪೂಂಜ, ಶ್ರೀಮತಿ ರಾಜಲಕ್ಷ್ಮಿ ಆಚಾರ್, ಶ್ರೀಮತಿ ಅಂಬಾಬಾಯಿ, ಶ್ರೀಮತಿ ಸುಬ್ರಮಣ್ಯಂ, ಶ್ರೀಮತಿ ಏಕಂಬರರಾವ್, ಶ್ರೀಮತಿ ಎ.ಬಿ. ಶೆಟ್ಟಿ, ಶ್ರೀಮತಿ ಲಲಿತಾ ಬಾಯಿ ಇವರು ಗೌರವಯುತ ಜೊತೆ ಕಾರ್ಯದರ್ಶಿಗಳಾಗಿದ್ದರು. ಶ್ರೀಮತಿ

ತಂಬನ್, ಶ್ರೀಮತಿ ಕಲ್ಯಾಣಿಯಮ್ಮ, ಶ್ರೀಮತಿ ಚೆಟ್ಟೂರ್, ಶ್ರೀಮತಿ ದೂಮಪ್ಪ ಮತ್ತು ಶ್ರೀಮತಿ ಬ್ಯಾನರ್ಜಿ ಇವರು ಆಡಳಿತ ಮಂಡಳಿಯ ಸದಸ್ಯರಾಗಿದ್ದರು. ಹರಿಕಥೆ ಸಂಗೀತ ಕಛೇರಿ, ಭಜನೆಗಳನ್ನು ವಿವಿಧ ಸಂದರ್ಭಗಳಲ್ಲಿ ನಡೆಸುತಿದ್ದು, ಮಹಿಳೆಯರಿಗಾಗಿ ವಿವಿಧ ಜಿಲ್ಲೆಯ ಪ್ರಖ್ಯಾತ ವಿದ್ವಾಂಸರಿಂದ ಉಪನ್ಯಾಸ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತಿತ್ತು. ಕೆನರಾ ಪ್ರೌಢಶಾಲೆಯ ಅಧ್ಯಾಪಕರಾದ ಶ್ರೀ ಅಚ್ಯುತ ಬಾಳಿಗ, ಶ್ರೀ. ಎಂ.ಎನ್ ಕಿಣಿ, ಪಿ ನರ‍್ಯನ್ ಸ್ವಾಮಿ, ಭವಾನಿ ಶಂಕರ ಭಟ್ಟ, ಶ್ರೀ ಗೋಪಾಲ ಐಯ್ಯಂಗಾರ್, ಮೈಸೂರಿನ ಶ್ರೀ ಸುಬ್ಬರಾವ್, ಮೈಸೂರಿನ ಶ್ರೀ ಕಾಳಿಂಗಪ್ಪ ಇವರಿಂದ ಮಹಿಳೆಯರಿಗೆ ಶಿಕ್ಷಣದ ಅಗತ್ಯ, ಸ್ತ್ರೀ ಧರ್ಮದ ಕುರಿತು ಉಪನ್ಯಾಸ ಹಾಗೂ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳು ಹಾಗೂ ಶ್ರೀಮತಿ ಗಿರಿಜಾ ಬಾಯಿ ಮತ್ತು ಶ್ರೀಮತಿ ಕೃಷ್ಣಾಬಾಯಿಯವರಿಂದ ಭಜನೆ ಕಾರ್ಯಕ್ರಮ ನಡೆದಿರುವ ಕುರಿತು ವರದಿಯಾಗಿದೆ.[೫೫]

೧೯೩೩-೩೪ರ ವರದಿಯಲ್ಲಿ ಸುಸಜ್ಜಿತ ಗ್ರಂಥಾಲಯದ ಅವಶ್ಯಕತೆಯ ಬಗ್ಗೆ ಶ್ರೀಮತಿ ಸಂಕುನಿ, ಶ್ರೀಮತಿ ವರ್ಗೀಸ್ ಮತ್ತು ಉಪ ತಪಾಸಣಾಧಿಕಾರಿಯಾದ ಶ್ರೀಮತಿ ವಿನಯಾ ಬಾಯಿಯವರು ಅಭಿಪ್ರಾಯ ವ್ಯಕ್ತಪಡಿಸಿ ಶಿಕ್ಷಣದಿಂದ ವಂಚಿತರಾದ ಮಹಿಳೆಯರಿಗೆ ಮಹಿಳಾ ಸಭಾ ಇದರ ಗ್ರಂಥಾಲಯದಲ್ಲಿರುವ ಪುಸ್ತಕಗಳು ಓದಲು ದೊರಕುವಂತಾಗಬೇಕು ಎಂದಿರುವರು. ಮಹಿಳೆಯರಿಗೆ ಸಹಾಯವಾಗುವ ನಿಟ್ಟಿನಲ್ಲಿ ಇಂಗ್ಲಿಷ್, ಕಸೂತಿ, ಚಿತ್ರಕಲೆ, ಅಡುಗೆ ತರಗತಿಗಳು ಹಾಗೂ ಉಪನ್ಯಾಸ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತಿತ್ತು. ಇವುಗಳಲ್ಲಿ 'ಬಾಲ ಸಂಗೋಪನೆ', 'ಶೇಪ್ ದ ತಿಂಗ್ಸ್ ಟು ಕಂ' ಮುಖ್ಯವಾಗಿದೆ.[೫೬] ಸ್ವಾತಂತ್ರ್ಯೋತ್ತರ ಕಾಲದಲ್ಲಿಯೂ ಮಹಿಳಾ ಸಭಾ, ಜಿಲ್ಲೆಯ ಮಹಿಳೆಯರನ್ನು ಸಬಲರನ್ನಾಗಿಸುವ ನಿಟ್ಟಿನಲ್ಲಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಕ್ರಿಯವಾಗಿದೆ.[೫೭]

## ಭಗಿನಿ ಸಮಾಜ

ಎರಡು ಜಾಗತಿಕ ಯುದ್ಧಗಳ ಮಧ್ಯಂತರದ ಕಾಲಘಟ್ಟದಲ್ಲಿ ದಿನನಿತ್ಯದ ಕೂಳಿಗೂ ಹಾತೊರೆಯುತ್ತಿದ್ದ ಸಮಯದಲ್ಲಿ ಮಹಿಳೆಯರ ಕೌಟುಂಬಿಕ ಸಂಕಷ್ಟಗಳನ್ನು ಬಗೆಹರಿಸಲು, ಕಮಲಾದೇವಿ ಚಟ್ಟೋಪಾಧ್ಯಾಯ, ಲೀಲಾಬಾಯಿ ಏಕಂಬರ ರಾವ್ ಮತ್ತು ಸಮಾನ ಮನಸ್ಕರು ಜೊತೆ ಸೇರಿ ೧೯೩೦ರ ಆಗಸ್ಟ್ ೩೧ರಂದು ಸಂತೃಪ್ತರ ಮಕ್ಕಳನ್ನು ಪೋಷಿಸಲು ಪೋಷಕ ಗೃಹವನ್ನು ಸ್ಥಾಪಿಸಿದರು. ಪ್ರಾರಂಭದಲ್ಲಿ ಲೀಲಾಬಾಯಿ ಏಕಾಂಬರ ರಾವ್ ಈಗಿನ ಬೆಸೆಂಟ್ ಸಂಸ್ಥೆಯ ಪಕ್ಕದಲ್ಲಿದ್ದ ತಮ್ಮ ಮನೆಯಲ್ಲಿ ಸ್ಥಳಾವಕಾಶ ಒದಗಿಸಿದರು. ಇಲ್ಲಿ ಮಹಿಳೆಯರಿಗೆ ಕಸೂತಿ, ಹೊಲಿಗೆ, ಸಂಗೀತ ಮೊದಲಾದುವುಗಳನ್ನು ಹೇಳಿಕೊಡಲಾಗುತ್ತಿತ್ತು. ೧೯೩೪ರಲ್ಲಿ ಶ್ರೀಮತಿ ಸೀತಾಬಾಯಿರಮಾ ಅವರ ಅಧ್ಯಕ್ಷತೆಯಲ್ಲಿ ಕೊಡಿಯಾಲಬೈಲಿನ ಸಿ.ಪಿ.ಸಿಯ ನಿರ್ದೇಶಕರಾದ ಶ್ರೀವಾಮನ ಕುಡ್ವ ಇವರ ಒಪ್ಪಿಗೆಯ ಮೇರೆಗೆ ಶಿಶುವಿಹಾರವನ್ನು ಸಿ.ಪಿ.ಸಿ ಕಟ್ಟಡಕ್ಕೆ ವರ್ಗಾಯಿಸಲಾಯಿತು. ತದನಂತರದಲ್ಲಿ ಶೇಡಿಗುಡ್ಡೆಯ ಥಿಯೋಸಾಫಿಕಲ್ ಸೊಸೈಟಿಗೆ ಸ್ಥಳಾಂತರಿಸಲಾಯಿತು. ಇದೇ ವರ್ಷ ದಕ್ಷಿಣ

ಕನ್ನಡ ಜಿಲ್ಲಾ ಮಹಿಳಾ ಅಧಿವೇಶನ ಆರಂಭಿಸಿ ಜಿಲ್ಲೆಯ ಮಹಿಳೆಯರ ಅಭಿವೃದ್ಧಿಪರ ಚಟುವಟಿಕೆಗಳ ರೂಪುರೇಷೆ ತಯಾರಿಸಿತು. ಕಾಸರಗೋಡು, ಮುಲ್ಕಿ, ಕಾರ್ಕಳ ಮತ್ತು ಪುತ್ತೂರಿನಲ್ಲಿಯೂ ಶಾಖೆಗಳನ್ನು ತೆರೆಯಲಾಯಿತು. ಆರಂಭದಲ್ಲಿ ಮಂಗಳೂರಿನ ಸೇವಾ ಸಂಸ್ಥೆಗಳಾದ ಮಹಿಳಾ ಸಭಾ, ಗಿಲ್ಡ್ ಆಫ್ ಸರ್ವಿಸ್, ಸ್ತ್ರೀ ಸೇವಾ ಸಮಿತಿ, ಮಂಗಳೂರು ಮಹಿಳಾ ಕೈಮಗ್ಗ ಬ್ಯೂ - ಆಪರೇಟಿವ್ ಸೊಸೈಟಿ ಜೊತೆ ಸೇರಿ ಚಟುವಟಿಕೆಗಳನ್ನು ನಡೆಸುತ್ತಿತ್ತು. ಮಹಿಳಾ ಸಭಾ ಇದರ ೨೫ನೇ ವರ್ಷದ ಸಂಚಿಕೆಗೆ ಶುಭ ಸಂದೇಶಗಳನ್ನು ಕಳುಹಿಸಿದವರಲ್ಲಿ ಒಬ್ಬರಾದ ದಕ್ಷಿಣ ಕನ್ನಡ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರ್ತಿ ಉಮಾಬಾಯಿ ಕುಂದಾಪುರ ಇವರು ಭಗಿನಿ ಸಮಾಜದೊಂದಿಗೆ ಇದ್ದ ತಮ್ಮ ಒಡನಾಟವನ್ನು ಹಂಚಿಕೊಂಡು ಮಹಿಳೆಯರಿಗಾಗಿ ಶ್ರಮಿಸುತ್ತಿರುವ ಸಂಸ್ಥೆಯನ್ನು ಶ್ಲಾಘಿಸಿದ್ದಾರೆ.[೫೮] ಪ್ರಾರಂಭದಲ್ಲಿ ಭಗಿನಿ ಸಮಾಜ ಹಲವು ಅಡ್ಡಿ ಆತಂಕಗಳು ಎದುರಾದರೂ ಕಾಲಕಳೆದಂತೆ ತನ್ನ ಕಾರ್ಯ ಚಟುವಟಿಕೆಗಳನ್ನು ವಿಸ್ತರಿಸಿತು. ಸ್ವಾತಂತ್ರ್ಯ ನಂತರದಲ್ಲಿ ಭಗಿನಿ ಸಮಾಜವೆಂದು ನೋದಾಯಿಸಲ್ಪಟ್ಟ ಈ ಸಂಸ್ಥೆಯು ಮಹಿಳೆಯರು ಮತ್ತು ಮಕ್ಕಳ ಸಬಲೀಕರಣಕ್ಕಾಗಿ ಹಲವಾರು ಚಟುವಟಿಕೆಗಳನ್ನು ಹಮ್ಮಿಕೊಂಡು ಮುನ್ನಡೆಯುತ್ತಾ ಸಾಗಿದೆ.

## ಗಿಲ್ಡ್ ಆಫ್ ಸರ್ವೀಸ್

೧೯೪೭, ಡಿಸೆಂಬರ್ ೫ರಂದು ಶ್ರೀಮತಿ. ಎಂ. ಕಮಲಾ. ಎಸ್. ಆಳ್ವಾ ಇವರು ಲೇಡಿ ನೈ (Nye) ಇವರ ಪ್ರೋತ್ಸಾಹದಿಂದ, ಸಮಾಜಮುಖಿ ಕಾರ್ಯಮಾಡಲಿಚ್ಛಿಸುವ ಕೆಲವು ಸಮಾನ ಮನಸ್ಕರ ಸಭೆ ಕರೆದರು. ಕಲೆಕ್ಟರ್ ಸೌಂಡರ್ಸ್ ಪತ್ನಿಯಾದ ಲೇಡಿ ಸೌಂಡರ್ಸ್ ಅಧ್ಯಕ್ಷತೆಯಲ್ಲಿ ಮದ್ರಾಸಿನ ಗಿಲ್ಡ್ ಆಫ್ ಸರ್ವಿಸ್ ಇದರ ಶಾಖೆಯನ್ನು ಸ್ಥಾಪಿಸಲಾಯಿತು. ಮದ್ರಾಸಿನ ಗಿಲ್ಡ್ ಆಫ್ ಸರ್ವಿಸ್ ಇದರ ಕಾರ್ಯದರ್ಶಿಯಾದ ಶ್ರೀಮತಿ ಕ್ಲಬ್ ವಾಲ ಜಾಧವ್ ಇವರು ಆಗಾಗ್ಗೆ ಸಲಹೆ ಮತ್ತು ಸಹಕಾರಗಳನ್ನು ನೀಡುತ್ತಿದ್ದರು. ಕೊಳಚೆಕೇರಿ ಪ್ರದೇಶಗಳನ್ನು ಸ್ವಚ್ಛಗೊಳಿಸುವುದು ಮತ್ತು ಆಸ್ಪತ್ರೆ ಭೇಟಿ, ಮದ್ರಾಸಿನ ರೈಲ್ವೇ ಅಧಿಕಾರಿಗಳ ಸಹಾಯದಿಂದ ಮಂಗಳೂರಿನ ರೈಲ್ವೇ ನಿಲ್ದಾಣದ ಆಸುಪಾಸಿನಲ್ಲಿ ವಿದ್ಯುದ್ದೀಕರಣ ಮತ್ತು ಇತರ ಅಭಿವೃದ್ಧಿಪರ ಕಾರ್ಯಗಳನ್ನು ಹಮ್ಮಿಕೊಳ್ಳುವ ಯೋಜನೆಗಳನ್ನು ಕೈಗೊಳ್ಳಲಾಯಿತು. ಅದೇ ರೀತಿಯಲ್ಲಿ ಶೈಕ್ಷಣಿಕವಾಗಿಯೂ ಎರಡು ನರ್ಸರಿಶಾಲೆಗಳನ್ನು ಸ್ಥಾಪಿಸಲಾಯಿತು. ಪಾಂಡೇಶ್ವರದ ಮುನ್ಸಿಪಾಲ್ ಕಟ್ಟಡದಲ್ಲಿ ಸ್ಥಾಪಿಸಲ್ಪಟ್ಟ ಮೊದಲ ಶಾಲೆ ನಂತರದಲ್ಲಿ ಉದ್ಯೋಗಕ್ಕೆ ಹೊರತೆರಳುವ ಮಹಿಳೆಯರಿಗೆ ಬಹಳ ಸಹಕಾರಿಯಾಯಿತು.[೫೯]

## ಬಹ್ಮ ಸಮಾಜ

೧೮೨೮ರಲ್ಲಿ ರಾಮಮೋಹನರಾಯರಿಂದ ಸ್ಥಾಪಿಸಲ್ಪಟ್ಟ ಬ್ರಹ್ಮಸಮಾಜದ ಶಾಖೆಯೊಂದು ಮಂಗಳೂರಿನಲ್ಲಿ ೧೮೭೦ರಲ್ಲಿ ಪ್ರಾರಂಭಗೊಂಡಿತು. ನಗರಕ್ಕೆ ಅದರ ಆಗಮನದ ಹಿನ್ನೆಲೆ ಸ್ವಾರಸ್ಯಕರ. ನೀರೇಶ್ವಾಲ್ಯ ಅರಸಪ್ಪ, ಬಿಲ್ಲವರಲ್ಲಿ ಶಿಕ್ಷಿತನಾದ ಕೆಲವೇ ಮಂದಿಯಲ್ಲಿ ಒಬ್ಬನು, ತನ್ನ ಸ್ಥಿತಿ ಮತ್ತು ಅಂತಸ್ತುಗಳನ್ನು

ವೃದ್ಧಿಸಲು ಕ್ರೈಸ್ತಮತಕ್ಕೆ ಸೇರಲು ಉತ್ಸುಕನಾಗಿ ಮಿಷನರಿಗಳೊಡನೆ ಸಂಪರ್ಕದಲ್ಲಿದ್ದ. ಮಾತುಕತೆ ವಿಫಲವಾದಾಗ ಅವನ ಸಾರಸ್ವತ ಸ್ನೇಹಿತ ಉಳ್ಳಾಲ ರಘುನಾಥಯ್ಯ ಬ್ರಹ್ಮಸಮಾಜಕ್ಕೆ ಸೇರುವ ಬಗೆಗೆ ಯೋಚಿಸುವಂತೆ ಸಲಹೆ ಮಾಡಿದರು. ಅಂತೆಯೇ ಮೂವರು ಬ್ರಹ್ಮೋ ಪ್ರಚಾರಕರು ಮಂಗಳೂರಿಗೆ ಬಂದರು. ಆದರೆ ಇಂಗ್ಲಿಷ್ ಮಾತನಾಡುವ ಈ ಪ್ರಚಾರಕರು ತುಳುಭಾಷಿಗರೇ ಅಧಿಕವಾಗಿದ್ದ ಬಿಲ್ಲವ ಕೇಳುಗರನ್ನು ತಲುಪುವಲ್ಲಿ ವಿಫಲರಾದರು. ಆದ್ದರಿಂದ ಬ್ರಹ್ಮಸಮಾಜದ ಶಾಖೆ ತೆರೆದಾಗ ಕೇವಲ ೧೯ ಮಂದಿ ಸದಸ್ಯರಿದ್ದರು.

೧೮೭೬ರಲ್ಲಿ ಅರಸಪ್ಪನವರ ಮರಣದವರೆಗೂ ಅವರ ಮನೆಯಲ್ಲಿ ಸಭೆಗಳು ನಡೆಯುತ್ತಿದ್ದವು. ಆದಾಗ್ಯೂ ಬಿಲ್ಲವನ ಮನೆಯಲ್ಲಿ ಸೇರುವುದನ್ನು ಸಾರಸ್ವತ ಬ್ರಾಹ್ಮಣ ಸದಸ್ಯರು ಇಷ್ಟಪಡಲಿಲ್ಲ. ತಮ್ಮದೇ ಆದ ಸಮಾಜವನ್ನು ಕಟ್ಟುವ ಮೂಲಕ ಅವರು ಈ ಸಮಸ್ಯೆಯನ್ನು ಬಗೆಹರಿಸಿಕೊಂಡರು. ಅದರಂತೆ ಅರಸಪ್ಪನವರು ಪ್ರಾರಂಭಿಸಿದ ಬ್ರಹ್ಮ ಸಮಾಜವನ್ನು ಸೇರದೆ, ಪ್ರತ್ಯೇಕವಾದ 'ಉಪಾಸನಾ ಸಭಾ' ವನ್ನು ಮಂಗಳೂರಿನಲ್ಲಿ ಪ್ರಾರಂಭಿಸಿದರು.[೬೦] ರಘುನಾಥಯ್ಯನವರ ಪ್ರಗತಿಪರ ಚಿಂತನೆ ೧೮೭೧ರ ಅಕ್ಟೋಬರಿನಲ್ಲಿ ಅವರ ಬಹಿಷ್ಕಾರಕ್ಕೂ ಕಾರಣವಾಯಿತು.[೬೧] ಕೆನತ್ ಜೋನ್ಸ್ ಹೇಳುವ ಹಾಗೆ ಬ್ರಹ್ಮೋಗಳು ಹಿಂದೂ ಸಂಪ್ರದಾಯವಾದಿಗಳಿಂದ ಏಕರೂಪದ ಬಲವಾದ ಪ್ರತಿಭಟನೆಯನ್ನು ಎದುರಿಸಬೇಕಾಯಿತು. ಇದು ಅದರ ಪರಿವರ್ತನವಾದ ಮತ್ತು ಅನನ್ಯತೆಗಳನ್ನು ನಾಶ ಮಾಡಿತು.[೬೨]

೧೯೦೪ರಲ್ಲಿ ಉಳ್ಳಾಲ ರಘುನಾಥಯ್ಯನವರ ಪುತ್ರಿಯ ವಿವಾಹವು ಪಂಡಿತ ಪರಮೇಶ್ವರಯ್ಯರವರ ಮಗನೊಂದಿಗೆ ೧೮೭೨ರ ಬ್ರಹ್ಮ ಸಮಾಜ ಕಾಯ್ದೆ ೧೧೧ ರ ಅನ್ವಯ ನಡೆಯಿತು. ಇದೇ ವರ್ಷ (೧೯೦೪) ಸಾಧಾರಣ ಬ್ರಹ್ಮಸಮಾಜದ ರೆವರೆಂಡ್ ಹೇಮಚಂದ್ರ ಸರಕಾರ್ ಇವರು ಶ್ರೀ ಎಮ್. ಶಾಮರಾವ್ ಮತ್ತು ಎನ್. ಟಿ. ವೆಂಕಟಪ್ಪರವರ ವಿವಾಹದ ಅಧ್ಯಕ್ಷತೆ ವಹಿಸಿ ಬ್ರಹ್ಮಸಮಾಜದ ವಿಧಿಗಳನ್ವಯ ಮದುವೆ ನೆರವೇರಿಸಿದರು. ನಂತರ ಹೆಣ್ಮಕ್ಕಳ ಶಾಲೆಯನ್ನು ಉದ್ಘಾಟಿಸಿದರು. ಸಮಾಜದ ವಾರ್ಷಿಕ ಸಮಾರಂಭದಲ್ಲಿ ಪಾಲ್ಗೊಂಡು ಭಾರತದಲ್ಲಿ ಧಾರ್ಮಿಕ ಬಿಕ್ಕಟ್ಟುಗಳು, ವಿದ್ಯಾರ್ಥಿ ಜೀವನ ಮತ್ತು ಬ್ರಹ್ಮ ಸಮಾಜದ ವಿಧಾನಗಳು ಕುರಿತು ಉಪನ್ಯಾಸ ನೀಡಿದರು. ೧೯೦೫ರಲ್ಲಿ ಮಂಗಳೂರಿನ ಕೆನರಾ ಹೈಸ್ಕೂಲಿನಲ್ಲಿ ರೆವರೆಂಡ್ ಹೇಮಚಂದ್ರ ಸರ್ಕಾರ್ ಇವರು ಬ್ರಹ್ಮ ಸಮಾಜದ ವಾರ್ಷಿಕೋತ್ಸವದಲ್ಲಿ ಪಾಲ್ಗೊಂಡು, ನೆರೆದವರನ್ನುದ್ದೇಶಿಸಿ ಭಾಷಣ ಮಾಡಿದರು. ಇದೇ ಸಂದರ್ಭ ಉಳ್ಳಾಲ ರಘುನಾಥಯ್ಯನವರನ್ನು ಅವರ ೩೫ ವರ್ಷಗಳ ಸುಧೀರ್ಘ ಸೇವೆಗೆ ಶ್ಲಾಘಿಸಿ, ಬ್ರಹ್ಮಸಮಾಜದ ಕಾರ್ಯದರ್ಶಿ ಹುದ್ದೆಗೆ ನೀಡಿದ ರಾಜೀನಾಮೆ ಅಂಗೀಕರಿಸಲಾಯಿತು. ೧೯೦೫ರಿಂದ ೧೯೦೭ ರವರೆಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬ್ರಹ್ಮಸಮಾಜದ ಚಟುವಟಿಕೆಗಳು ಅಭಿವೃದ್ಧಿಯ ಪಥದತ್ತ ಸಾಗಿತು. ಬ್ರಹ್ಮಸಮಾಜಕ್ಕೆ ಹೊಂದಿಕೊಂಡು ಕೆಲವೊಂದು ಸಂಸ್ಥೆಗಳನ್ನು ತೆರೆಯಲಾಯಿತು. ಅದರಲ್ಲಿ ಮುಖ್ಯವಾಗಿ, ಹೆಣ್ಮಕ್ಕಳಿಗಾಗಿ ರವಿವಾರದ ತರಗತಿಗಳು, ರಾಮ್ ಮೋಹನ್ ರಾಯ್ ಹೆಣ್ಮಕ್ಕಳ ಪ್ರಾಥಮಿಕ ಶಾಲೆ,

ಪಂಚಮರಿಗಾಗಿ ಪ್ರಾಥಮಿಕ ಶಾಲೆಗಳನ್ನು ತೆರೆಯಲಾಯಿತು. ಆದರೆ ಹಣಕಾಸಿನ ಅಭಾವದಿಂದಾಗಿ ರಾಮ್ ಮೋಹನ್ ರಾಯ್ ಹೆಣ್ಮಕ್ಕಳ ಶಾಲೆಯನ್ನು ೧೯೧೦ರಲ್ಲಿ ಮುಚ್ಚಲಾಯಿತು. ಪಂಚಮರ ಶಾಲೆ ಮುಂದೆ, ೧೯೦೬ರಲ್ಲಿ ಶ್ರೀಯುತ ವಿ.ಎ. ಶಿಂದೆ ಮಂಗಳೂರಿಗೆ ಭೇಟಿ ನೀಡಿದ ಸಮಯದಲ್ಲಿ ಡಿಪ್ರೆಸ್ಡ್ ಕ್ಲಾಸಸ್ ಮಿಷನ್ ಸೊಸೈಟಿ ಎಂಬ ಶಕ್ತಿಯುಳ್ಳ ಶಾಖೆಯಾಗಿ ಪಕ್ವಗೊಂಡಿತ್ತು. ೧೯೦೬ರಲ್ಲಿ ನಡೆದ ಇನ್ನೊಂದು ಮುಖ್ಯ ಘಟನೆ ಎಂದರೆ ಉಳ್ಳಾಲ ರಘುನಾಥ್ಯನವರ (ವಿಧವಾ ಮಗಳು) ಮಗಳ ಪುನರ್ವಿವಾಹವು ಹೆಚ್. ಬಾಲಕೃಷ್ಣ ರಾವ್ ಎಂಬುವರೊಂದಿಗೆ ನಡೆಯಿತು. ಇದು ದಕ್ಷಿಣ ಕನ್ನಡ ಜಿಲ್ಲೆಯ ಮೊದಲ ವಿಧವಾ ಪುನರ್ವಿವಾಹವಾಗಿದೆ.[೬೩]

ಮುಂದೆ ಮಿಷನರಿಗಳ ಪ್ರಭಾವಕ್ಕೊಳಗಾಗಿ ರಘುನಾಥಯ್ಯನವರು ಹಿಂದೂ ಮತವನ್ನು ತೊರೆದು ಕ್ರೈಸ್ತ ಮತಕ್ಕೆ ಮತಾಂತರ ಹೊಂದಿದರು. ಈ ಅವಸರದ ನಿಲುಮೆಯಿಂದಾಗಿ ಕುಟುಂಬದವರಿಗಾದ ಸಂಕಷ್ಟ ಹಾಗೂ ಅತೀವ ವೇದನೆಯ ನೈಜ ಪರಿಸ್ಥಿತಿಯ ಅರಿವು ರಂಗನಾಥಯ್ಯನವರಿಗೆ ಉಂಟಾಗಿ, ಅವರು ಕ್ರೈಸ್ತ ಮತ ತೊರೆದು ಬ್ರಹ್ಮಸಮಾಜವನ್ನು ಸೇರಿದರು. ಜಾತಿ ಪದ್ಧತಿ ಮತ್ತು ಸಾಮಾಜಿಕ ತಾರತಮ್ಯಗಳನ್ನು ವಿರೋಧಿಸಿ ಮಹಿಳೆಯರ ಸ್ಥಿತಿಗತಿಗಳನ್ನು ಅಭಿವೃದ್ಧಿಗೊಳಿಸುವ ನಿಟ್ಟಿನಲ್ಲಿ ಅವರು ಕಾರ್ಯ ಪ್ರವೃತ್ತರಾದರು.[೬೪] ಬ್ರಹ್ಮಸಮಾಜದ ಚಟುವಟಿಕೆಗಳಿಂದ ಪ್ರಭಾವಿತರಾದವರಲ್ಲಿ ವೆಂಕಟಪ್ಪನವರ ಪುತ್ರರಾದ ಸುದರ್ಶನರು ಒಬ್ಬರು. ಇವರ ಪತ್ನಿಯಾದ ಡಾ. ನಳಿನಿ ಸುದರ್ಶನ್ ತಿಳಿಸುವಂತೆ, ಅಂತರ್ಜಾತಿ ವಿವಾಹವಾದ ಸುದರ್ಶನರು ಸಮಾಜ ಸುಧಾರಕರಾಗಿ ಬ್ರಹ್ಮ ಸಮಾಜದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದರು. ಸುದರ್ಶನ್‌ರವರು ವಿಧಿವಶರಾದಾಗ ಬ್ರಹ್ಮಸಮಾಜದ ವಿಧಿ ವಿಧಾನಗಳಂತೆ ಅಂತಿಮ ಕಾರ್ಯಗಳನ್ನು ನೆರವೇರಿಸಲಾಯಿತು. ಮಂಗಳೂರಿನ ಕೆನರಾ ಪ್ರೌಢಶಾಲೆ ಡೊಂಗರಕೇರಿಯ ಸಭಾಂಗಣದಲ್ಲಿ ನಡೆದ ಕಾರ್ಯಕ್ರಮದಲ್ಲಿ (ವೈಕುಂಠ ಸಮಾರಾಧನೆ) ಬಡವರಿಗೆ ಅಕ್ಕಿ ಹಣ್ಣು ದಾನ ಮಾಡಲಾಯಿತು.[೬೫] ಬ್ರಹ್ಮಸಮಾಜದತ್ತ ಒಲವು ತೋರಿಸಿದ ಡಾ. ನಳಿನಿಯವರು ಚಿಕಿತ್ಸೆಗಾಗಿ ಬರುವ ಬಡವ ಬಲ್ಲಿದರಿಗೆ ಉಚಿತವಾಗಿ ಚಿಕಿತ್ಸೆ ನೀಡುವುದರೊಂದಿಗೆ, ಭಗಿನಿ ಸಮಾಜದ ಅನಾಥ ಮಕ್ಕಳಿಗೂ ಉಚಿತ ಚಿಕಿತ್ಸೆ ನೀಡುತ್ತಿದ್ದಾರೆ.

### ಥಿಯೋಸಾಫಿಕಲ್ ಸೊಸೈಟಿ

ಮೇಡಂ ಎಚ್. ಪಿ. ಬ್ಲವಾಟ್ ಸ್ಕಿ ಮತ್ತು ಕರ್ನಲ್ ಎಚ್. ಎಸ್. ಓಲ್ಕಾಟ್ ಅವರಿಂದ ಅಮೆರಿಕಾದ ಸಂಯುಕ್ತ ಸಂಸ್ಥಾನದಲ್ಲಿ ಆರಂಭಗೊಂಡ ಥಿಯೋಸಾಫಿಕಲ್ ಸೊಸೈಟಿಯ ಕೇಂದ್ರಸ್ಥಾನವು, ಭಾರತದಲ್ಲಿ ೧೮೮೬ರಲ್ಲಿ ಮದ್ರಾಸ್ ಸಮೀಪದ ಅಡ್ಯಾರಿನಲ್ಲಿ ಸ್ಥಾಪಿತವಾಯಿತು. ೧೮೯೩ರಲ್ಲಿ ಭಾರತಕ್ಕೆ ಬಂದ ಶ್ರೀಮತಿ ಆನಿಬೆಸೆಂಟರಿಗೆ ಅದರ ನಾಯಕತ್ವವನ್ನು ಕೊಟ್ಟ ಕಾರಣದಿಂದ ಭಾರತದಲ್ಲಿ ಥಿಯೋಸಾಫಿಸ್ಟರ ಚಳವಳಿಯು ಬೆಳೆಯಿತು. ಥಿಯೋಸಾಫಿಸ್ಟರು ಪ್ರಾಚೀನ ಹಿಂದೂ, ಜೊರಾಷ್ಟ್ರ ಮತ್ತು ಬೌದ್ಧ ಧರ್ಮಗಳನ್ನು ಪುನರುಜ್ಜೀವನಗೊಳಿಸಿ ಪ್ರಬಲಗೊಳಿಸುವುದರ ಪ್ರತಿಪಾದಕರಾದರು.[೬೬] ಭಾರತದಲ್ಲಿ ಆಲ್ಫ್ರೆಡ್ ಸಿನ್ನೆಟ್, ಎ.ಒ.

ಹ್ಯೂಮ್, ಗೋಪಾಲಕೃಷ್ಣ ಗೋಖಲೆ, ಮೇಜರ್ ಜನರಲ್ ಮೋರ್ಗನ್ ಮುಂತಾದ ಗಣ್ಯ ಯುರೋಪಿಯನ್ನರು ಮತ್ತು ಭಾರತೀಯರು ಥಿಯೋಸೊಫಿಕಲ್ ಸೊಸೈಟಿಯ ಪ್ರತಿಪಾದಕರಾದರು.

ಪಾಶ್ಚಾತ್ಯ ಕಲ್ಪನೆಗಳಿಂದಲೇ ಪ್ರೇರಣೆ ಪ್ರಭಾವಗಳನ್ನು ಪಡೆದ ಈ ಸುಧಾರಣಾವಾದಿಗಳು ತಮ್ಮ ಪರಂಪರೆಗಳ ಬಗೆಗೆ ಆಳವಾಗಿ ತಿಳಿದವರೇ ಆಗಿದ್ದರು.[೬೭] ಮದರಾಸಿನ ಅಡ್ಯಾರಿನಲ್ಲಿ ಥಿಯೋಸೋಫಿಕಲ್ ಸೊಸೈಟಿಯ ಶಾಖೆಯು ಸ್ಥಾಪಿಸಲ್ಪಟ್ಟ ಮೇಲೆ ಚಳುವಳಿಗೆ ತುಂಬ ಬಲ ಬಂದಿತು. ಪ್ರಾಚೀನ ಆರ್ಯರ ನಡತೆ ಮತ್ತು ವಿವೇಚನೆಗಳನ್ನು ಉದಾಹರಿಸಿದ ಮತ್ತು ಪ್ರಚಾರಮಾಡಿದ ಭಾವೋದ್ರೇಕವು, ಥಿಯೋಸೋಫಿಸ್ಟರನ್ನು ಭಾರತದ ರಾಷ್ಟ್ರೀಯತೆಯ ಉತ್ತೇಜಕ ಪ್ರಭಾವವಾಗಿ ಮಾಡಿತು.[೬೮] ೧೯೦೭ರಲ್ಲಿ ಓಲ್ಕಾಟ್ ತೀರಿಕೊಂಡು ಅನ್ನಿಬೆಸೆಂಟ್ ಸೊಸೈಟಿಯ ಅಧ್ಯಕ್ಷೆಯಾದಾಗ ಅದರ ಅನುಯಾಯಿಗಳ ಸಂಖ್ಯೆ ಹೆಚ್ಚಿತು ಮತ್ತು ಅದೊಂದು ಸುಧಾರಣಾತ್ಮಕ ಸಂಘಟನೆಯಾಯಿತು. ೧೯೦೮ರಲ್ಲಿ ಅವರು ಸ್ಥಾಪಿಸಿದ 'ಥಿಯೋಸೋಫಿಕಲ್ ಆರ್ಡರ್ ಆಫ್ ಸರ್ವೀಸ್' ಪರೋಪಕಾರ, ಸೇವಾಕಾರ್ಯಗಳು, ರಾಷ್ಟ್ರಿಯ ಶಿಕ್ಷಣ, ಬಾಲ್ಯವಿವಾಹ, ಮರಣದಂಡನೆಗಳ ರದ್ಧತಿ, ಮಹಿಳಾ ಶಿಕ್ಷಣಾಭಿವೃದ್ಧಿ ಮುಂತಾದುವುಗಳನ್ನು ಸಲಹೆ ಮಾಡಿತು.

ಅನಿಬೆಸೆಂಟರು ೧೯೦೯ ಮತ್ತು ೧೯೧೭ರಲ್ಲಿ ಮಂಗಳೂರಿಗೆ ಭೇಟಿ ನೀಡಿ ರಾಷ್ಟ್ರೀಯತೆ ಮತ್ತು ಮಹಿಳಾ ಶಿಕ್ಷಣದ ಕುರಿತು ಪ್ರಚಾರಮಾಡಿದರು. ಇದರ ಫಲವಾಗಿ ನ್ಯಾಷನಲ್ ಎಜುಕೇಶನ್ ಸೊಸೈಟಿ ಸ್ಥಾಪಿಸಲ್ಪಟ್ಟು ಮಹಿಳೆಯರಿಗಾಗಿ ಒಂದು ಹೊಸ ಶಾಲೆ ತೆರೆಯಲ್ಪಟಿತು. ಥಿಯೋಸೊಫಿಕಲ್ ಸೊಸೈಟಿಯೊಂದಿಗೆ ಅದರ ಸಂಬಂಧವು ರಾಷ್ಟ್ರೀಯತೆಯ ತೀವ್ರತೆಯ ಒಂದು ಮುಖವಾಗಿದ್ದು ಆಗಾಗ ಹಣಕಾಸಿನ ಮುಗ್ಗಟ್ಟು ಎದುರಿಸಬೇಕಾಯಿತು. ಕೇಶವ ಪೈ ನೇತೃತ್ವದ 'ವಿಮೆನ್ಸ್ ನ್ಯಾಷನಲ್ ಎಜುಕೇಶನ್ ಸೊಸೈಟಿ' ಯು ಅದನ್ನು ವಹಿಸಿಕೊಂಡಾಗ ಈ ಸಮಸ್ಯೆ ಬಗೆಹರಿಯಿತು. ಮಹಿಳೆಯರ ಶಾಲೆಯ ಸ್ಥಾಪನೆಯು ರಾಷ್ಟೀಯತೆಯಿಂದ ಸೆಳೆಯಲ್ಪಟ್ಟು ಒಂದು ಸಮುದಾಯದ ಉದ್ಯಮಶೀಲ ಉತ್ಸಾಹದೊಂದಿಗೆ ಬೆಸೆಯಲ್ಪಟ್ಟಿದ್ದರೂ, ಅನಿಬೆಸೆಂಟರ ರಾಷ್ಟ್ರೀಯ ಶಿಕ್ಷಣದ ಪರಿಕಲ್ಪನೆಯು ಅದಕ್ಕಿಂತ ಹೆಚ್ಚಿನದಾಗಿತ್ತು.

ಪ್ರಥಮ ಮಹಾಯುದ್ಧದ ಕಾಲದಲ್ಲಿ ಅನಿಬೆಸೆಂಟರು ಹುಟ್ಟುಹಾಕಿದ ರಾಜಕೀಯ ಕ್ರೀಯಾಶೀಲತೆಯಿಂದ ಆವಾಹಿಸಲ್ಪಟ್ಟಿದ್ದು ಅದು ಮೃತಾವಸ್ಥೆಯಲ್ಲಿದ್ದ ರಾಷ್ಟ್ರೀಯತೆಯ ರಾಜಕೀಯವನ್ನು ಸಕ್ರಿಯಗೊಳಿಸಿತು. ಐರಿಷ್ ರಾಷ್ಟ್ರೀಯತೆ, ಪ್ರತಿಭಾಪೂರ್ಣ ವಾಕ್ಚಾತುರ್ಯತೆ ಮತ್ತು ಥಿಯೋಸೊಫಿಯ ಮೂಲಕ ಪಡೆದ ಭಾರತ ಮತ್ತು ಭಾರತೀಯ ಸಂಸ್ಕೃತಿಯ ಪ್ರೇಮಗಳಿಂದಾಗಿ ಜನಪ್ರಿಯತೆಗಳಿಸಿಕೊಂಡ ಅನಿಬೆಸೆಂಟ್ ಐರಿಷ್ ಹೋಮ್ ರೂಲ್ ಮಾದರಿಯಲ್ಲಿ ಹೋಮ್ ರೂಲ್ ಚಳುವಳಿಯನ್ನು ೧೯೧೬ರಲ್ಲಿ ಪ್ರಾರಂಭಿಸಿದರು. 'ನ್ಯೂ ಇಂಡಿಯಾ' ಮತ್ತು 'ಕಾಮನ್ ವೀಲ್' ಎಂಬ ಪತ್ರಿಕೆಗಳ ಮೂಲಕ ಅವರು ಯುದ್ಧದ ನಂತರ ಭಾರತಕ್ಕೆ ಸ್ವಯಂ ಆಡಳಿತವನ್ನು ಆಗ್ರಹಿಸಿದರು. ಹೋಮ್ ರೂಲ್ ಗಳನ್ನು ಸ್ಥಾಪಿಸುವಲ್ಲಿ

ಲೋಕಮಾನ್ಯ ತಿಲಕರು ಅವರ ಜೊತೆ ಸೇರಿದರು. ತಮಗೆ ವಹಿಸಲಾದ ಪ್ರದೇಶಗಳಲ್ಲಿ ಇಬ್ಬರೂ ಪರಸ್ಪರ ಸಹಕಾರದೊಂದಿಗೆ ಕಾರ್ಯಪ್ರವೃತ್ತರಾದರು. ಆದರೆ ಈ ಲೀಗ್ ಗಳು ಒಂದುಗೂಡಲಿಲ್ಲ ಏಕೆಂದರೆ ಆಕೆ ಹೇಳುವಂತೆ 'ಅವರ ಕೆಲವು ಅನುಯಾಯಿಗಳು ನನ್ನನ್ನು ಇಷ್ಟಪಡಲಿಲ್ಲ. ನನ್ನ ಕೆಲವು ಸಹಾಯಕರು ಅವರನ್ನು ಇಷ್ಟಪಡಲಿಲ್ಲ. ಆದರೆ ನಮ್ಮಿಬ್ಬರ ನಡುವೆ ಜಗಳವಿರಲಿಲ್ಲ' ಎಂದಿದ್ದಾರೆ.[೬೯] ಪಾಶ್ಚಾತ್ಯ ನಾಗರಿಕತೆಯೊಳಗಿನ ಸಮಾಜೋ-ಧಾರ್ಮಿಕ ಮತಭೇದದ ಮಾದರಿಯಾಗಿ ಹೊರಹೊಮ್ಮಿದ ಥಿಯೋಸಾಫಿಕಲ್ ಆಂದೋಲನವು ಆಧ್ಯಾತ್ಮಿಕ ಗಮ್ಯಸ್ಥಾನ ಮತ್ತು ಸಮರ್ಥನೆಯಾಗಿ ಭಾರತವನ್ನು ತಲುಪಿತು.

## ಆರ್ಯಸಮಾಜ

೧೮೭೫ರಲ್ಲಿ ದಯಾನಂದ ಸರಸ್ವತಿಯವರಿಂದ ಸ್ಥಾಪಿಸಲ್ಪಟ್ಟ ಆರ್ಯಸಮಾಜದ ಪ್ರಭಾವ ದೇಶದೆಲ್ಲೆಡೆ ವ್ಯಾಪಿಸಿತು. ಲಾಹೋರಿನ ಆಂಗ್ಲೋ ವೇದಿಕ್ ಕಾಲೇಜಿನ ಪ್ರಿನ್ಸಿಪಾಲ್ ಪ್ರೊ. ಖಾನ್ ಚಂದ್ ವರ್ಮಾರವರು ಪ್ರಪಂಚ ಪರ್ಯಟನ ಮಾಡಿಕೊಂಡು ೧೯೧೮ನೆಯ ಇಸವಿಯಲ್ಲಿ ಮಂಗಳೂರಿಗೆ ಬಂದು ಆರ್ಯಸಮಾಜವನ್ನು ಸ್ಥಾಪಿಸಿದರು. ಈ ಸಮಾಜದ ಸ್ಥಾಪನೆಯಲ್ಲಿ ಮುಂದಾಳಾಗಿ ನಿಂತವರು ಶ್ರೀ. ಕೆ. ಕಾರಂತರು. ಅವರೊಂದಿಗೆ ಡಾ. ಕರಂಜೆ ಶ್ಯಾಮರಾವ್, ಶ್ರೀ ಕರಂಜೆ ರಾಮ ರಾವ್, ಮಂಜೇಶ್ವರ ಅನಂತ ಕೃಷ್ಣ ರಾವ್ ಮೊದಲಾದವರೂ ಸೇರಿದರು.

ಪ್ರಸ್ತುತ ಜಿಲ್ಲೆಯಲ್ಲಿ ಆರ್ಯಸಮಾಜವಿರುವ ಸ್ಥಳವನ್ನು ಯು.ಸಿ.ಎಸ್. ಕೃಷ್ಣ ಭಟ್ಟರು ದಾನವಾಗಿ ನೀಡಿರುವುದಾಗಿದೆ. ೧೯೨೪ರಲ್ಲಿ ಮಂಗಳೂರಿಗೆ ಆಗಮಿಸಿದ ಸ್ವಾಮಿ ಶ್ರದ್ಧಾನಂದರು ಹೊಸದಾಗಿ ಸ್ಥಾಪಿಸಿದ ಆರ್ಯ ಸಮಾಜದ ದೊಡ್ಡದಾದ ಮಂದಿರವನ್ನು ಉದ್ಘಾಟಿಸಿದರು. ಧರ್ಮದೇವ ವಿದ್ಯಾವಾಚಸ್ಪತಿಯವರು ಆ ಮೇಲೆ ಮಂಗಳೂರಿಗೆ ಪ್ರಚಾರಕರಾಗಿ ಬಂದಾಗ, ಅವರ ಧರ್ಮಪತ್ನಿ ಶ್ರೀಮತಿ ವಿದ್ಯಾವತಿಯವರೂ ಇಲ್ಲಿನ ಆರ್ಯ ಸಮಾಜದ ಪ್ರಗತಿಗಾಗಿ ದುಡಿದರು. ೧೯೩೦- ೩೭ ರವರೆಗೆ ಶ್ರೀ ಲಕ್ಷ್ಮಣ ದೇವ ವಿದ್ಯಾರ್ಥಿಯವರು ಪ್ರಚಾರಕರಾಗಿ ಬಂದರು. ೧೯೩೭ರಲ್ಲಿ ಶ್ರೀ ಮೋಹನಪ್ಪ ತಿಂಗಳಾಯರು ಪ್ರಚಾರಕರಾದರು. ನಾಲ್ಕು ಹಿಂದೂ ಅನಾಥ ಮಕ್ಕಳ ಪ್ರಶ್ನೆ ಬಂದಾಗ ಸ್ವಾಮಿ ಶ್ರದ್ಧಾನಂದ ಸೇವಾಶ್ರಮ ಸ್ಥಾಪಿಸಲಾಗಿ, ೧೯೬೪ ರಲ್ಲಿ ೬೮ ಮಂದಿ ಬಾಲಕರೂ, ೭೨ ಮಂದಿ ಬಾಲಕಿಯರೂ ಕೂಡಿ ೧೪೦ ಮಂದಿ ಸೇವಾಶ್ರಮದಲ್ಲಿ ಇದ್ದರು. ದಕ್ಷಿಣ ಕನ್ನಡ ಜಿಲ್ಲೆಯ ಸಾಮಾಜಿಕ ಸುಧಾರಕರಾದ ಕುದ್ಮುಲ್ ರಂಗರಾವ್, ಕಾರ್ನಾಡ್ ಸದಾಶಿವರಾವ್, ಕಮಲಾದೇವಿ ಚಟ್ಟೋಪಾಧ್ಯಾಯರು ಆರ್ಯಸಮಾಜದ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಕುದ್ಮುಲ್ ರಂಗರಾಯರು ಆರ್ಯ ಸಮಾಜದ ವೇದಿಕೆಯಲ್ಲಿ ಸ್ವಾಮಿ ಈಶ್ವರಾನಂದ ಎಂಬುದಾಗಿ ದೀಕ್ಷೆಯನ್ನು ತೆಗೆದುಕೊಂಡಿದ್ದರು. ದಲಿತ ಮತ್ತು ಅನಾಥ ಅಬಲೆಯರ ರಕ್ಷಣೆಗಾಗಿ ೧೯೩೯ರಲ್ಲಿ ಸ್ವಾಮಿ ಶ್ರದ್ಧಾನಂದ ಆಶ್ರಮ ಪ್ರಾರಂಭಿಸಿ ಮತಾಂತರ ತಡೆಯುವಲ್ಲಿ ಸಫಲರಾಗಿದ್ದಾರೆ.[೭೦]

ಶುದ್ಧಿ ಚಳುವಳಿಯ ಮೂಲಕ ಹಿಂದೂಧರ್ಮಕ್ಕೆ ಮರುಮತಾಂತರ ಮಾಡುವ ಪ್ರಕ್ರಿಯೆ ಪ್ರಾರಂಭವಾದಾಗ ಜಿಲ್ಲೆಯಲ್ಲಿ ಸಕಾರಾತ್ಮಕವಾದ ಪ್ರತಿಕ್ರಿಯೆಯ ಬಗ್ಗೆ ಪತ್ರಿಕೆಗಳಲ್ಲಿ ಕಂಡು ಬಂದ ವರದಿಯನ್ನು ದಾಖಲಿಸಲಾಗಿದೆ. ೧೯೩೨ರಲ್ಲಿ ರೋಮನ್ ಕೆಥೋಲಿಕ್ ಮತಕ್ಕೆ ಸೇರಿದ ಬಂಟ ಕುಟುಂಬವೊಂದರ ಮರುಮತಾಂತರ ಪ್ರಕ್ರಿಯೆ ನಡೆಯಿತು. ಇದಾದ ಬಳಿಕ ಮಾರಿಯಾ, ಮಾಡ್ತು, ಪುಲ್ಲ ಮತ್ತು ಬೌತಿಸ್ ಎಂಬುವವರು ಕ್ರಮವಾಗಿ ಕಾವೇರಿ, ಕಮಲಾ, ರಾಧಾ ಮತ್ತು ಭಾಸ್ಕರ್ ಎಂಬ ಹೆಸರು ಪಡೆದರು.[೭೧] ೧೯೩೪ರಲ್ಲಿ ಆರ್ಯಸಮಾಜದ ಪ್ರಾರ್ಥನಾ ಭವನದಲ್ಲಿ ಕಾರ್ಕಳದ ನೀರೆಬೈಲೂರಿನ ಸದಾನಂದ್ ಹೆಗ್ಡೆ ರೋಮನ್ ಕೆಥೋಲಿಕ್ ವಧು ಮಿಸ್ ನಥಾ ಮಚಾದೋ ಎಂಬ ಕನ್ಯೆಯನ್ನು ಆರ್ಯಸಮಾಜದ ವಿಧಿಯ ಪ್ರಕಾರ ವಿವಾಹವಾದನು. ವಧುವನ್ನು ಹಿಂದು ಧರ್ಮಕ್ಕೆ ಮತಾಂತರಿಸಿ ಆಕೆಗೆ ಉರ್ಮಿಳಾ ಎಂಬ ಹೆಸರು ಕೊಡಲಾಯಿತು.[೭೨] ೧೯೩೫ರಲ್ಲಿ ಮಂಗಳೂರಿನ ಆರ್ಯ ಸಮಾಜದಲ್ಲಿ ಬಂಟ ಜಾತಿಗೆ ಸೇರಿದ ಗಂಡ ಹೆಂಡತಿ ಮತ್ತು ನಾಲ್ಕು ಮಕ್ಕಳು ಮರುಮತಾಂತರ ಹೊಂದಿರುವುದನ್ನು ಸ್ವದೇಶಾಭಿಮಾನಿ ಪತ್ರಿಕೆ ವರದಿ ಮಾಡಿರುತ್ತದೆ.[೭೩]

### ದಿ ಡಿಪ್ರೆಸ್ಡ್ ಕ್ಲಾಸ್ ಮಿಷನ್

೧೮೯೭ರಲ್ಲಿ ಕುದ್ಮುಲ್ ರಂಗರಾಯರು 'ಡಿಪ್ರೆಸ್ಡ್ ಕ್ಲಾಸ್ ಮಿಷನ್' ಎಂಬ ಸಂಸ್ಥೆಯನ್ನು ಸಮಾಜದ ಕೆಳವರ್ಗದವರಿಗೆ ಶಿಕ್ಷಣ, ವಸತಿ ಹಾಗೂ ಅವರನ್ನು ಸಬಲೀಕರಣಗೊಳಿಸುವ ನಿಟ್ಟಿನಲ್ಲಿ ಸ್ಥಾಪಿಸಿದರು. ಇದರ ಕಾರ್ಯದರ್ಶಿಗಳಾಗಿ, ಇಂಡಿಯನ್ ಮೆಸೆಂಜರ್ ಪತ್ರಿಕೆಯ ಮೂಲಕ ರಂಗರಾಯರು ಲೇಖನಗಳನ್ನು ಪ್ರಕಟಿಸುತ್ತಿದ್ದುದರಿಂದ ಉತ್ತಮ ಫಲಿತ ಲಭಿಸಿ, ವಿದ್ಯಾರ್ಥಿಗಳಿಗೆ ಭೋಜನ ನೀಡಿ ಶಿಕ್ಷಣ ನೀಡುವ ತವಕ ಹೆಚ್ಚಿತು. ಪಂಚಮರ ವಸತಿಗೃಹಗಳ ನಿರ್ಮಾಣಕ್ಕಾಗಿ ಸರಕಾರ ೨೧.೫ ಎಕರೆ ಸ್ಥಳ ನೀಡಿ ಎರಡು ವರ್ಷಗಳ ಅವಧಿಯಲ್ಲಿ ಕಟ್ಟಡಗಳನ್ನು ನಿರ್ಮಾಣ ಮಾಡಿ ಅವರ ಕುಟುಂಬಗಳಿಗೆ ಹಂಚಿಕೆ ಮಾಡಬೇಕೆಂಬ ಷರತ್ತು ಹಾಕಿತು. ಅಂತೆಯೇ ಈ ನಿಟ್ಟಿನಲ್ಲಿ ರಂಗರಾಯರು ೨೯೮೨ರೂಪಾಯಿಗಳನ್ನು ಸಂಗ್ರಹಿಸಿದ್ದನ್ನು ೧೯೦೯ರ ಅಗೋಸ್ಟು ೧೫ರ ಪತ್ರಿಕೆಯಲ್ಲಿ ಅಂಗೀಕರಿಸಿದ್ದಾರೆ. ಜಿಲ್ಲೆಯ ದಾನಿಗಳು ಕೂಡಾ ಕಟ್ಟಡ ಕಾಮಗಾರಿಗೆ ಹೆಂಚು ಮತ್ತು ಮಕ್ಕಳಿಗಾಗಿ ಹಣ್ಣು ಹಂಪಲು ಮತ್ತು ಸಿಹಿ ತಿಂಡಿಗಳನ್ನು ನೀಡಿ ಪ್ರೋತ್ಸಾಹಿಸಿರುವರು. ಸಾರಸ್ವತ ನೇತಾರರಾದ ಅಮ್ಮೆಂಬಳ ಸುಬ್ಬರಾವ್ ಪೈಯವರು ಕೂಡಾ ಡಿಪ್ರೆಸ್ಡ್ ಕ್ಲಾಸ್ ಮಿಷನ್ನಿನ ಸದಸ್ಯರಾಗಿದ್ದರು.

### ಈಶ್ವರಾನಂದ ಮಹಿಳಾ ಸೇವಾಶ್ರಮ ಸಂಸ್ಥೆ

೧೯೨೮ರಲ್ಲಿ ದಿವಂಗತ ಡಾಕ್ಟರ್ ಬೆನೆಗಲ್ ರಾಘವೇಂದ್ರ ರಾಯರು ಮತ್ತು ಕೆಲವು ಗಣ್ಯ ವ್ಯಕ್ತಿಗಳ ಸಹಾಯದಿಂದ ಸ್ವಾಮಿ ಈಶ್ವರಾನಂದ ಹೆಸರಿನಲ್ಲಿ ದೀನದಲಿತ, ಅನಾಥ ಹೆಣ್ಮಕ್ಕಳು ಮತ್ತು ವಿಧವೆಯರ ಉದ್ಧಾರಕ್ಕಾಗಿ ಸ್ಥಾಪಿಸಲ್ಪಟ್ಟ ಸ್ವಯಂ ಸೇವಾಸಂಸ್ಥೆ. ಈ ಸಂಸ್ಥೆಯ ನಿಸ್ವಾರ್ಥ ಸೇವೆಯ ನೆರಳಲ್ಲಿ ಸಾವಿರಾರು

ಅನಾಥ ನಿರ್ಗತಿಕ ಹೆಣ್ಣುಮಕ್ಕಳು, ವಿಧವೆಯರು ವಿದ್ಯಾರ್ಜನೆ ಮಾಡಿ ಜೊತೆಗೆ ತಮ್ಮ ಭವಿಷ್ಯದಲ್ಲಿ ಸಾರ್ಥಕ, ಸಾತ್ವಿಕ, ಶಾಂತಿಯುತ ಜೀವನ ನಡೆಸುತ್ತಿದ್ದಾರೆ. ೧೯೩೧-೩೨ರಲ್ಲಿ ಈಶ್ವರಾನಂದ ಸೇವಾಶ್ರಮದ ಆಡಳಿತ ಮಂಡಳಿಯಲ್ಲಿ ಇದ್ದವರೆಂದರೆ ರಾವ್ ಸಾಹೇಬ್ ರಾಘವೇಂದ್ರ ರಾವ್, ಶ್ರೀನಿವಾಸ ಪೈ, ಗಣೇಶ್ ಶ್ರೀನಿವಾಸ್ ಪೈ, ಅಣ್ಣಪ್ಪ ನಾಯಕ್, ನರಸಿಂಗ ರಾವ್, ಎ. ರಾಮರಾವ್, ಟಿ. ರಾಮರಾವ್, ಸೌಭಾಗ್ಯವತಿ, ಪಿ. ಕಲ್ಯಾಣಿ ಬಾಯಿ, ಸೌಭಾಗ್ಯವತಿ ಮುಂದಕುರ್ ಅಂಬಾಬಾಯಿ ಗೌರವಯುತ ನ್ಯಾಯಾಧೀಶರು, ಕದ್ರಿ, ಮಂಗಳೂರು, ಶ್ರೀಮತಿ ಸಾಲಿತ್ತೂರು ಲಲಿತಾಬಾಯಿ, ಶ್ರೀಮತಿ ಆರ್. ಕೆ. ಪ್ರಭು, ಶ್ರೀಮತಿ. ಕೆ. ಶಾಂತಾಬಾಯಿ ಮುಂತಾದವರು.[೭೪] ೧೯೩೧-೩೨ರ ವರದಿಯಲ್ಲಿ ಕಂಡುಬರುವಂತೆ ಆಶ್ರಮದ ನಿವಾಸಿಗಳ ಸಂಖ್ಯೆ ವರ್ಷಂಪ್ರತಿ ಹೆಚ್ಚಾಗುತ್ತಿದ್ದು, ಪ್ರಸ್ತುತ ವರ್ಷದಲ್ಲಿ ೩೮ರಷ್ಟು ಏರಿಕೆಯಾಗಿರುತ್ತದೆ. ಇವರಲ್ಲಿ ೧೮ ಮಂದಿ ಅನಾಥರು ಮತ್ತು ೫ ಮಂದಿ ವಿಧವೆಯರೂ ಸೇರಿದ್ದರು. ಆಶ್ರಮದಲ್ಲಿ ಶಿಕ್ಷಣ ಪಡೆದು ಹೊರಹೋದವರು ನರ್ಸಿಂಗ್, ಸೂಲಗಿತ್ತಿ ತರಬೇತಿ ಮತ್ತು ಶಿಕ್ಷಕ ತರಬೇತಿಯನ್ನು ಪಡೆದು ಬೆಂಗಳೂರು, ತಂಜಾವೂರಿನಲ್ಲಿ ವೃತ್ತಿಯಲ್ಲಿರುವರು.

ಈಶ್ವರಾನಂದ ಬಾಲಿಕಾಶ್ರಮದಲ್ಲಿ ಶಿಕ್ಷಣವನ್ನು ಪಡೆದ ಟಿ. ಮಹಾಲಕ್ಷ್ಮಿಯವರು ಹೇಳುವಂತೆ '೧೯೪೪ರಲ್ಲಿ ಈ ಆಶ್ರಮದಲ್ಲಿ ಸೇರ್ಪಡೆಗೊಂಡ ನಾನು ಪುತ್ತೂರಿನ ಸರಕಾರಿ ಪ್ರೌಢಶಾಲೆಯ ಬಡ ಅಧ್ಯಾಪಕರೊಬ್ಬರ ಒಂಬತ್ತು ಮಕ್ಕಳಲ್ಲಿ ಎರಡನೆಯವಳಾಗಿದ್ದೆ. ಎಂಟನೇ ತರಗತಿಯನ್ನು ಹನ್ನೆರಡನೇ ವರ್ಷದಲ್ಲಿ ಮುಗಿಸಿದ್ದು ಹದಿನಾಲ್ಕನೇ ವಯಸ್ಸಿನಲ್ಲಿ ತನ್ನ ಕುಟುಂಬಕ್ಕೆ ಆಧಾರವಾಗಿದ್ದ ತನ್ನ ತಂದೆ ಹಾಗೂ ಗಂಡನನ್ನು ಕಳೆದುಕೊಂಡು ಅಂತರ್ಮುಖಿಯಾಗಿ ಶೂನ್ಯ ಪ್ರಪಂಚದಲ್ಲಿ ಲೀನವಾಗಿದ್ದೆ. ಕಡಲ ತಡಿಯ ಭಾರ್ಗವ ದಿವಂಗತ ಶಿವರಾಮ ಕಾರಂತರ ಗರಡಿಯಲ್ಲಿ ನಾಟಕ, ನೃತ್ಯ, ಸಂಗೀತ, ನಾಡಹಬ್ಬಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದ ನಾನು ಬಾಳ ಹೊಸ್ತಿಲಲ್ಲೇ ಎದುರಾದ ದುರಂತದಿಂದ ಸಂಪೂರ್ಣವಾಗಿ ತನ್ನತನವನ್ನು ಕಳೆದುಕೊಂಡು ಗಾಂಧಕಾರದಲ್ಲಿ ಮುಳುಗಿ ನಿತ್ಯ ಕಣ್ಣೀರಿಡುತ್ತಿದ್ದೆ. ಆ ಸಂದರ್ಭದಲ್ಲಿ ಈಶ್ವರಾನಂದ ಮಹಿಳಾ ಸೇವಾಶ್ರಮ ಕೈ ಹಿಡಿದು ಮುನ್ನಡೆಸಿತು. ಆರು ವರ್ಷಕಾಲಗಳ ಆಶ್ರಮ ಜೀವನದಲ್ಲಿ ನಾನು ಪಡೆದ ಅನುಭವ ಜ್ಞಾನ ಎಲ್ಲಾ ತತ್ವಾದರ್ಶಗಳ ಜ್ಞಾನದಲ್ಲಿ ಅತ್ಯಂತ ಶ್ರೇಷ್ಠವಾದ ಅನುಭವ ಜ್ಞಾನ'ಎಂದಿದ್ದಾರೆ.[೭೫]

೧೯೩೩ರ ವರದಿಯ ಪ್ರಕಾರ ಸೇವಾಶ್ರಮದ ನಿವಾಸಿಗಳ ಸಂಖ್ಯೆ ೪೫ಕ್ಕೆ ಏರಿಯಾಗಿದ್ದು, ಅವರಿಗೆ ಹೊಲಿಗೆ ಹಾಗೂ ಇತರ ಕೌಟುಂಬಿಕ ಅವಶ್ಯಕತೆಗಳಿಗೆ ಸಂಬಂಧಿಸಿದಂತೆ ತರಬೇತಿ ನೀಡಲಾಗುತ್ತಿದ್ದು, ಬೆಳಗ್ಗೆ ಸೂರ್ಯನಮಸ್ಕಾರದ ಜೊತೆಗೆ ಕ್ರೀಡೆಗಳಾದ ಬ್ಯಾಡ್ಮಿಂಟನ್, ಸ್ಕಿಪಿಂಗ್ ತರಬೇತಿಯನ್ನೂ ನೀಡಲಾಗುತ್ತಿತ್ತು. ಸೇವಾಶ್ರಮದ ಮೇಲ್ವಿಚಾರಕಿಯಾಗಿ ಶ್ರೀಮತಿ ಕೆ. ಶಾಂತಾಬಾಯಿ ಕಾರ್ಯ ನಿರ್ವಹಿಸುತ್ತಿದ್ದರು. ೧೯೩೧ರ ನವೆಂಬರ್ ೨೭ರಂದು ಈಶ್ವರಾನಂದ ಸೇವಾಶ್ರಮವನ್ನು ಭೇಟಿ ನೀಡಿದ ಕಮಲಾದೇವಿ ಚಟ್ಟೋಪಾಧ್ಯಾಯರು,

'ಮಬ್ಬಾದ ಮಹಿಳೆಯರ ಬಾಳಿನಲ್ಲಿ ಶಿಕ್ಷಣ ನೀಡುವ ಮೂಲಕ ಸಂತಸದ ಆಶಾಕಿರಣವನ್ನು ಮೂಡಿಸಿದ ಹೆಮ್ಮೆ ಈ ಸಂಸ್ಥೆ ಇದಾಗಿದೆ. ಸಂಸ್ಥೆಯ ಸಂಘಟಕರ ಪ್ರಯತ್ನಕ್ಕೆ ಅಭಿನಂದನೆಗಳು'ಎಂದಿದ್ದಾರೆ. ಮಹಿಳೆಯರು ಮತ್ತು ಮಕ್ಕಳಿಗಾಗಿ ಸರಕಾರಿ ಆಸ್ಪತ್ರೆ ಸ್ಥಾಪಿಸಲ್ಪಟ್ಟಿದ್ದರೂ, ಮಧ್ಯಮ ವರ್ಗದವರು ಅದರ ಸೌಲಭ್ಯ ಪಡೆದುಕೊಳ್ಳಲು ಹಿಂಜರಿಯುತ್ತಿದ್ದರು. ಈ ನಿಟ್ಟಿನಲ್ಲಿ ಸಾಂಸ್ಥಿಕ ಚಿಕಿತ್ಸೆಯ ಕುರಿತು ಅರಿವು ಮೂಡಿಸಲು ೧೯೩೮ರ ಜೂನ್ ತಿಂಗಳಿನಲ್ಲಿ ಈಶ್ವರಾನಂದ ಮಹಿಳಾ ಸೇವಾಶ್ರಮ ಸೊಸೈಟಿಯು 'ಸೇವಾಶ್ರಮ ಮೆಟರ್ನಿಟಿ ನರ್ಸಿಂಗ್ ಹೋಮ್' ಎಂಬ ಸಂಸ್ಥೆಯನ್ನು ಸ್ಥಾಪಿಸಿತು. ೧೯೩೧ರ ಜೂನ್ ಮತ್ತು ನವೆಂಬರ್ ತಿಂಗಳಿನ ಅವಧಿಯಲ್ಲಿ ಸುಮಾರು ೭೩ ರೋಗಿಗಳು ಚಿಕಿತ್ಸೆ ಪಡೆದುಕೊಂಡಿದ್ದು ಇವರಲ್ಲಿ ೨೪ ಮಂದಿ ಹೆರಿಗೆ ನಿಮಿತ್ತ ದಾಖಲಾಗಿದ್ದರು ಎಂಬುದು ವರದಿಯಾಗಿದೆ. ಲೆಫ್ಟಿನೆಂಟ್ ಕರ್ನಲ್ ಡಬ್ಲ್ಯು. ವೆಬ್ ನಿರ್ದೇಶಕರು, ಸಾರ್ವಜನಿಕ ಆರೋಗ್ಯ ಇಲಾಖೆ, ಮದ್ರಾಸ್, ಮೇಜರ್ ವಿ.ಆರ್. ಮಿರಾಜ್ ಕಾರ್ (ಇಂಡಿಯನ್) ಮೆಡಿಕಲ್ ಸರ್ವೀಸ್ ಲಾಹೋರ್, ಶ್ರೀಮತಿ ಟಿ. ಎಂ ಸುಂದರಿ, ಮಹಿಳಾ ವೈದ್ಯರು, ಮಹಿಳಾ ಮತ್ತು ಮಕ್ಕಳ ಆಸ್ಪತ್ರೆ, ಉಡುಪಿ, ಇವರುಗಳು ಆಸ್ಪತ್ರೆಗೆ ಆಗಾಗ್ಗೆ ಭೇಟಿ ಕೊಟ್ಟು ರೋಗಿಗಳಿಗೆ ಚಿಕಿತ್ಸೆ ನೀಡುತ್ತಿದ್ದರು.

ಆಸ್ಪತ್ರೆಯ ಸಂದರ್ಶಕ ವೈದ್ಯರಾದ ಡಾ. ಮಿರಾಜ್ಕರ್ ತಿಳಿಸುವಂತೆ 'ಸೇವಾಶ್ರಮ ನಡೆಸುತ್ತಿರುವ ಹೆರಿಗೆ ಆಸ್ಪತ್ರೆಯು ಸಾರ್ವಜನಿಕರಿಗೆ ಸೇವೆಯನ್ನು ಮಾಡುತ್ತಿರುವುದು ಶ್ಲಾಘನೀಯ. ಈ ಭಾಗದ ಮಹಿಳೆಯರು ಆಸ್ಪತ್ರೆಗೆ ಹೋಗಿ ಚಿಕಿತ್ಸೆ ಪಡೆಯಲು ಹಿಂಜರಿಕೆ ತೋರುತ್ತಿದ್ದು ಅಂಥವರಿಗೆ ಮತ್ತು ಸಂಪ್ರದಾಯಸ್ಥ ಮಹಿಳೆಯರಿಗೆ ಆಸ್ಪತ್ರೆಯು ಸಹಕಾರಿಯಾಗಲಿದೆ. ಈಶ್ವರಾನಂದ ಮಹಿಳಾ ಸೇವಾಶ್ರಮದಲ್ಲಿದ್ದು ಶಿಕ್ಷಣ ಪಡೆದು ಕೆಲವರು ಇಲ್ಲಿ ದಾದಿಯರಾಗಿ ಕಾರ್ಯ ನಿರ್ವಹಿಸುತ್ತಿರಲು ಕಾರಣರಾಗಿರುವ ಡಾ. ಎಂ. ಶಿವರಾವ್ ಇವರ ನಿರಂತರ ಪ್ರಯತ್ನ ಗಮನಾರ್ಹವಾಗಿದೆ' ಎಂದು ಅಭಿಪ್ರಾಯ ಪಟ್ಟಿದ್ದಾರೆ. ಕಣ್ಣಾನ್ನೂರಿನ ಸರಕಾರಿ ಮಹಿಳಾ ತರಬೇತಿ ಸಂಸ್ಥೆಯ ಮೇಲ್ವಿಚಾರಕಿಯಾದ ಶ್ರೀಮತಿ ಕಲ್ಯಾಣಿಅಮ್ಮನವರು ಆಸ್ಪತ್ರೆಯು ಮಹಿಳೆಯರಿಗೆ ನೀಡುತ್ತಿರುವ ಕೊಡುಗೆಯನ್ನು ಕೊಂಡಾಡಿರುವರು.[೭೭]

ಈಶ್ವರಾನಂದ ಮಹಿಳಾ ಸೇವಾಶ್ರಮ ಮತ್ತು ಸೊಸೈಟಿಗೆ ಭೇಟಿ ನೀಡಿದ ಮಹನೀಯರಾದ ಬಿ. ಕಮಲಾ ಬಾಯಿ (ಮಹಾರಾಣಿ ತರಬೇತಿ ಕಾಲೇಜು, ಮೈಸೂರು), ಶ್ರೀಮತಿ ಮಾರ್ಗರೆಟ್ ವಾಲ್ಸ್, ಶ್ರೀಮತಿ ವರ್ಗೀಸ್, ಶ್ರೀಮತಿ ಗೌರಿ ಸಂಕುನಿ (ಇನ್ಸ್ಪೆಕ್ಟ್ರೆಸ್ ಆಫ್ ಸ್ಕೂಲ್ಸ್), ಆನಂದಿ ಬಾಯಿ ಅಡ್ವಕೇಟ್, ಮದ್ರಾಸ್, ಶಾಂಭವಿ ಪೂಂಜ, ದಕ್ಷಿಣ ಕನ್ನಡ ಜಿಲ್ಲಾ ಬೋರ್ಡಿನ ಸದಸ್ಯರು, ದಕ್ಷಿಣ ಕನ್ನಡ ಜಿಲ್ಲೆಯ ನ್ಯಾಯಾಧೀಶರಾದ ಅಮಿರುದ್ದೀನ್ ಸಾಹಬ್ ಮತ್ತು ಬೇಗಂ ಸುಲ್ತಾನಾ ಅಮಿರುದ್ದೀನ್ ಮತ್ತಿತರರು ಮಹಿಳೆಯರ ಏಳಿಗೆಗಾಗಿ ಶ್ರಮಿಸುವ ಈಶ್ವರಾನಂದ ಮಹಿಳಾ ಸೇವಾಶ್ರಮದ ಕೊಡುಗೆಯನ್ನು ಹೊಗಳಿರುವುದು ದಾಖಲೆಗಳಿಂದ ತಿಳಿದು ಬರುತ್ತದೆ.

### ಪ್ರಾದೇಶಿಕ ಹಿಂದಿ ಪ್ರಚಾರ ಸಮಿತಿ

೧೯೪೬ರ ಜೂನ್ ೩೦ರಂದು ಸ್ಥಾಪನೆಯಾಗಿರುವ ಪ್ರಾದೇಶಿಕ ಹಿಂದಿ ಪ್ರಚಾರ ಸಮಿತಿಯ ಕಛೇರಿಯು ಪ್ರಸ್ತುತ ಮಂಗಳೂರಿನ ಲಾಲ್‌ಭಾಗ್ ನಲ್ಲಿದೆ. ಈ ಸಂಸ್ಥೆಯ ಪ್ರಥಮ ಪದಾಧಿಕಾರಿಗಳಲ್ಲಿ ಕಲ್ಯಾಣಿ ಡಿ. ಶೆಟ್ಟಿ ಉಪಾಧ್ಯಕ್ಷರಾಗಿ, ಯು. ಸರಸ್ವತಿ ಮಲ್ಯ ಇವರು ಸಮಿತಿಯ ಸದಸ್ಯರಾಗಿದ್ದರು. ಈ ಸಮಿತಿಯು ಹಿಂದಿ ಭಾಷೆಗೆ ಸಂಬಂಧಿಸಿ ಸಂಚಾಲನೆ, ಪ್ರಚಾರ ಸಂಘಟನೆ, ಪುಸ್ತಕಾಲಯ, ವಾಚನಾಲಯಗಳ ನಿರ್ವಹಣೆ, ಪ್ರಚಾರಕರ ಸಮ್ಮೇಳನ, ಸಂಘಟನೆ ಮುಂತಾದ ಕಾರ್ಯಕ್ರಮಗಳನ್ನು ನಡೆಸುತ್ತಾ ಬಂದಿರುತ್ತದೆ. ಗಾಂಧೀಜಿಯವರ ಪ್ರೇರಣೆಯಿಂದ ಜಿಲ್ಲೆಯ ಹಲವು ಮಹಿಳೆಯರು ಹಿಂದಿಭಾಷೆ ಕಲಿತು ರಾಷ್ಟ್ರಭಾಷಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವುದು ಪತ್ರಿಕೆಗಳಲ್ಲಿ ಪ್ರಕಟಗೊಂಡಿರುತ್ತದೆ.[೭೭]

### ೪.೩ ಸಮಾಜ ಸುಧಾರಣೆ ಮತ್ತು ಮಹಿಳಾಪರ ನೀತಿಗಳು

ಬ್ರಿಟಿಷರ ಆಳ್ವಿಕೆಯಲ್ಲಿಯೇ ಸಾಮಾಜಿಕ ಸುಧಾರಣೆಗಳಿಗೆ ಅನ್ವಯಿಸಿದ ಶಾಸನಗಳು ಭಾರತೀಯರ ಜೀವನ ಮತ್ತು ಸಂಸ್ಕೃತಿಗಳಲ್ಲಿ ಆಳವಾಗಿ (ವಿಶೇಷವಾಗಿ ಬಂಗಾಳದಲ್ಲಿ) ನುಸುಳಿದವು. ಈ ಶಾಸನವು ಖಾಸಗಿ ಮತ್ತು ನಿಕಟ ಸಂಬಂಧಿ ವಿಷಯಗಳಾದ ವಿವಾಹ, ತಾಯ್ತನ, ಲಿಂಗ ಮತ್ತು ಲೈಂಗಿಕತೆ ಅದೇ ರೀತಿ ಆಸ್ತಿಕಾಯಿದೆಗಳು ಮತ್ತು ಶಿಕ್ಷಣವೂ ಸೇರಿವೆ. ನೈತಿಕ ಕಟ್ಟುಪಾಡುಗಳು ಮತ್ತು ವಸಾಹತುಶಾಹಿ ರಚನಾಕ್ರಮಗಳು ಶಾಸನಗಳ ಆವಶ್ಯಕತೆಗೆ ಅನುವು ಮಾಡಿತು. ಯೇಜ್ ಆಫ್ ಕನ್ಸಂಟ್ ೧೮೯೧, ಕಾಯ್ದೆಯ ಪ್ರಕಾರ ಹುಡುಗಿಯರ ನ್ಯಾಯಬದ್ಧ ಲೈಂಗಿಕತೆಯ ವಯಸ್ಸಿನ ಮಿತಿಯನ್ನು ೧೦ರಿಂದ ೧೨ಕ್ಕೆ ಏರಿಸಲಾಯಿತು. ವಸಾಹತುಶಾಹಿ ರಾಷ್ಟ್ರದಲ್ಲಿ ಇದೊಂದು ಅಧಿಕ ಚರ್ಚಾಸ್ಪದ ಕಾನೂನಾಗಿ ಸಂಭವಿಸಿತು. ಈ ಕಾಯ್ದೆ ದೇಶಿಯ ಪುರುಷವರ್ಗದ ತೀವ್ರ ಪ್ರತ್ಯಾಘಾತಕ್ಕೊಳಪಟ್ಟಿತು. ಇದೊಂದು ಸಮಾನ ಚಿಂತನೆಯ ಗುಂಪುಗಳಾದ ವಸಾಹತು ಮತ್ತು ವಸಾಹತುಶಾಹಿ ರಾಷ್ಟ್ರಗಳಿಗೆ ಸಂಬಂಧಪಡದ ಆಧುನಿಕತೆ ಮತ್ತು ಸಂಪ್ರದಾಯ ತತ್ವಗಳನ್ನೂ ಒಳಗೊಂಡಿತ್ತು.[೭೮]

ಎಂಟರ ಹರೆಯ ಅಥವಾ ಅದಕ್ಕಿಂತ ಕಡಿಮೆ ಇರುವ ಬಾಲಕಿಯರನ್ನು ಅತ್ಯಾಚಾರಕ್ಕೊಳಪಡಿಸಿದರೆ ಮರಣದಂಡನೆ ಶಿಕ್ಷೆ ಹಾಗೂ ಇತರ ವ್ಯಾಜ್ಯಗಳಿಗೆ ಜೀವಾವಧಿ ಶಿಕ್ಷೆಯನ್ನು ವಿಧಿಸುವ ಕಾಯ್ದೆಯನ್ನು ಕಲ್ಕತ್ತಾ, ಬಾಂಬೆ ಮತ್ತು ಮದ್ರಾಸ್ ಪ್ರಾಂತ್ಯಗಳಲ್ಲಿ ೧೮೨೪ರಲ್ಲಿ ಜಾರಿಗೊಳಿಸಲಾಯಿತು. ಹತ್ತುವರ್ಷಕ್ಕಿಂತ ಕೆಳಗಿನ ವಯಸ್ಸಿನ ಹೆಣ್ಣುಮಕ್ಕಳನ್ನು ಲೈಂಗಿಕತೆಗೆ ಒಳಪಡಿಸುವುದನ್ನು ಸೆಕ್ಷನ್ ೩೭೬ರ ಭಾರತೀಯ ದಂಡ ಸಂಹಿತೆ ೧೮೬೦ರ ಅನ್ವಯ ಶಿಕ್ಷಾರ್ಹವೆಂದು ಪರಿಗಣಿಸಲಾಯಿತು.[೭೯] ೧೮೭೦ರಲ್ಲಿ ಜಾರಿಗೆ ಬಂದ ವಿಶೇಷ ಕಾಯ್ದೆ ಭಾರತದ ವಾಯುವ್ಯ ಭಾಗದಲ್ಲಿ ಹೆಣ್ಣು ಶಿಶುಹತ್ಯೆಯನ್ನು ನಿಗ್ರಹಿಸುವಲ್ಲಿ ಪರಿಣಾಮಕಾರಿಯಾಗಿತ್ತು. ಆದರೆ ಈ ಕಾಯ್ದೆಯನ್ನು ೧೯೦೬ರಲ್ಲಿ ಹಿಂಪಡೆಯಲಾಯಿತು. ಇದೊಂದು ಪರಿಣಾಮಕಾರಿಯಾಗಿದ್ದ ಕಾಯ್ದೆಯಾಗಿದ್ದು

ಅತ್ಯಂತ ಕಡಿಮೆ ಅವಧಿಯವರೆಗೆ ಜಾರಿಯಲ್ಲಿದ್ದ ಅದ್ವಿತೀಯ ಕಾಯ್ದೆ ಇದಾಗಿದೆ. ಬಾಲ್ಯವಿವಾಹ ತಡೆಗಟ್ಟುವ ನಿಟ್ಟಿನಲ್ಲಿ ಈಶ್ವರಚಂದ್ರ ವಿದ್ಯಾಸಾಗರ್ ಇವರ ಪ್ರಯತ್ನವನ್ನು ೧೮೬೦ ಮತ್ತು ೧೮೮೦ರಲ್ಲಿ ಕೇಶಬ್ ಚಂದ್ರಸೇನ್ ಮುಂದುವರಿಸಿದರು. ಇವರ ಸತತ ಪ್ರಯತ್ನದಿಂದ ಬಾಲ್ಯವಿವಾಹ, ಬಹುಪತ್ನಿತ್ವ, ಅಂತರ್ಜಾತೀಯ ವಿವಾಹವನ್ನು ನಿಷೇಧಿಸುವ ನಿಟ್ಟಿನಲ್ಲಿ ದೇಶೀಯ ವಿವಾಹ ಕಾಯ್ದೆ ಜಾರಿಗೆ ಬಂದಿತು. ಆದರೆ ಕೇಶಬ್ ಚಂದ್ರಸೇನ್ ತನ್ನ ಮಗಳನ್ನು ೧೪ ವರ್ಷ ತುಂಬುವ ಮೊದಲೇ ವಿವಾಹ ನೆರವೇರಿಸಿರುವುದರಿಂದ ಬ್ರಹ್ಮ ಸಮಾಜದಲ್ಲಿ ಪ್ರತಿರೋಧ ವ್ಯಕ್ತವಾಗಿ ಸಾಧಾರಣ ಬ್ರಹ್ಮಸಮಾಜವೆಂಬ ಹೊಸ ಗುಂಪು ೧೮೭೮ರಲ್ಲಿ ಸ್ಥಾಪನೆಗೊಂಡಿತು.

ವಸಾಹತು ಕಾಲಘಟ್ಟದಲ್ಲಿ ಭಾರತದಾದ್ಯಂತ ಬಾಲ್ಯವಿವಾಹ ದೊಡ್ಡ ಸವಾಲಾಗಿದ್ದು ಸಮಾಜ ಸುಧಾರಕರಾದ ಶ್ರೀ ಮಲಬಾರಿಯವರು ೧೮೮೧ರಲ್ಲಿ ಬ್ರಿಟಿಷ್ ಭಾರತದಲ್ಲಿ ನಡೆದ ಬಾಲ್ಯವಿವಾಹಗಳ ದತ್ತಾಂಶಗಳನ್ನು ನೀಡಿರುವ ಪ್ರಕಾರ ೯ವರ್ಷ ಮೀರುವ ಮೊದಲೇ ವಿವಾಹವಾದ ಪುರುಷರ ಸಂಖ್ಯೆ ೬೬೮೦೦೦ ಆಗಿದ್ದು, ಮಹಿಳೆಯರ ಸಂಖ್ಯೆ ೧೯೩೨೦೦೦ ರಷ್ಟಿತ್ತು. ಅದೇ ರೀತಿ ೧೦ ರಿಂದ ೧೪ ವರ್ಷದಲ್ಲಿ ವಿವಾಹವಾದ ಪುರುಷರ ಸಂಖ್ಯೆ ೧೮೦೮೦೦೦ ರಷ್ಟಿದ್ದು, ಮಹಿಳೆಯರ ಸಂಖ್ಯೆ ೪೯೯೫೦೦ ರಷ್ಟು ಮತ್ತು ೧೫ ರಿಂದ ೧೯ ವರ್ಷದ ಒಳಗೆ ವಿವಾಹವಾದ ಪುರುಷರ ಸಂಖ್ಯೆ ೨೬೪೦೦೦೦ ರಷ್ಟಿದ್ದು, ಮಹಿಳೆಯರ ಸಂಖ್ಯೆ ೫೩೨೩೦೦೦ ರಷ್ಟು ಆಗಿತ್ತು ಎಂಬುವುದಾಗಿ ದಾಖಲೀಕರಿಸಿದ್ದಾರೆ.[೮೦] ಸಾಮಾಜಿಕ ಪಿಡುಗುಗಳ ಕುರಿತಂತೆ ಪತ್ರಿಕೆಗಳೂ ಜಾಗೃತಿ ಮೂಡಿಸಿರುವುದು ಕಂಡು ಬರುತ್ತದೆ.

ಶ್ರೀ ಶಾರದಾ ಸ್ತ್ರೀ ಸಮಾಜ ಬೆಂಗಳೂರು ಇದರ ಗೌರವ ಕಾರ್ಯದರ್ಶಿನಿಯಾದ, ಶ್ರೀಮತಿ ಆರ್.ಕಲ್ಯಾಣಮ್ಮನವರು 'ಬಾಲ್ಯವಿವಾಹ ಖಂಡನ' ಎಂಬ ಲೇಖನದಲ್ಲಿ ಬಾಲ್ಯಾವಸ್ಥೆಯಲ್ಲಿ ವಿವಾಹ ನಡೆಸುವುದರ ವೈಪರೀತ್ಯಗಳ ಕುರಿತು ಎಚ್ಚರಿಸಿದ್ದಾರೆ. ಅವಿಭಜಿತ ದಕ್ಷಿಣ ಕನ್ನಡದಲ್ಲಿ ಬಾಲ್ಯ ವಿವಾಹವೆಂಬ ಪಿಡುಗು ತೀವ್ರವಾಗಿದ್ದು, ಭರತಖಂಡದಲ್ಲಿರುವಷ್ಟು ಬಾಲವಿಧವೆಯರು ಪ್ರಪಂಚದ ಇನ್ನಾವ ಭಾಗದಲ್ಲಿಯೂ ಕಂಡು ಬರುವುದಿಲ್ಲ ಎಂದು ವಿಷಾದ ವ್ಯಕ್ತಪಡಿಸಿದ್ದಾರೆ. ೧೯೨೯ರಲ್ಲಿ ಜಾರಿಗೆ ಬಂದ ಶಾರದಾ ಕಾಯಿದೆಯು ಸ್ತ್ರೀಯರಿಗೆ ವಿವಾಹದ ವಯಸ್ಸನ್ನು ೧೪ ವರ್ಷವೆಂದೂ ಪುರುಷರಿಗೆ ವಿವಾಹದ ವಯಸ್ಸನ್ನು ೧೮ ವರ್ಷವೆಂದೂ ನಿಗದಿ ಪಡಿಸಿತು. ಸಮಾಜ ಸುಧಾರಕರ ಪ್ರಯತ್ನದಿಂದ ವಿಧವಾ ಪುನರ್ವಿವಾಹ ಕಾಯ್ದೆ ೧೮೫೬ರಲ್ಲಿ ಜಾರಿಗೆ ಬಂದರೂ ಅದಕ್ಕೆ ಪ್ರೋತ್ಸಾಹ ದೊರಕಲಿಲ್ಲ. ಈಶ್ವರಚಂದ್ರ ವಿದ್ಯಾಸಾಗರರು ತಾವು ಸಾಲಗಾರನಾಗುವವರೆಗೆ ತಮ್ಮ ಕೈಯಿಂದ ಹಣ ವ್ಯಯಿಸಿ ಹಲವು ವಿಧವಾ ಪುನರ್ವಿವಾಹಗಳನ್ನು ನೆರವೇರಿಸಿದರು.[೮೧] ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ವಿಧವಾ ವಿವಾಹಗಳು ನಡೆದಿರುವುದು ಕಂಡುಬರುತ್ತದೆ. ಕುಂದಾಪುರ ತಾಲೂಕು ಹನ್ನಾರ ಮಾಗಣೆ, ನಾಗೋಡಿ ಗ್ರಾಮದ, ಕೋಸನಾಡಿಯ ಶ್ರೀಯುತ ವೆಂಕಟರಮಣಯ್ಯ ಯಾನೆ ಅಪ್ಪಯ್ಯ ಇವರು ಶಿವಮೊಗ್ಗ ಜಿಲ್ಲಾ ಸಾಗರ ತಾಲೂಕು ಅರಬಳ್ಳಿ ಗ್ರಾಮದ ಹಲ್ಕೆರೆ,

ಸೂತ ಭಟ್ಟರ ಮಗಳಾದ ಸರಸ್ವತಿ ಬಾಯಿಯೆಂಬ ಕನ್ಯೆಗೆ ವಿಧಿವತ್ತಾಗಿ ವಿಜೃಂಭಣೆಯಿಂದ ಶ್ರೀ ಅಕದಾಸ ಗಣಪತಿ ಭಟ್ಟರ ಮಾಳಿಗೆಯ ಮೇಲೆ (ಮನೆಯಲ್ಲಿ) ಪಾಣಿಗ್ರಹಣ ಮಾಡಿದ ವರದಿಯನ್ನು 'ಸ್ವದೇಶಾಭಿಮಾನಿ' ಪತ್ರಿಕೆ ಪ್ರಕಟಿಸಿತ್ತು.[೮೨] ವಸಾಹತುಶಾಹಿ ಆಳ್ವಿಕೆಯು ಜಾರಿಗೆ ತಂದ ಹೊಸ ಶಿಕ್ಷಣ ಪದ್ಧತಿಯು ಪರೋಕ್ಷವಾಗಿ ಜಿಲ್ಲೆಯ ಮಹಿಳೆಯರು ಎಚ್ಚೆತ್ತುಕೊಳ್ಳುವಂತೆ ಮಾಡಿತು. ಮುಂದೆ ತನ್ನ ಕಣ್ಮುಂದೆ ನಡೆಯುತ್ತಿದ್ದ ಅವ್ಯವಹಾರಗಳ ವಿರುದ್ಧ ಸಿಡಿದೇಳಲು ಸಹಕಾರಿಯಾಯಿತು.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೊದಲ ಬಾರಿಗೆ ಬ್ರಿಟಿಷ್ ದಬ್ಬಾಳಿಕೆಯ ವಿರುದ್ಧ ಧ್ವನಿ ಎತ್ತಿದ ಮಹಿಳೆ ಕೊರಪ್ಳು. ೧೮೩೯ರಲ್ಲಿ ದಕ್ಷಿಣ ಕನ್ನಡಜಿಲ್ಲೆಯ ವಿಟ್ಲ ಪ್ರದೇಶದ ಬಂಟ ಸಮುದಾಯದ ಶ್ರೀಮಂತ ಮಹಿಳೆಯಾದ ಕೊರಪ್ಳು ಬ್ರಿಟಿಷ್ ಕಲೆಕ್ಟರ್ ಆಗಿದ್ದ ಎಡ್ವರ್ಡ್ ಮಲ್ಪ್ ಬಿ ಮುಂದೆ ದಾವೆ ಹೂಡಿದಳು. ಬ್ರಿಟಿಷರಿಗೆ ಸಲ್ಲಿಸಬೇಕಾಗಿದ್ದ ಭೂ ತೆರಿಗೆಯನ್ನು ನೀಡಿದರೂ ಸಹ ತೆರಿಗೆ ಇಲಾಖೆಯು ಆಕೆಯ ಮೇಲೆ ಹೆಚ್ಚುವರಿ ಸಾಲವನ್ನು ಹೇರಿತು. ತನ್ನ ಮೇಲಿನ ಅನ್ಯಾಯವನ್ನು ಸಹಿಸದ ಕೊರಪ್ಳು ಹಾಗೂ ವ್ಯಾಜ್ಯದಲ್ಲಿ ಗೆಲುವು ಸಾಧಿಸಿದಳು. ಈ ಘಟನೆಯಲ್ಲಿ ಕೊರಪ್ಳು ಧೈರ್ಯವಂತಳಾಗಿ ಪ್ರಜ್ಞೆ ಮೆರೆದಿದ್ದಾಳೆ.[೮೩] ಹಿಂದೂ ಮಹಿಳೆಯರ ಅಸ್ತಿ ಹಕ್ಕು ಕಾಯ್ದೆಯು ೧೯೩೭ರಲ್ಲಿ ಜಾರಿಗೆ ಬಂದಿತು. ಈ ಕಾಯ್ದೆಯು ಅನೇಕ ನ್ಯೂನ್ಯತೆಗಳಿಂದ ಕೂಡಿತ್ತು. ಭಾರತದ ವಿವಿಧ ಭಾಗಗಳ ಮಹಿಳೆಯರಿಗೆ ಸಂಬಂಧಿಸಿದಂತೆ ಕಾಯ್ದೆಯ ಅಂಶಗಳಲ್ಲಿ ಸ್ಪಷ್ಟೀಕರಣವಿರಲ್ಲಿಲ್ಲ. ಕ್ರೈಸ್ತರಲ್ಲಿ ವಿಧವಾ ವಿವಾಹಕ್ಕೆ ಸಂಬಂಧಿಸಿದ ಕಟ್ಟುಪಾಡುಗಳು ಉನ್ನತ ವರ್ಗದ ಹಿಂದೂ ಸಂಪ್ರದಾಯದಂತಿತ್ತು. ವಿಧವೆಯಾದವಳು ಏಕಾಂತದಲ್ಲಿದ್ದು ಕಪ್ಪುಸೀರೆ ತೊಟ್ಟು ಯಾವುದೇ ಚಿನ್ನಾಭರಣಗಳ ಅಲಂಕಾರ ನಿಷಿದ್ಧವಾಗಿತ್ತು. (canon law) ಕ್ಯಾನನ್ ಕಾಯ್ದೆ ವಿಧವಾ ವಿವಾಹಕ್ಕೆ ಅವಕಾಶ ನೀಡಿದರೂ ಕೂಡಾ ಕೆಲವೇ ಮಹಿಳೆಯರು ತಮ್ಮ ಸಮುದಾಯದ ಪದ್ಧತಿಯನ್ನು ವಿರೋಧಿಸುವ ಧೈರ್ಯಮಾಡಿದರು. ಪುನರ್ವಿವಾಹವಾದ ಮಹಿಳೆಯನ್ನು ಕೀಳಾಗಿ ನೋಡಲಾಗುತ್ತಿತ್ತು. ಆದರೆ ಜಾತಿ ಭ್ರಷ್ಟರಾಗುತ್ತಿರಲ್ಲಿಲ್ಲ ಮತ್ತು ದುರದೃಷ್ಟವಂತೆ ಎಂದು ಆಕೆಯನ್ನು ದೂರವಿಡುತ್ತಿರಲಿಲ್ಲ. ಕ್ರೈಸ್ತಧರ್ಮದ ಅನುಯಾಯಿಗಳದರೂ ಕೂಡಾ ಹೆಚ್ಚಿನ ಹಿಂದೂ ಸಂಪ್ರದಾಯಗಳು ಜೀವಂತವಾಗಿತ್ತು.[೮೪]

ಮೊತ್ತ ಮೊದಲ ಮುಸ್ಲಿಂ ವ್ಯಕ್ತಿ ನಿಯಮ ೧೮೭೨ರಲ್ಲಿ ಬ್ರಿಟಿಷರ ಆಳ್ವಿಕೆಯಲ್ಲಿ ಜಾರಿಗೆ ಬಂದಿತು. ಈ ನಿಯಮ ಕಠೋರವಾಗಿತ್ತೆಂದರೆ ಈ ನಿಯಮದ ಪ್ರಕಾರ ತಲಾಖ್ ಮತ್ತು ಬಹುಪತ್ನಿತ್ವದಲ್ಲಿ ಪುರುಷರಿಗೆ ಸ್ವೇಚ್ಛೆಯಿಂದ ವರ್ತಿಸುವ ಅಧಿಕಾರವಿದ್ದರೂ ಎಂತಹ ದುರ್ಭರ ಸಂದರ್ಭದಲ್ಲೂ ಕೂಡಾ ಸ್ತ್ರೀಯರಿಗೆ ವಿಚ್ಛೇದನದ ಅವಕಾಶ ಇರಲೇ ಇಲ್ಲ. ೧೯೨೦ರ ಬಳಿಕ ಕೆಲವು ಮುಸ್ಲಿಂ ಮಹಿಳೆಯರು ತಮ್ಮ ಗಂಡಂದಿರ ದೌರ್ಜನ್ಯ ತಾಳಲಾರದೆ ಅವರಿಂದ ವಿಚ್ಛೇದನ ಪಡೆಯಲು ಮತಾಂತರಗೊಳ್ಳತೊಡಗಿದರು. ತಮ್ಮ ಗಂಡಂದಿರ ದೌರ್ಜನ್ಯದಿಂದ ಪಾರಾಗಲು ಈ ಮಹಿಳೆಯರಿಗಿದ್ದ ಹಾದಿ ಇದೊಂದೆ ಆಗಿತ್ತು. ಇಂತಹ ಹಲವು ಪ್ರಕರಣಗಳಾದಾಗ ಮುಸ್ಲಿಂ ಧರ್ಮಗುರುಗಳು ಮತ್ತು ಸಮಾಜ ಎಚ್ಚೆತ್ತು ತಮ್ಮ ಮಹಿಳೆಯರು ಈ ರೀತಿಯಾಗಿ

ಮತಾಂತರಗೊಳ್ಳುವುದನ್ನು ತಡೆಯಲು ನಿಯಮಗಳ ಬದಲಾವಣೆಗೂ ಮುಂದಾದರು. ೧೯೩೭ ಅಥವಾ ೧೯೩೯ರಲ್ಲಿ ಮುಸ್ಲಿಂ ವ್ಯಕ್ತಿ ನಿಯಮ ಹೊಸ ರೂಪ ಪಡೆಯಿತು. ಕೆಲವೊಂದು ನಿರ್ಬಂಧಗಳೊಡನೆ ಮುಸ್ಲಿಂ ಮಹಿಳೆಗೆ ವಿಚ್ಛೇದನದ ಹಕ್ಕನ್ನು ನೀಡಲಾಯಿತು. ಆದರೂ ನ್ಯಾಯಾಲಯದ ಕಟ್ಟೆ ಹತ್ತಿ ಹಲವು ವರ್ಷಗಳವರೆಗೆ ಹೋರಾಡಿದರೂ ಮಹಿಳೆಗೆ ವಿಚ್ಛೇದನ ದೊರೆಯದಂತಹ ಪರಿಸ್ಥಿತಿ ಇಂದಿಗೂ ಇದೆ.[೮೫]

ಹೀಗೆ ಸುಧಾರಣಾವಾದಿಗಳು ಸಾಮಾಜಿಕ ಚಟುವಟಿಕೆಗಳಿಂದ, ಶಿಕ್ಷಣ ಹಾಗೂ ಕಾನೂನು ಕಾಯಿದೆಗಳಿಂದ ಮಹಿಳೆಯರ ಜೀವನಕ್ರಮದಲ್ಲಿ ಬದಲಾವಣೆಗಳ ಅನಿವಾರ್ಯತೆಯನ್ನು ಮನಗಂಡರು. ಸುಮಿತ್ ಸರ್ಕಾರ್ ಹೇಳುವಂತೆ 'ಈ ಸುಧಾರಣಾವಾದಿಗಳು ತಮ್ಮ ಕುಟುಂಬ ವಲಯದೊಳಗೇ ಮಹಿಳೆಯರ ಸಂಬಂಧ ಸ್ವರೂಪಗಳನ್ನು ಒಂದಿಷ್ಟು ಪರಿವರ್ತಿಸಿ ಸುಗಮಗೊಳಿಸುವ ಉದ್ದೇಶದವರಾಗಿದ್ದರಷ್ಟೆ. ಹಾಗಾಗಿ ಮಹಿಳಾ ಸಮುದಾಯ ಉನ್ನತಗೊಳ್ಳಬೇಕು ಎನ್ನುವಾಗಲೂ ಹದವಾದ, ಮಿತವಾದ, ನಿಯಂತ್ರಿತವಾದ ಉನ್ನತಿಯನ್ನಷ್ಟೇ ಅಪೇಕ್ಷಿಸಿದ್ದರೇ ಹೊರತು ವಿಮುಕ್ತಿಯ ಸ್ವರೂಪದ್ದಲ್ಲ'[೮೬] ಮಹಿಳೆಯರ ಪುನರುದ್ಧಾರ ಕಾರ್ಯಕ್ರಮಗಳಲ್ಲಿ ಅವರ ತೊಡಗಿಸುವಿಕೆ ಸಕ್ರಿಯವಾಗಿರದಿದ್ದರೂ, ಮಹಿಳೆಯರು ಬದುಕುವ ಮಾದರಿಯಲ್ಲಿ ಕಂಡು ಬಂದ ಬದಲಾವಣೆಗಳಿಗೆ ಹೊಸ ಶಿಕ್ಷಣ ಕ್ರಮ ಪೂರಕವಾಯಿತು.

# ಸಂದರ್ಭಸೂಚಿ


೧. ಕೃಷ್ಣಮೂರ್ತಿ ಎಸ್: ೧೯೮೪, ಭಾರತೀಯ ನಾರಿ ಮತ್ತು ಸಮಾನತೆ, ಐಬಿಎಚ್ ಪ್ರಕಾಶನ, ಬೆಂಗಳೂರು, ಪುಟ ೩೭.

೨. ಮೋಹನ್ ಕೃಷ್ಣ ರೈ.ಕೆ: ೨೦೦೭, ವಸಾಹತುಶಾಹಿ ಮತ್ತು ನಗರೀಕರಣ, ಪ್ರಸಾರಾಂಗ,ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೨

೩. ಸೂಸಿ ಥಾರು ಮತ್ತು ಲಲಿತ ಕೆ (ಸಂ): ೧೯೯೧, ವಿಮೆನ್ ರೈಟಿಂಗ್ ಇನ್ ಇಂಡಿಯ : ಬಿ.ಸಿ.೬೦೦ ಟು ದಿ ಪ್ರೆಸೆಂಟ್, ನ್ಯೂವರ್ಕ್ ಫೆಮಿನಿಸ್ಟ್ ಪ್ರೆಸ್, ಪುಟ ೧೫೧.

೪. ಜೆಸ್ಸಿ ಟೆಲ್ಲಿಸ್ ನಾಯಕ್ : ೧೯೮೩, ಇಂಡಿಯನ್ ವಿಮೆನ್ ವುಡ್ ದೆನ್ ಆಂಡ್ ನವ್, ಸಾಟ್ ಪ್ರಕಾಶನ ಸಂಚಾರ್ ಕೇಂದ್ರ, ಇಂದೋರ್, ಪುಟ ೪೫.

೫. ಅದೇ, ಪುಟಗಳು ೩೧-೩೩.

೬. ಜೆರಾಲ್ಡಿನ್ ಫೋಬ್ಸ್ (ಮೂಲ), ಶ್ರೀಮತಿ ಎಚ್.ಎಸ್ (ಸಂ): ೨೦೦೧, ಆಧುನಿಕ ಭಾರತದಲ್ಲಿ ಮಹಿಳೆ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ಪುಟಗಳು ೫೧-೫೩.

೭. ಎಚ್. ಎಲ್ ನಾಗೇಗೌಡ: ಪ್ರವಾಸಿ ಕಂಡ ಇಂಡಿಯಾ, ಸಂಪುಟ ೪, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಪುಟ ೨೪೩.

೮. ಜಾನಕಿ ನಾಯರ್ : ೧೯೯೬, ವಿಮೆನ್ ಆಂಡ್ ಲಾ ಇನ್ ಕೊಲೋನಿಯಲ್ ಇಂಡಿಯಾ, ಕಾಳಿ ಫಾರ್ ವಿಮೆನ್, ನ್ಯೂ ಡೆಲ್ಲಿ, ಪುಟ ೫೪.

೯. ವಿವಿಧ ಲೇಖಕಿಯರು: ೧೯೭೬, ಪ್ರಗತಿಪಥದಲ್ಲಿ ಮಹಿಳೆ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಪುಟ೧೯.

೧೦. ಜೆರಾಲ್ಡಿನ್ ಫೋಬ್ಸ್ (ಮೂಲ), ಶ್ರೀಮತಿ ಎಚ್.ಎಸ್ (ಸಂ): ಪೂರ್ವೋಕ್ತ, ಪುಟ ೨೦.

೧೧. ದಿ ವಿಮೆನ್ ಆಫ್ ಇಂಡಿಯಾ ವಾಟ್ ಕ್ಯಾನ್ ಬಿ ಡನ್ ಫಾರ್ ದೆಂ, ದಿ ಕ್ರಿಸ್ಚಿಯನ್ ವೆರ್ನಾಕ್ಯುಲರ್ ಎಡುಕೇಶನ್ ಸೊಸೈಟಿ, ಎಸ್.ಪಿ.ಸಿ.ಕೆ ಪ್ರೆಸ್, ವೆಪರಿ, ಮದ್ರಾಸ್, ೧೮೮೮, ಪುಟಗಳು ೪೯- ೫೧.

೧೨. ಬನ್ನಂಜೆ ಅಮೀನ್ ಬಾಬು: ೧೯೯೪, ತುಳು ಜನಪದ ಆಚರಣೆಗಳು, ಕೆಮ್ಮಲಜೆ ಜಾನಪದ ಪ್ರಕಾಶನ, ಉಡುಪಿ, ಪುಟ ೭.

೧೩. ಸ್ವದೇಶಾಭಿಮಾನಿ, ಜೂನ್ ೧, ೧೯೪೩.

೧೪. ಡಾ. ಎಂ.ವಿ ಕಾಮತ್ ಇವರ ಸಂದರ್ಶನ ದಿನಾಂಕ ೧೬-೨ ೨೦೧೩.

೧೫. ರಮಾನಾಥ ಕೋಟೆಕಾರ್: ೨೦೧೨, ತುಳುನಾಡಿನ ಬಿಲ್ಲವರು ಒಂದು ಅಧ್ಯಯನ, ಸಾಯಿ ಸುಂದರಿ ಸೇವಾ ಟ್ರಸ್ಟ್, ಮಂಗಳೂರು, ಪುಟ ೨೩೦.

೧೬. ನವಯುಗ, ಮಾರ್ಚ್ ೯, ೧೯೪೦.

೧೭. ಅಂತರಂಗ, ಸಂಪುಟ ೩, ಸಂಚಿಕೆ ೬೬, ಉಡುಪಿ, ಪುಟ ೨೪.

೧೮. ಸ್ವದೇಶಾಭಿಮಾನಿ, ಫೆಬ್ರವರಿ ೫, ೧೯೩೨.

೧೯. ಸ್ವದೇಶಾಭಿಮಾನಿ, ಫೆಬ್ರವರಿ ೧೨, ೧೯೩೨.

೨೦. ರಮಾನಾಥ ಕೋಟೆಕಾರ್ ವಯಸ್ಸು ೫೮, ಇವರ ಸಂದರ್ಶನ ದಿನಾಂಕ ೭-೪-೨೦೧೮.

೨೧. ಪ್ರಭಾಕರ ಶೆಟ್ಟಿ ವಯಸ್ಸು ೮೫, ಇವರ ಸಂದರ್ಶನ ದಿನಾಂಕ ೯-೪-೨೦೧೮.

೨೨. ರಮಾನಾಥ ಕೋಟೆಕಾರ್ : ಪೂರ್ವೋಕ್ತ ಅದೇ ಪುಟ ೨೨೭-೨೨೮, ೨೦೧೨.

೨೩. ರಮಾನಾಥ ಕೋಟೆಕಾರ್ ಇವರ ಸಂದರ್ಶನ ದಿನಾಂಕ ೭-೪ ೨೦೧೮.

೨೪. ಶ್ರೀಮತಿ ಜಲಜ ಉಳ್ಳಾಲ ವಯಸ್ಸು ೮೯, ಇವರ ಸಂದರ್ಶನ ದಿನಾಂಕ ೭-೪ ೨೦೧೮.

೨೫. ಜೆಸ್ಸಿ ಟೆಲ್ಲಿಸ್ ನಾಯಕ್: ಪೂರ್ವೋಕ್ತ, ಪುಟ ೩೨.

೨೬. ಆರ್. ಇಂದಿರಾ: ೨೦೦೨, ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೮೩.

೨೭. ರಾಮಚಂದ್ರ ಗುಹ: ಪೂರ್ವೋಕ್ತ, ಪುಟಗಳು ೩೩-೩೯, ೮೮-೯೧.

೨೮. ಜಾನಕಿ ನಾಯರ್: ಪೂರ್ವೋಕ್ತ, ಪುಟ ೬೧.

೨೯. ಅನಿಂದಿತ ಘೋಷ್ (ಸಂ): ೨೦೦೭, ತನಿಕಾ ಸರ್ಕಾರ್ ರವರ ಲೇಖನ, ವಿಕೆಡ್ ವಿಡೋಸ್ : ಲಾ ಅಂಡ್ ಫೈತ್ ಇನ್ ನೈಂಟೀಂತ್ ಸೆಂಚುರಿ ಪಬ್ಲಿಕ್ ಸ್ಫಿಯರ್ ಡಿಬೇಟ್ಸ್, ಪರ್ಮನೆಂಟ್ ಬ್ಲಾಕ್, ರಾಣಿಕೆಟ್, ಪುಟ ೮೫.

೩೦. ಜ್ಯೋತಿರಾವ್ ಫೂಲೆ : ೧೯೯೧, ತಾರ್ಕತೀರ್ಥ ಲಕ್ಷ್ಣ ಶಾಸ್ತ್ರಿ ಜೋಶಿ, ನ್ಯಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾ, ನ್ಯೂಡೆಲ್ಲಿ, ಪುಟ ೨೫.

೩೧. ರಾಮಚಂದ್ರ ಗುಹ: ಪೂರ್ವೋಕ್ತ, ಪುಟಗಳು ೮೮-೯೧.

೩೨. ಡಿ.ಡಿ ಕರ್ವೆ (ಸಂ) ಮತ್ತು ಅನು. ದಿ ನ್ಯೂ ಬ್ರಾಹ್ಮಿನ್ಸ್: ೧೯೬೩, ಫೈವ್ ಮಹರಾಷ್ಟ್ರಿಯನ್ ಫ್ಯಾಮಿಲೀಸ್, ಬರ್ಕ್ಲೆ, ಯೂನಿವರ್ಸಿಟಿ ಆಫ್ ಕ್ಯಾಲಿಫೋರ್ನಿಯಾ ಪ್ರೆಸ್, ಬರ್ಕ್ಲೆ, ಪುಟಗಳು ೭೯, ೫೨.

೩೩. ಪಾರ್ವತಿ ಅತವಾಳೆ: ೧೯೩೦, ಮೈ ಸ್ಟೋರಿ: ದಿ ಆಟೋಬೈಯೋಗ್ರಫಿ ಆಫ್ ಎ ಹಿಂದೂ ವಿಡೋ ಅನು. ರೆವರೆಂಡ್ ಜಸ್ಟಿನ್ ಎಡ್ವರ್ಡ್ಸ್ ಅಬ್ಬಾಟ್ (ಅನು), ಲುಕ್ಕಿಂಗ್ ಬ್ಯಾಕ್, ನ್ಯೂಯಾರ್ಕ್, ಪುಟ್ನಾಮ್ ಪಬ್ಲಿಷರ್ಸ್, ಪುಟ ೩೦.

೩೪. ಜೆರಾಲ್ಡಿನ್ ಫೋಬ್ಸ್: ಪೂರ್ವೋಕ್ತ, ಪುಟ ೬೩.

೩೫. ರಾಮಚಂದ್ರ ಗುಹ : ಪೂರ್ವೋಕ್ತ, ಪುಟ ೧೫೦.

೩೬. ಜೆರಾಲ್ಡಿನ್ ಫೋಬ್ಸ್ : ಪೂರ್ವೋಕ್ತ, ಪುಟಗಳು ೨೭-೨೯.

೩೭. ಸುಮಿತ್ ಸರ್ಕಾರ್ ಮತ್ತು ತನಿಕಾ ಸರ್ಕಾರ್: ೨೦೦೮, ವಿಮೆನ್ ಆಂಡ್ ಸೋಷಲ್ ರಿಫಾರ್ಮ್ ಇನ್ ಇಂಡಿಯಾ, ಜೆರಾಲ್ಡಿನ್ ಫೋಬ್ಸ್ ಇವರ ಲೇಖನ- ಎಡುಕೇಶನ್ ಫಾರ್ ವಿಮೆನ್, ಇಂಡಿಯಾನ ಯುನಿವರ್ಸಿಟಿ ಪ್ರೆಸ್, ಪುಟಗಳು ೬೪ -೬೬.

೩೮. ಸುದರ್ಶನ: ೧೯೭೭, ಡಾ.ತೋನ್ಸೆ ಮಾಧವ ಅನಂತ ಪೈ ಅಭಿನಂದನ ಗ್ರಂಥ, ಸಂಪಾದಕ ಅಡ್ಯನಡ್ಕ ಕೃಷ್ಣ ಭಟ್, ವಿಜಯ ಕಾಲೇಜು ಟ್ರಸ್ಟ್, ಮುಲ್ಕಿ ದಕ್ಷಿಣ ಕನ್ನಡ, ಪುಟಗಳು ೪೨೪ – ೪೩೬.

೩೯. ಜೆರಾಲ್ಡಿನ್ ಫೋಬ್ಸ್ : ಪೂರ್ವೋಕ್ತ, ಪುಟಗಳು ೬೨-೬೪.

೪೦. ಬಾಬು ಶಿವ ಪೂಜಾರಿ: ಶ್ರೀ ನಾರಾಯಣ ಗುರು ವಿಜಯ ದರ್ಶನ, ಬಿಲ್ಲವ ಜಾಗೃತ ಬಳಗ ಮುಂಬಯಿ, ಪುಟಗಳು ೧೩- ೧೪, ೧೧೬-೧೩೯.

೪೧. ಬಿ.ಎ ವಿವೇಕ ರೈ: ೨೦೧೬, ಮಂಗಳೂರು ದರ್ಶನ: ಸಂಪುಟ ೩, ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ಪುಟಗಳು ೭-೧೦.

೪೨. ಎ ಬ್ರೀಫ್ ಹಿಸ್ಟರಿ ಆಫ್ ದಿ ಮ್ಯಾಂಗಲೋರ್ ಬ್ರಹ್ಮ ಸಮಾಜ್ ೧೮೭೦ - ೧೯೭೦, ಕಂಪೈಲ್ಡ್ ಫ್ರಾಮ್ ದಿ ಮ್ಯಾನು ಸ್ಕ್ರಿಪ್ಟ್ ನೋಟ್ಸ್ ಪ್ರಿಪ್ಯಾರ್ಡ್ ಬೈ ದಿ ಲೇಟ್ ರಾವ್ ಸಾಹಿಬ್ ಯು ಮಂಜಪ್ಪ ಇನ್ ಡಿಸೆಂಬರ್ ೧೯೪೬, ಆಂಡ್ ಫ್ರಾಮ್ ದಿ ರೆಕೋರ್ಡ್ಸ್ ಆಫ್ ದಿ ಬ್ರಹ್ಮ ಸಮಾಜ್ - ಬೈ ಎಚ್. ಸೋಮಪ್ಪ, ಪುಟ ೯.

೪೩. ಸುದರ್ಶನ: ಪೂರ್ವೋಕ್ತ, ಪುಟಗಳು ೪೨೪-೪೩೬.

೪೪. ಮಂಗಳೂರು ದರ್ಶನ : ಪೂರ್ವೋಕ್ತ, ಸಂಪುಟ ೩, ಪುಟಗಳು ೨, ೩, ೪೧೭.

೪೫. ಅದೇ, ಪುಟಗಳು ೨-೩.

೪೬. ಎ ಬ್ರೀಫ್ ಹಿಸ್ಟರಿ ಆಫ್ ದಿ ಮ್ಯಾಂಗಲೋರ್ ಬ್ರಹ್ಮ ಸಮಾಜ್ ೧೮೭೦ - ೧೯೭೦, ಪೂರ್ವೋಕ್ತ ಪುಟ ೫.

೪೭. ದಿ ಫ್ರೀಡಂ ಮೂಮೆಂಟ್ ಇನ್ ಕರ್ನಾಟಕ, ಹೂ ಇಸ್ ಹೂ: ೧೯೬೯, ಸಂಪುಟ ೧, ಗವರ್ನಮೆಂಟ್ ಆಫ್ ಮೈಸೂರು ಪಬ್ಲಿಕೇಷನ್, ಪುಟ ೨೫೫.

೪೮. ಸೂರ್ಯನಾಥ ಕಾಮತ್: ೧೯೮೦, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ , ಬೆಂಗಳೂರು, ಪುಟ ೨೧೬.

೪೯. ಮಂಗಳೂರು ದರ್ಶನ : ಪೂರ್ವೋಕ್ತ, ಸಂಪುಟ ೩, ಪುಟಗಳು ೧೭-೧೯.

೫೦. ಸುದರ್ಶನ: ಪೂರ್ವೋಕ್ತ, ಪುಟಗಳು ೪೨೪ - ೪೩೬.

೫೧. ಮಂಗಳೂರು ದರ್ಶನ : ಪೂರ್ವೋಕ್ತ, ಸಂಪುಟ ೩, ಪುಟಗಳು ೪೮-೪೯.

೫೨. ಸರೋಜಿನಿ ಶಿಂತ್ರಿ : ೧೯೭೯, ನಾನೊಂದು ಕನಸು ಕಂಡೆ, ಧಾರವಾಡ, ಪುಟಗಳು ೧-೨೭, ೪೮.

೫೩. ಜೆರಾಲ್ಡಿನ್ ಫೋಬ್ಸ್ : ಪೂರ್ವೋಕ್ತ, ಪುಟ ೨೬.

೫೪. ಮಹಿಳಾ ಸಭಾ ಇದರ ವಜ್ರ ಮಹೋತ್ಸವದ ಸ್ಮರಣಿಕೆ (೧೯೧೧ - ೧೯೭೧), ಪುಟಗಳು ೨೧,೨೨,೨೩.

೫೫. ಮಹಿಳಾ ಸಭಾ ಇದರ ವಾರ್ಷಿಕ ವರದಿ, ೧೯೩೧ -೧೯೩೨, ಪುಟಗಳು ೧, ೨, ೭, ೮.

೫೬. ಅದೇ, ಪುಟಗಳು ೧೨-೧೩.

೫೭. ಸುಮತಿ ಪಾಂಗಾಳ ಇವರ ಸಂದರ್ಶನ ಮಾರ್ಚ್ ೬, ೨೦೧೬.

೫೮. 'ಭಗಿನಿ ಸಮಾಜ' ಇದರ ಅಮೃತ ಮಹೋತ್ಸವದ ಸ್ಮರಣಿಕೆ, ೧೯೩೭- ೧೯೬೧, ಪುಟಗಳು ೧೧,೧೨,೨೨.

೫೯. ಗಿಲ್ಡ್ ಆಫ್ ಸರ್ವಿಸ್ ಇದರ ಸ್ಮರಣ ಸಂಚಿಕೆ, ೧೯೭೫.

೬೦. ಎ ಬ್ರೀಫ್ ಹಿಸ್ಟರಿ ಆಫ್ ದಿ ಮ್ಯಾಂಗಲೋರ್ ಬ್ರಹ್ಮಸಮಾಜ್ ೧೮೭೦ - ೧೯೭೦, ಪೂರ್ವೋಕ್ತ ಪುಟಗಳು ೧-೪.

೬೧. ಬಿ. ಸುರೇಂದ್ರ ರಾವ್: ೨೦೧೦, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಪುಟ ೨೨೩.

೬೨. ಕೆನೆಥ್ ಡಬ್ಲ್ಯೂ ಜೋನ್ಸ್: ೧೯೮೯, ಸೋಷಿಯೋ ರಿಲೀಜಿಯಸ್ ರಿಫಾಂ ಮೂಮೆಂಟ್ಸ್ ಇನ್ ಬ್ರಿಟಿಷ್ ಇಂಡಿಯಾ ಕೇಂಬ್ರಿಡ್ಜ್ ಯುನಿವರ್ಸಿಟಿ ಪ್ರೆಸ್, ಪುಟ ೧೬೬.

೬೩. ಎ ಬ್ರೀಫ್ ಹಿಸ್ಟರಿ ಆಫ್ ದಿ ಮ್ಯಾಂಗಲೋರ್ ಬ್ರಹ್ಮ ಸಮಾಜ್ ೧೮೭೦ - ೧೯೭೦, ಪೂರ್ವೋಕ್ತ ಪುಟಗಳು ೭ -೯.

೬೪. ಮಂಗಳೂರು ದರ್ಶನ: ಪೂರ್ವೋಕ್ತ, ಸಂಪುಟ ೩, ಪುಟಗಳು ೨-೩.

೬೫. ಡಾ.ನಳಿನಿ ಸುದರ್ಶನ ಇವರ ಸಂದರ್ಶನ, ಅಕ್ಟೋಬರ್ ೨೫, ೨೦೧೫.

೬೬. ಬಿಪನ್ ಚಂದ್ರ : ಪೂರ್ವೋಕ್ತ, ಪುಟಗಳು ೨೪೫-೨೪೬.

೬೭. ಜವಾಹರಲಾಲ್ ನೆಹರು: ೧೯೬೨, ಆನ್ ಆಟೋಬೈಯೋಗ್ರಫಿ, ಎಲ್ಲೈಡ್ ಪಬ್ಲಿಷರ್ಸ್ ಪ್ರೈವೇಟ್ ಲಿಮಿಟೆಡ್, ನ್ಯೂಡೆಲ್ಲಿ, ಪುಟ ೧೫.

೬೮. ಸ್ವದೇಶಾಭಿಮಾನಿ, ಎಪ್ರಿಲ್ ೧೬, ೧೯೦೭.

೬೯. ಬಿ. ಸುರೇಂದ್ರ. ರಾವ್ : ಪೂರ್ವೋಕ್ತ, ಪುಟಗಳು ೨೨೫, ೨೨೬.

೭೦. ಆರ್ಯಸಮಾಜದ ಮೇಲ್ವಿಚಾರಕರಾದ ದೀಪಕ್ ಇವರ ಸಂದರ್ಶನ, ಅಕ್ಟೋಬರ್ ೨೦, ೨೦೧೫.

೭೧. ಸ್ವದೇಶಾಭಿಮಾನಿ, ಅಕ್ಟೋಬರ್ ೨೦, ೧೯೩೩.

೭೨. ಸ್ವದೇಶಾಭಿಮಾನಿ, ಮೇ ೫, ೧೯೩೪.

೭೩. ಸ್ವದೇಶಾಭಿಮಾನಿ, ಫೆಬ್ರವರಿ ೧೮, ೧೯೩೫.

೭೪. ಈಶ್ವರಾನಂದ ಸೊಸೈಟಿ, ಮಂಗಳೂರು ಇದರ ವಾರ್ಷಿಕ ವರದಿ, ೧೯೩೨.

೭೫. ಈಶ್ವರಾನಂದ ಮಹಿಳಾ ಸೇವಾಶ್ರಮ ಸೊಸೈಟಿ, ಅಮೃತ ಮಹೋತ್ಸವದ ಸ್ಮರಣಿಕೆ ೧೯೨೮- ೨೦೦೪, ಪುಟಗಳು ೪೦-೪೨.

೭೬. ಈಶ್ವರಾನಂದ ಸೊಸೈಟಿಯ ವಾರ್ಷಿಕ ವರದಿ, ೧೯೩೩, ಪುಟ ೨-೩, ೪೬-೫೧

೭೭. ಮಂಗಳೂರು ದರ್ಶನ: ಪೂರ್ವೋಕ್ತ, ಸಂಪುಟ ೧, ಪುಟ ೫೦೭.

೭೮. ಕ್ಲೇರ್ ಮಿಡ್ ಗ್ಲೇ: ೧೯೯೮, ಜೆಂಡರ್ ಅಂಡ್ ಇಂಪೀರಿಯಲಿಸಂ, ಮ್ಯಾಂಚೆಸ್ಟರ್ ಯುನಿವರ್ಸಿಟಿ ಪ್ರೆಸ್, ನ್ಯೂಯಾರ್ಕ್, ಪುಟಗಳು ೨೧-೨೩.

೭೯. ಜಾನಕಿ ನಾಯರ್ : ಪೂರ್ವೋಕ್ತ, ಪುಟ ೮೪.

೮೦. ದಿ ವಿಮೆನ್ ಆಫ್ ಇಂಡಿಯಾ ವಾಟ್ ಕ್ಯಾನ್ ಬಿ ಡನ್ ಫಾರ್ ದೆಂ: ಪೂರ್ವೋಕ್ತ, ಪುಟಗಳು ೪೯- ೫೧

೮೧. ಜಾನಕಿ ನಾಯರ್ : ಪೂರ್ವೋಕ್ತ, ಪುಟ ೬೨.

೮೨. ಸ್ವದೇಶಾಭಿಮಾನಿ, ಮೇ ೨೮, ೧೯೪೩.

೮೩. ಕೃಷ್ಣಾನಂದ ಹೆಗ್ಡೆ: ೨೦೦೮, ಹಿಸ್ಟರಿ ಆಫ್ ಬಂಟ್ಸ್, ಭಾರತೀಯ ವಿದ್ಯಾ ಭವನ ಮಾತೃ ಕೇಂದ್ರ, ಪಾಂಡೇಶ್ವರ, ಮಂಗಳೂರು.

೮೪. ಕ್ರಾಂತಿ ಫೆರಾಯಸ್: ೧೯೯೯, ದಿ ಕ್ರಿಸ್ಚಿಯನ್ ಇಂಪ್ಯಾಕ್ಟ್ ಇನ್ ಸೌತ್ ಕೆನರಾ, ಚರ್ಚ್ ಹಿಸ್ಟರಿ ಅಸೋಸಿಯೆಶನ್ ಆಫ್ ಇಂಡಿಯಾ, ಮುಂಬಯಿ, ಪುಟ ೫೧.

೭೫. ಸಾರ ಅಬೂಬಕ್ಕರ್: ೨೦೦೭, ಸಾಹಿತ್ಯ ಸಂಸ್ಕೃತಿ ಮತ್ತು ಮಹಿಳೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟಗಳು ೧೪೧-೧೪೩.

೭೬. ಕುಂಕುಂ ಸಂಗಾರಿ ಹಾಗೂ ಸುದೇಶ್ ವೈದ್ (ಸಂ): ೧೯೯೪, ವಿಮೆನ್ ಅಂಡ್ ಕಲ್ಚರ್, ಸರ್ಕಾರ್ ಸುಮಿತ್ ಇವರ ಲೇಖನ - ದಿ ವಿಮೆನ್ಸ್ ಕ್ವೆಸ್ಚನ್ ಇನ್ ನೈಂಟೀಂತ್ ಸೆಂಚುರಿ ಬೆಂಗಾಲ್', ರಿಸರ್ಚ್ ಸೆಂಟರ್ ಫಾರ್ ವಿಮೆನ್ಸ್ ಸ್ಟಡೀಸ್, ಪುಟ ೧೦೬.

# ಅಧ್ಯಾಯ: ಐದು

# ಶೈಕ್ಷಣಿಕ ಸ್ಥಿತ್ಯಂತರ ಮತ್ತು ಸಾಮಾಜಿಕ ಬದಲಾವಣೆ

೫.೧ ಮಹಿಳೆಯ ಬದುಕಿನಲ್ಲಿ ಶಿಕ್ಷಣದ ಪ್ರಭಾವ

೫.೨ ಪತ್ರಿಕೆಗಳಲ್ಲಿ ಪ್ರಕಟವಾದ ಸ್ತ್ರೀಪರ ಲೇಖನಗಳು

೫.೩ ವಸಾಹತು ಕಾಲಘಟ್ಟದ ಮಹಿಳಾ ಬರಹಗಾರ್ತಿಯರು

೫.೪ ಆಯ್ದ ಲೇಖಕರ ಬರವಣಿಗೆಗಳಲ್ಲಿ ಸ್ತ್ರೀ ಸಂವೇದನೆಗಳು

# ಅಧ್ಯಾಯ : ಐದು

# ಶೈಕ್ಷಣಿಕ ಸ್ಥಿತ್ಯಂತರ ಮತ್ತು ಸಾಮಾಜಿಕ ಬದಲಾವಣೆ

ಶಿಕ್ಷಣವನ್ನು ಸಾಮಾಜಿಕ ಚಲನೆಯ ವರ್ಧಕವೆಂದು ತಿಳಿಯಲಾಗಿದೆ. ಶಿಕ್ಷಣವು ಮಾನವನಿಗೆ ಅಜ್ಞಾನದಿಂದ ಜ್ಞಾನದ ಕಡೆಗೆ ಕರೆದು ತರುವ ಮುಖ್ಯ ಸಾಧನವಾಗಿದೆ. ಸಾಂಪ್ರದಾಯಿಕ ಶಿಕ್ಷಣ ಸಮಾಜದ ಸೀಮಿತ ವರ್ಗಕ್ಕೆ ಮಾತ್ರ ಲಭಿಸುತ್ತಿತ್ತು. ಪಾಶ್ಚಾತ್ಯ ಪ್ರಭಾವಕ್ಕೆ, ನಿರ್ದಿಷ್ಟವಾಗಿ ಬ್ರಿಟಿಷರ ಆಡಳಿತಕ್ಕೆ ಭಾರತ ಒಳಗಾದ ನಂತರ ಸ್ಥಿತ್ಯಂತರಗಳು ಭಾರತದಲ್ಲಿ ಕಾಣತೊಡಗಿದವು. ಬ್ರಿಟಿಷ್ ಆಳ್ವಿಕೆಯ ಮೂಲಕ ಆಧುನಿಕ ಜಗತ್ತಿನ ಬದಲಾವಣೆಗಳನ್ನು ಒಪ್ಪಿಕೊಂಡ ಭಾರತದಲ್ಲಿ ಕೈಗಾರೀಕರಣ, ಅದರ ಬೆನ್ನ ಹಿಂದೆ ನಗರೀಕರಣ ಬೆಳೆಯತೊಡಗಿತು. ಸಾಂಪ್ರದಾಯಿಕ ವೃತ್ತಿ, ಜೀವನಕ್ರಮ, ಜೀವನ ಮೌಲ್ಯಗಳಲ್ಲಿ ವ್ಯತ್ಯಾಸಗಳು ಕಂಡುಮೂಡತೊಡಗಿದವು. ಅಂತೆಯೇ ಮಹಿಳಾ ಸಮಸ್ಯೆಗಳು ಹೆಚ್ಚಿನ ಗಮನಸೆಳೆದವು.[೧]

ಪಿತೃ ವ್ಯವಸ್ಥೆಯ ಗ್ರಹೀತಗಳನ್ನು 'ಸಹಜ' ಎನ್ನುವಂತೆ ನಂಬಿ ಬದುಕಿದ್ದ ಮಹಿಳೆಯ ಸ್ಥಿತಿಯಲ್ಲಿ ನಡೆದ ಸಣ್ಣ ಸಂಚಲನ ಅವಳ ವಿಚಾರಧಾರೆಯನ್ನು ವಿಸ್ತರಿಸಿತು. 'ತಾನು ತುಳಿತಕ್ಕೆ ಒಳಗಾಗಿದ್ದೇನೆ' ಎಂಬ ಅರಿವು ಹೊರಚೆಲ್ಲುವ ತವಕ ಮೂಡತೊಡಗಿತು. ಹೆಣ್ತನದ ಕೀಳರಿಮೆ ಮತ್ತು ಸಾಹಿತ್ಯದ ಪ್ರಧಾನಧಾರೆಯೊಂದಿಗೆ ಸಂವಹನಿಸಿಕೊಳ್ಳಲಾಗದ ಕೀಳರಿಮೆಗಳನ್ನು ಕಳಚಿಕೊಂಡು ಬರಹದ ಲೋಕಕ್ಕೆ ತೆರೆದುಕೊಂಡಿದ್ದು 'ಸ್ವ ವಿಮೋಚನೆಯ' ಮಾದರಿಯಾಗಿದೆ. ಪರಂಪರೆಯಿಂದ ಜ್ಞಾನವನ್ನು ನೇರವಾಗಿ ಪಡೆಯುತ್ತಾ ಬಂದ ಕ್ರಮವನ್ನು ಬದಲಿಸಿ ಅನ್ಯ ಮೂಲಗಳಿಂದ ಪಡೆದ ಜ್ಞಾನದಿಂದ ಪರಂಪರೆಯನ್ನು ಪರಿಶೀಲಿಸುವ, ಪರೀಕ್ಷಿಸುವ ಕ್ರಮ ನಡೆಯಿತು.[೨]

## ೫.೧ ಮಹಿಳೆಯ ಬದುಕಿನಲ್ಲಿ ಶಿಕ್ಷಣದ ಪ್ರಭಾವ

ಬ್ರಿಟಿಷ್ ಆಳ್ವಿಕೆಯು ಭಾರತೀಯರಿಗೆ ಹಲವು ಸವಾಲುಗಳನ್ನು ಎಸೆದದ್ದು ಮಾತ್ರವಲ್ಲದೆ ಅವುಗಳನ್ನು ಎದುರಿಸುವ ವಿಧಾನವನ್ನೂ ತಿಳಿಸಿತು. ಭಾರತದಲ್ಲಿ ಬ್ರಿಟಿಷರ ಆಗಮನದ ಬಳಿಕ ಶಿಕ್ಷಣದ ನಿರೂಪಣೆ ಮತ್ತು ಬೇಡಿಕೆಗಳು ಬದಲಾದವು. ಹೊಸ ಶಿಕ್ಷಣ ಪಡೆಯುವಲ್ಲಿ ಬ್ರಾಹ್ಮಣರೇ ಮೊದಲಿಗರಾಗಿದ್ದರೂ, ಇತರ ಮೇಲು ಜಾತಿಯವರು ಕೂಡಾ ಬ್ರಾಹ್ಮಣೀಯ ಶಾಸ್ತ್ರಗಳ ನಿಷೇಧಗಳಿಲ್ಲದೆ ಇದನ್ನು ಮೈಗೂಡಿಸಿಕೊಳ್ಳಬಹುದಾಗಿತ್ತು. ಕೆಳಜಾತಿಯವರೆಂದು ಪರಿಗಣಿಸಲ್ಪಟ್ಟವರು ಸ್ಪರ್ಧೆಯಲ್ಲಿ ಹಿಂದುಳಿದಿದ್ದು ಅದಕ್ಕಾಗಿ ಹೋರಾಡಬೇಕಾಗಿ ಬಂದದ್ದು ನಿಜ. ವಿದೇಶೀ ಶಿಕ್ಷಣವನ್ನು ಸ್ವೀಕರಿಸಲು ಆರಂಭದಲ್ಲಿ ಹಿಂಜರಿಕೆ ಇದ್ದರೂ ಕ್ರಮೇಣ ಅದು

ಸಮಾಜದ ಎಲ್ಲಾ ಭಾಗಗಳನ್ನು ಸ್ಪರ್ಶಿಸಿತು. ಹೆಚ್ಚು ಪ್ರಮುಖ ಬ್ರಾಹ್ಮಣೇತರ ವರ್ಗದವರಿಗೆ ಕೂಡಾ ಶಿಕ್ಷಣದ ಮುಖ್ಯವಾಹಿನಿಗೆ ಸೇರುವುದಕ್ಕೆ, ಅದರಿಂದ ಪ್ರಯೋಜನ ಪಡೆಯುವುದಕ್ಕೆ ಕೆಲವು ದಶಕಗಳೇ ಬೇಕಾದವು. ಆಧುನಿಕ ಶಿಕ್ಷಣ ವ್ಯವಸ್ಥೆಯು ಲಿಂಗತಾರತಮ್ಯವಿಲ್ಲದೆ, ವೈಜ್ಞಾನಿಕವಾಗಿದ್ದು ವಿಷಯ ಮತ್ತು ದೃಷ್ಟಿಕೋನಗಳೆರಡರಲ್ಲೂ ಸಾಂಪ್ರದಾಯಿಕ ಶಿಕ್ಷಣದಿಂದ ಭಿನ್ನವಾಗಿದೆ.[೩] ಮಹಿಳೆಯರ ಶಿಕ್ಷಣ ಸಂಸ್ಥೆಗಳು ಸ್ಥಿರವಾಗಿ ಹೆಚ್ಚುತ್ತಾ ಹೋದಂತೆ ವಿದ್ಯಾವಂತ ಮಹಿಳೆಯರ ಸಂಖ್ಯೆಯೂ ಕ್ರಮವಾಗಿ ವೃದ್ಧಿಸಿತು. ಶತಮಾನದ ಕೊನೆಯ ವೇಳೆಗೆ ಕೆಲವು ಮಹಿಳೆಯರಾದರೂ ಧೈರ್ಯವಾಗಿ ಮುಂದೆ ನಿಂತು ಸ್ತ್ರೀ ಶಿಕ್ಷಣವನ್ನು ಕುರಿತು ಮಾತಾಡುವಷ್ಟು ಸಮರ್ಥರಾದರು.[೪]

೧೮೫೭ರಲ್ಲಿ ಮುಂಬಯಿ, ಕಲ್ಕತ್ತ, ಮದ್ರಾಸುಗಳಲ್ಲಿ ಪಾಶ್ಚಾತ್ಯ ಮಾದರಿಯ ವಿಶ್ವವಿದ್ಯಾನಿಲಯಗಳು ಸ್ಥಾಪಿತವಾದವು. ಅಂದಿನ ಪ್ರೌಢಶಾಲೆಯ ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಸಾಹಿತ್ಯವನ್ನು ಓದುವುದು ಕಡ್ಡಾಯವಾಗಿತ್ತು. ಇದು ಭಾರತದ ಜನಜೀವನದ ಮೇಲೆ ಹಾಗೂ ಭಾರತೀಯ ಸಾಹಿತ್ಯದ ಮೇಲೆ ಬಹಳ ಮಹತ್ತರವಾದ ಬದಲಾವಣೆಗಳನ್ನುಂಟು ಮಾಡಿತು. ಇಂಗ್ಲಿಷ್ ಭಾಷೆಯ ಮೂಲಕ ಐದು ಶತಮಾನಗಳ ಕಾಲದ ಸಾಹಿತ್ಯದ ಪರಿಚಯವಾಯಿತು.[೫] ಔಪಚಾರಿಕ ಶಿಕ್ಷಣ, ಮಹಿಳೆಯರಿಗಾಗಿ ಮತ್ತು ಮಹಿಳೆಯರಿಂದಲೇ ರಚಿತವಾದ ಕೃತಿಗಳ ಪ್ರಕಟಣೆಗಳಂಥವು ಮಹಿಳೆಯರಿಗೆ ಧ್ವನಿಗಳನ್ನು ಕೊಟ್ಟವು. ಬರವಣಿಗೆಗಳ ಮೂಲಕ ಅವರಲ್ಲಿ ಪರಸ್ಪರ ಸಂವಹನ ಸಾಧ್ಯವಾಗಿ ಹೊಸ ಹೊಸ ಬಗೆಯ ಸಾಮಾಜಿಕ ಸಂಪರ್ಕ ಜಾಲಗಳನ್ನೂ ವಿಸ್ತರಿಸಿತು.

ಬಿ.ಎನ್ ಸುಮಿತ್ರಾಬಾಯಿಯವರ ಅಭಿಪ್ರಾಯದಂತೆ 'ಮಹಿಳೆ ಅರ್ಥವಿರದ ತನ್ನ ಒಳಬದುಕನ್ನು ತುಂಬಿಕೊಳ್ಳಲು ತಾನಿರುವ ಪರಿಸ್ಥಿತಿಯ ವಿರುದ್ಧ ಬಂಡೆದ್ದು ತನ್ನನ್ನು ಲೇಖಕಿಯಾಗಿಸಲು ಯತ್ನಿಸುತ್ತಾಳೆ. ತಾನು ಬದುಕುವುದಕ್ಕಿಂತ ಭಿನ್ನವಾದ ಪ್ರಪಂಚವನ್ನು ಸೃಷ್ಟಿಸಲು ಆಕೆಗೆ ಆತ್ಮಾಭಿವ್ಯಕ್ತಿಗೆ ತೊಡಗುವುದೊಂದೇ ಮಾರ್ಗವಾಗಿದೆ'.[೬] ಶತಮಾನಗಳಿಂದಲೂ ಬರಹಗಳ ಮೂಲಕ ಆಕಾಂಕ್ಷೆ ಮತ್ತು ಸಂವಹನ ಒಡ್ಡುವ ಸವಾಲುಗಳನ್ನು ಎದುರಿಸುವ ನೆಲೆಯಲ್ಲಿ ಮಹಿಳಾ ಬರಹಗಾರರಿಗೆ ಪ್ರಧಾನವಾಹಿನಿಯ ಜೊತೆಗೆ ಅನುಸಂಧಾನ ನಡೆಸುವುದು ಸಾಧ್ಯವಾಗಿಲ್ಲ ಎನ್ನುವುದು ನಿಜ. ಇದಕ್ಕೆ ಧಾರ್ಮಿಕ, ಶೈಕ್ಷಣಿಕ, ರಾಜಕೀಯ, ಸಂಸ್ಕೃತಿಗಳ ಪಾತಳಿಗಳಿಂದಲೇ ಕಾರಣಗಳನ್ನು ಹುಡುಕಬೇಕಾಗುತ್ತದೆ; ಉತ್ತರಗಳನ್ನು ಕಂಡುಕೊಳ್ಳಬೇಕಾಗುತ್ತದೆ.[೭] ಸ್ತ್ರೀಯನ್ನು ಅವಳ ತಾಯ್ತನ ಹಾಗೂ ಪತ್ನಿತ್ವದ ಚೌಕಟ್ಟಿನೊಳಗೇ ಅನೇಕ ಶತಮಾನಗಳವರೆಗೆ ಬಂಧಿಸಲ್ಪಟ್ಟ ಭಾರತೀಯ ವ್ಯವಸ್ಥೆ ಸ್ತ್ರೀ ಶಿಕ್ಷಣ ಜಾರಿಯೊಂದಿಗೆ ಬದಲಾವಣೆಯತ್ತ ದಾಪುಗಾಲು ಹಾಕಿತು. ತನ್ನ ಗೃಹಕೃತ್ಯದ ನ್ಯಾಯಯುತ ಪ್ರತಿಫಲಕ್ಕಾಗಿ ಧ್ವನಿಯೆತ್ತದಂತೆ ಹಾಕಿದ ಸಾಂಸ್ಕೃತಿಕ ಬಂಧನವನ್ನು ಒಡೆದು ಮಹಿಳೆ ಆರ್ಥಿಕ ಸ್ವಾವಲಂಬನೆಯೆಡೆಗೆ ವಾಲಿದ್ದು ಸ್ವಾತಂತ್ರ್ಯಪೂರ್ವ ಸಂದರ್ಭದ ವಿಶೇಷ ಕ್ರಾಂತಿ ಎನ್ನಬಹುದು. ಶತಮಾನಗಳಿಂದಲೂ ಹೆಣ್ಣನ್ನು ಕೇವಲ ಹೆರುವ ಯಂತ್ರವಾಗಿರಿಸಿ ಆಕೆಯ

ಕ್ರಿಯಾಶೀಲತೆಯನ್ನು ಪೂರ್ತಿ ನಾಶಮಾಡಿ ಮೂಲೆಗೊತ್ತರಿಸಿದ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು ತನ್ನ ಅಸ್ತಿತ್ವವನ್ನು ಸ್ಥಾಪಿಸಲು ಹಲವು ರೀತಿಗಳಲ್ಲಿ ಹೆಣಗಬೇಕಾಗಿದೆ.[೮] ಅಸಮಾನತೆ ಮತ್ತು ಅಸ್ಪೃಶ್ಯತೆಯ ನೋವಿನ ನರಕದಲ್ಲಿ ಶತಮಾನಗಳಿಂದಲೂ ಉಸಿರುಗಟ್ಟಿ ಬದುಕುತ್ತಿದ್ದ ಮಾನವ ಜೀವಿಗಳಿಗೆ ಧ್ವನಿ ನೀಡಿ ಬಿಡುಗಡೆಯ ಹಾದಿ ಕಂಡುಕೊಳ್ಳುವುದಕ್ಕೂ ಸಾಹಿತಿಗಳು ಶ್ರಮಿಸಬೇಕಾಗಿದೆ. ಮಿರಿಯಂ ಶ್ನೀರ್ ರವರು ಸ್ತ್ರೀವಾದ: ಮುಖ್ಯ ಐತಿಹಾಸಿಕ ಬರಹಗಳು ಎಂಬ ಕೃತಿಯಲ್ಲಿ 'ಹಿಂದೂ ಪರದಾ ಪದ್ಧತಿ ಅಥವಾ ಮುಸ್ಲಿಂ ಘೋಷಾಪದ್ಧತಿಗಳಂತಹುಗಳ ಹಿನ್ನೆಲೆಗಳಲ್ಲಿ ಯಾವುದೇ ಸ್ತ್ರೀವಾದಿ ಕೃತಿ ಬರುವುದು ಅಸಾಧ್ಯ, ಶತಮಾನಗಳ ಗುಲಾಮತನ ಬೌದ್ಧಿಕ ಬೆಳವಣಿಗೆ ಅಥವಾ ಅಭಿವ್ಯಕ್ತಿಗೆ ಭೂಮಿಕೆಯಾಗುವುದು ಸಾಧ್ಯವೇ ಇಲ್ಲ' ಎಂಬುದಾಗಿ ಹೇಳಿದ್ದಾರೆ.[೯]

ಪ್ರಾಚೀನ ಸಾಹಿತ್ಯದಲ್ಲಿ ಸಾಮಾನ್ಯರಲ್ಲಿ ಸಾಮಾನ್ಯಳಾದ ಮಹಿಳೆಯರ ಸಂವೇದನೆಗಳು ವ್ಯಕ್ತಗೊಳ್ಳುವುದು ಸಾಧ್ಯವಿರಲ್ಲಿಲ್ಲ ಮತ್ತು ಅವು ಪುರುಷಾಸಕ್ತಿಗೆ ಪೂರಕವಾಗಿದ್ದವು. ಪುರುಷ ಕೇಂದ್ರದ ಪರಿಧಿಗಳ ಸಾಹಿತ್ಯ ಪರಂಪರೆಯಲ್ಲಿ ಮಹಿಳಾ ಸಂವೇದನೆಯ ಕುರಿತ ನಿರ್ಲಿಪ್ತತೆ ಕಂಡು ಬರುತ್ತದೆ. ಮಹಿಳಾ ಸಾಹಿತ್ಯದ ಮುಖ್ಯ ಕೊಂಡಿಯಾದ ಜಾನಪದ ಮಹಿಳಾ ಸಾಹಿತ್ಯದಲ್ಲಿಯೂ ಬಹುಪಾಲು ಪುರುಷಪ್ರಧಾನ ನಿಲುವುಗಳೇ ತುಂಬಿಕೊಂಡಿವೆ.[೧೦] ಸಮಾಜದ ಪ್ರೋತ್ಸಾಹ ಅಥವಾ ಪ್ರತಿಕೂಲಗಳಿಂದ ಲೇಖಕಿಯೊಬ್ಬಳು ಹುಟ್ಟಬಹುದಾದರೂ, ಸಾಧನೆಮಾಡಬಹುದಾದರೂ ಅದು ಮೂಲಭೂತವಾಗಿಯೇ ಒಂದು ಭಿನ್ನ ಸಂಗತಿ ಆಗಿರುತ್ತದೆ. ಏಕೆಂದರೆ ಪ್ರತಿಭೆ ಮತ್ತು ಪ್ರೋತ್ಸಾಹಗಳನ್ನು ಹೊರತುಪಡಿಸಿಯೋ ಅವಳ ಮುಂದೆ ಭಿನ್ನವಾದ ಒಂದು ಸಾಮಾಜಿಕ ಸಂದರ್ಭವಿರುತ್ತದೆ.[೧೧] ಸ್ತ್ರೀಯ ಅಭಿವ್ಯಕ್ತಿ 'ಸಾಧನೆ' ಎಂಬುದು ತೀರ ಅಪರೂಪದ ಸಂಗತಿಯಾಗಿದ್ದ ಕಾಲದಲ್ಲಿ, ತಮ್ಮ ಮನಸ್ಸಿನ ತುಮುಲಗಳನ್ನು ಹೊರಗೆಡಹುವುದು, ಸಮಾಜದ ಮೌಢ್ಯಗಳನ್ನು ಕಳೆಯುವುದು, ಮಹಿಳೆಯರಿಗೆ ಅವರ ಬದುಕಿನ ಸತ್ಯಚಿತ್ರಣವನ್ನು ಕೊಡುವುದರ ಮೂಲಕ ಅವರ ಅಭ್ಯುದಯವನ್ನುಂಟುಮಾಡುವುದು ಅಂದಿನ ಲೇಖಕಿಯರ ಉದ್ದೇಶವಾಗಿತ್ತು.

ಪುರುಷರು ಎಷ್ಟೇ ಸೂಕ್ಷ್ಮ ಸಂವೇದಿಗಳಾದಾಗಲೂ ಸ್ತ್ರೀ ಬದುಕಿನ ಅನುಭವವನ್ನು ಅವರು ತಮ್ಮದಾಗಿಸಿಕೊಳ್ಳಲು ಸಾಧ್ಯವಿಲ್ಲ. ಹಾಗಾಗಿ ಸಾಹಿತ್ಯ ಕ್ಷೇತ್ರದಲ್ಲಿನ ಪುರುಷರ ಸಾಧನೆ ಅತಿಶಯವಾದುದಾದರೂ ಅದು ಅಪೂರ್ಣ. ಸಾಹಿತ್ಯವು ಸಮಾಜದ ಪ್ರತಿಬಿಂಬ ಎನ್ನುವುದಾದರೆ ಅದರ ಅರ್ಧಭಾಗವಾದ ಸ್ತ್ರೀ ಸಮಾಜದ ಅಭಿವ್ಯಕ್ತಿಯು ಅಲ್ಲಿರಲೇಬೇಕು. ಈ ಕೊರತೆಯನ್ನು ತುಂಬಲು ಮಹಿಳೆಯರೇ ಸಾಹಿತ್ಯ ರಚಿಸಬೇಕಾಗಿದೆ ಎಂಬ ತರ್ಕವನ್ನು ಸ್ವಾತಂತ್ರ್ಯಪೂರ್ವದ ಲೇಖಕಿಯರು ಪ್ರಬಲವಾಗಿ ಪ್ರತಿಪಾದಿಸುತ್ತಾರೆ. ಮಹಿಳೆಯರ ಸ್ಥಿತಿಗತಿಗಳ ಬಗ್ಗೆ ಸಮಾಜದಲ್ಲಿದ್ದ ನಿಕೃಷ್ಟ ಪದ್ಧತಿಗಳನ್ನು ತಮ್ಮ ಕೃತಿಗಳಲ್ಲಿ ಕಟುವಾಗಿ ಟೀಕಿಸಿ ತಮ್ಮಂತೆ ಸಹೋದರಿಯರಿಗೂ ತಮ್ಮ ಅಭಿಪ್ರಾಯ ಸುಲಭವಾಗಿ ತಲುಪಬೇಕು ಎಂಬ ಉದ್ದೇಶ ಹೊಂದಿದ್ದ ಅವರು ಬರವಣಿಗೆಗಳ ಮೂಲಕ ಪ್ರಾಮಾಣಿಕವಾಗಿ ಪ್ರಯತ್ನಿಸಿದರು.[೧೨]

ಸಾರಾ ಅಬೂಬಕ್ಕರ್ ಅಭಿಪ್ರಾಯಪಡುವಂತೆ 'ಮಹಿಳೆಯರು ಬರೆದುದೆಲ್ಲವೂ ಅಡಿಗೆ ಮನೆ ಸಾಹಿತ್ಯ ಎಂದು ಮಹಿಳಾ ಸಾಹಿತ್ಯವನ್ನು ಸಾರಾಸಗಟಾಗಿ ತಿರಸ್ಕರಿಸುವವರು ಕೆಲವು ವಿಷಯಗಳನ್ನು ಗಮನಿಸಬೇಕು. ಅಡುಗೆ ಮನೆಗಳಲ್ಲೂ ಸಾಹಿತ್ಯ ಹುಟ್ಟುತ್ತದೆ ಮತ್ತು ಅಂತಹುಗಳನ್ನು ಪುರುಷ ಸಾಹಿತಿಗಳು ಎಂದಿಗೂ ಚಿತ್ರಿಸುವುದು ಸಾಧ್ಯವೇ ಇಲ್ಲ. ಹೆಣ್ಣಿನ ನೋವನ್ನು ಹೆಣ್ಣು ಅರ್ಥಮಾಡಿಕೊಂಡಂತೆ ಗಂಡು ಬಿಚ್ಚಿಡಲಾರರು'.[೧೩]

ಪಾಶ್ಚಾತ್ಯ ಅಲೆ ಮೊದಲು ಬಂಗಾಳಿ ಸಾಹಿತ್ಯದ ಮೇಲೆ ಪ್ರಭಾವ ಬೀರಿತು. ಅಲ್ಲಿಂದ ಭಾರತದ ಇತರ ಭಾಷೆಗಳಿಗೂ ಹರಡಿತು. ಇಂಗ್ಲಿಷ್ ಸಾಹಿತ್ಯದ ನೇರ ಪ್ರಭಾವದಿಂದ ನಾವೆಲ್ ಕನ್ನಡಕ್ಕೆ ಕಾದಂಬರಿಯಾಗಿ ಬಂದಿತು. ಆಂಗ್ಲ ಸಾಹಿತ್ಯ ಪ್ರಭಾವದಿಂದ ಬಂದ ಇತರ ಅನೇಕ ಪ್ರಕಾರಗಳಂತೆ ಕಾದಂಬರಿ ಪ್ರಕಾರವೂ ಅನುವಾದಗಳ ಮೂಲಕ ನಮ್ಮ ಸಾಹಿತ್ಯವನ್ನು ಪ್ರವೇಶಿಸಿತು. ಭಾರತದ ಇತರ ಭಾಷೆಗಳಿಂದಲೂ ಕೆಲವು ಕೃತಿಗಳು ಅನುವಾದಗೊಂಡು ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಭದ್ರವಾದ ಬುನಾದಿಯನ್ನು ಹಾಕಿದವು. 'ಯಮುನಾಬಾಯಿ ಸಂಚಾರ' (೧೮೭೯) ಬಂಗಾಲಿಯಿಂದ ಕನ್ನಡಕ್ಕೆ ಅನುವಾದಗೊಂಡ ಮೊದಲ ಕೃತಿ.[೧೪] ಕರ್ನಾಟಕ ಕಂಡ ಮೊದಲ ಲೇಖಕಿಯರಾದ ತಿರುಮಲಾಂಬಾ, ಆರ್. ಕಲ್ಯಾಣಮ್ಮನವರು, ಸರಸ್ವತಿ ದೇವಿ ಗೌಡರ ಹಾಗೂ ತಿರುಮಲೆ ರಾಜಮ್ಮ ಮೊದಲಾದ ಲೇಖಕಿಯರು ನೀಡಿದ ಸಾಹಿತ್ಯಿಕ ಕೊಡುಗೆ ಮೆಚ್ಚುವಂತಹದ್ದು. ಸಮಾಜವನ್ನು ಎದುರಿಸುವ ಧೈರ್ಯವಿಲ್ಲದೆಯೋ ಹೆಣ್ಣಿನ ಬವಣೆ, ಬೇಯುವಿಕೆಗಳನ್ನು ಸಮಾಜದ ಗಮನಕ್ಕೆ ತಂದು ವಾಸ್ತವ ಪ್ರಪಂಚಕ್ಕೆ ಕನ್ನಡಿ ಮಾತ್ರ ಹಿಡಿದು ತೋರಿಸುವ ಕೆಲಸ ಮಾಡಿದ್ದಾರೆ. ಪುರುಷಪರ ಸಮಾಜದ ಒಳ ಇಂಗಿತವನ್ನು ಅರ್ಥ ಮಾಡಿಕೊಳ್ಳುವ ಸೂಕ್ಷ್ಮವಿಲ್ಲದೆ ಬರೆದಂತಹ ಲೇಖಕಿಯರು ಮತ್ತು ಹೆಣ್ಣಿನ ಚಿಂತಾಜನಕ ಬದುಕು ಅವಳ ಜೈವಿಕ ಸ್ಥಿತಿಯನ್ನು ಅವಲಂಬಿಸಿದೆ ಎಂದುಕೊಂಡವರೂ ಕೇವಲ ಕನಸುಗಳ ಭ್ರಮಾಲೋಕದಲ್ಲಿ ವಿಹರಿಸಿ ಹೆಣ್ಣಿನ ಬದುಕಿನ ಬವಣೆಗೆ ಕೃತಕ ಮತ್ತು ಕ್ಷಣಿಕ ಸಾಂತ್ವನ ನೀಡುವ ಪ್ರಯತ್ನ ಮಾಡಿದ್ದಾರೆ.[೧೫]

ನಂಜನಗೂಡಿನ ಬಾಲಿಕಾ ಪಾಠಶಾಲೆಯ ವಿದ್ಯಾರ್ಥಿನಿಯಾದ ತಿರುಮಲಾಂಬಾರಿಗೆ ಹನ್ನೆರಡು ವರ್ಷ ತುಂಬುವ ಮೊದಲೇ ಶೈಕ್ಷಣಿಕ ಜೀವನ ಕೊನೆಗೊಂಡಿತು. ಜೀವನದುದ್ದಕ್ಕೂ ಅಧ್ಯಯನಶೀಲರಾಗಿದ್ದ ತಿರುಮಲಾಂಬಾ ಅವರ ಶಾಲಾ ಶಿಕ್ಷಣ ನಾಲ್ಕನೆಯ ತರಗತಿಯವರೆಗೆ ಮಾತ್ರ ಸಾಗಿತು. ಶಾಲೆಯಿಂದ ಓಡಿ ಬಂದ ಹುಡುಗಿಗೆ ಮದುವೆ ಮಂಟಪ ಕಾಯುತ್ತಿತ್ತು. ಹದಿಮೂರರ ಮುಗ್ಧ ಹುಡುಗಿ ಪುಟ್ಟ ಮುತ್ತೈದೆಯ ಪಟ್ಟವೇರಿದ ದಿನಗಳು ಹಸಿರಾಗಿರುವಾಗಲೇ ಯಾರೂ ಊಹಿಸಲಾರದ ಆಘಾತ ಎರಗಿತು. ಆ ಪುಟ್ಟ ಹುಡುಗಿಯೊಂದಿಗೆ ಹಸೆಮಣೆಯೇರಿದ್ದ ಹುಡುಗ ಮರಣವನ್ನಪ್ಪಿದ. ಹದಿನಾಲ್ಕರ ಹುಡುಗಿ ತಿರುಮಲಾಂಬಾ ವಿಧವೆಯಾದಳು. ೧೯೦೦-೧೯೦೭ರ ಅವಧಿಯಲ್ಲಿ ಮತ್ತೆರಡು ಪ್ರಿಯ ಜೀವಗಳು ಅವರನ್ನು ತೊರೆದವು. ೧೯೦೩ರಲ್ಲಿ ತಮ್ಮನನ್ನೂ, ೧೯೦೭ರಲ್ಲಿ ಒಡಹುಟ್ಟಿದ ತಂಗಿಯನ್ನೂ ಅವರು ಕಳೆದುಕೊಂಡರು. ಆದರೆ ಈ ಆಘಾತಗಳ ಅಗ್ನಿಕುಂಡದಲ್ಲಿ ಚಿಗುರುವ ಜೀವಗಳು ಕಷ್ಟಗಳನ್ನು ಮೆಟ್ಟಿ ನಿಂತು ಬೆಳೆಯುತ್ತವೆ, ಬದುಕು ನೀಡುವ

ವಿಷವೂ ಅವುಗಳಿಗೆ ಅಮೃತವಾಗುತ್ತದೆ. ಅಂಥ ಜೀವಗಳಲ್ಲಿ ಒಂದು ನಂಜನಗೂಡು ತಿರುಮಲಾಂಬಾ ಅವರದ್ದು.[೧೬] ಮಹಿಳಾ ಬರಹಗಾರ್ತಿಯರ ಬಗೆಗಿನ ಪೂರ್ವಾಗ್ರಹವು ಎಷ್ಟು ವ್ಯಾಪಕವಾಗಿತ್ತೆಂದರೆ ಅನೇಕ ಮಹಿಳಾ ಬರಹಗಾರ್ತಿಯರು ತಮ್ಮ ಬರವಣಿಗೆಗಳಿಗೆ ಪುರುಷ ಕಾವ್ಯನಾಮಗಳನ್ನು ಬಳಸುತ್ತಿದ್ದರು. ಜ್ಞಾನದ ಸಂಗ್ರಹಣೆಯ ಪ್ರಕ್ರಿಯೆಯಲ್ಲಿ ಮಹಿಳೆಯರು ಭಾಗವಹಿಸದೇ ಇರುವುದರಿಂದ, ಮಹಿಳೆಯರ ಜೀವನದ ಬಗ್ಗೆ ನೀಡಲಾಗಿರುವ ವಿವರಣೆಗಳು ಅಂಶಿಕವಾಗಿರುವುದು. ಅಲ್ಲದೆ ಕೆಲವೊಮ್ಮೆ ನೀಡಲಾಗಿರುವ ವಿವರಗಳು ತಪ್ಪಾಗಿರುವುದನ್ನು ಸ್ಪಷಪಡಿಸುತ್ತದೆ.[೧೭]

ಲಿಂಗಾಧಾರಿತ ಸಮಾಜದಲ್ಲಿ ಪುರುಷನೊಬ್ಬನು ಲೇಖಕನಾಗುವ ಪ್ರಕ್ರಿಯೆ ಹಾಗೂ ಸ್ತ್ರೀಯೊಬ್ಬಳು ಲೇಖಕಿಯಾಗುವ ಪ್ರಕ್ರಿಯೆಗೆ ಅಪಾರ ವ್ಯತ್ಯಾಸವಿದೆ. ಹೆಣ್ಣು ಎನ್ನುವ ಕಾರಣಕ್ಕಾಗಿಯೇ ಉಂಟಾಗುವ ಕೌಟುಂಬಿಕ ಆಚರಣೆಗಳು, ಹೊಣೆಗಾರಿಕೆಗಳು, ಸಮಾಜದ ನಿರುತ್ಸಾಹ, ನೀರಸ ಪ್ರತಿಕ್ರಿಯೆಗಳು, ಸಾಮಾಜಿಕ ನಿರ್ಬಂಧಗಳು ಯಾವ ಹಂತದಲ್ಲಿ ಬೇಕಾದರೂ ಅವಳನ್ನು ಹಿಮ್ಮೆಟ್ಟಿಸಬಹುದು. ಕೊನೆಗೆ ಸ್ಪಷ್ಟವಾದ ಕಾರಣವಿಲ್ಲದೆ ಅವಳು ತನ್ನಿಂದ ತಾನೇ ಅದರಿಂದ ದೂರ ಸರಿಯಬಹುದು. ತನ್ನ ಬದುಕಿನ ಪ್ರಾತಿನಿಧ್ಯಗಳಲ್ಲಿ ಬರಹವನ್ನು ಆಯ್ಕೆಮಾಡಿಕೊಳ್ಳದಿರುವ 'ವೈಚಾರಿಕ ಜಾಣ್ಮೆ' ಯನ್ನು ಆಕೆ ತೋರಬಹುದು.[೧೮]

ಹೆಣ್ಣನ್ನು ಮನುಷ್ಯಳಾಗಿ ಪರಿಗಣಿಸದೆ, ಒಂದು ಭೋಗದ ವಸ್ತುವಾಗಿ, ನಿರ್ಜೀವ ವಸ್ತುವಾಗಿ, ಗಂಡನ ಆಸ್ತಿಯಾಗಿ ಭಾವಿಸುವ ಸಮಾಜದ ನಡವಳಿಕೆಗಳನ್ನು ಅತ್ಯಂತ ಆತಂಕದಿಂದ ಮತ್ತು ಕಳಕಳಿಯಿಂದ ದೃಷ್ಟಿಸಿ, ಸ್ತ್ರೀ ವಿರೋಧಿ ಸಂಪ್ರದಾಯಗಳ ಆಚರಣೆಯಲ್ಲಿ ಹಾಗೂ ಸ್ತ್ರೀಯರ ಸ್ಥಾನಮಾನದಲ್ಲಿ ಬದಲಾವಣೆ ಬಯಸಿ, ಹತ್ತೊಂಭತ್ತನೆಯ ಶತಮಾನದಲ್ಲಿ ಹಲವು ಮಹಿಳೆಯರು ಬರೆಯತೊಡಗಿದರು. ಕನ್ನಡದ ಮೊದಲ ಕಾದಂಬರಿಗಳು ಹೆಣ್ಣಿನ ಸಮಸ್ಯೆಯನ್ನೇ ಆದ್ಯತೆಯಾಗಿ ಸ್ವೀಕರಿಸಿದ್ದವು. ಶೋಷಿತ ಸ್ಥಿತಿಯ ಅರಿವಿನ ಅನಾವರಣ ಮಹಿಳಾ ಸಂವೇದನೆಯ ಮುಖ್ಯ ಧಾರೆಯಾಗಿಯೇ ಬೆಳೆದು ಬಂದಿದೆ. ಇದು ಮಹಿಳಾ ಅಭಿವ್ಯಕ್ತಿಯ ಒಂದು ಮಾದರಿ ಎನ್ನುವಷ್ಟು ಪ್ರಖರವಾಗಿದೆ. ಬದುಕಿನ ಹೊರ ಆವರಣಗಳು ಬದಲಾದಷ್ಟು ಸಲೀಸಾಗಿ ಒಳಸಂಗತಿಗಳು ಪಲ್ಲಟವಾಗದ ಕಾರಣಕ್ಕಾಗಿ ಇಂದಿಗೂ ಮಹಿಳಾ ಸಂವೇದನೆಯಲ್ಲಿ ಶೋಷಿತ ಸ್ಥಿತಿಯ ಅಸಂಖ್ಯ ಮಾದರಿಗಳು ತೆರೆದುಕೊಳ್ಳುತ್ತವೆ.[೧೯]

ಸಾಹಿತ್ಯವೆಂಬುದು ಮನೋರಂಜನೆಯ ಅಥವಾ ಮನಸ್ಸಿಗೆ ಸಾಂತ್ವಾನ ನೀಡುವ ವಸ್ತುವಾಗಲು ಹೇಗೆ ಸಾಧ್ಯವೋ ಹಾಗೆಯೇ ಸಮಾಜವನ್ನು ರೂಪಿಸುವ ಮತ್ತು ಸಂಸ್ಕೃತಿಯನ್ನು ಸುಧಾರಣೆಗೊಳಿಸುವ ಸಾಧನವೂ ಆಗುತ್ತದೆ. ಇದು ಸಮಾಜ ಮತ್ತು ಸಂಸ್ಕೃತಿಯ ಬಿಂಬಗಳನ್ನು ತೋರಿಸುವ ಕನ್ನಡಿಯೂ ಹೌದು. ಲೇಖಕಿಯರು ಮೊದಲ ಕೆಲವು ದಶಕಗಳಲ್ಲಿ ಹೆಚ್ಚಾಗಿ ತಮ್ಮ ಸುತ್ತಮುತ್ತಲ ಬದುಕಿನ ಬಗ್ಗೆ ಬರೆದರು. ಲೇಖಕಿಯರ ಸಾಹಿತ್ಯ ಕುಟುಂಬಕ್ಕಷ್ಟೇ ಸೀಮಿತವಾದುದೆಂಬ ಮಾತು ಬಹುಕಾಲ ಪ್ರಚಲಿತದಲ್ಲಿತ್ತು. ಹೆಚ್ಚಿನ ಶಿಕ್ಷಣವೇ ನೀಡದೆ, ಮನೆಯಾಚೆ ಇಣುಕಲೂ ಅನುಮತಿ ಇಲ್ಲದೆ ಹೆಣ್ಣು ಪೆನ್ನು ಹಿಡಿಯುವುದೇ ಸಾಹಸಮಯ ಕೆಲಸವಾದಾಗ

ಜಗತ್ತಿನ ಆಗು ಹೋಗುಗಳನ್ನು ಬರೆಯುವುದಾದರೂ ಹೇಗೆ? ಈ ಅಂಶಗಳ ಅರಿವಿನಲ್ಲಿ ಅಂದಿನ ಸಮಾಜದಲ್ಲಿ ನಿಂತು, ಆ ಕಾಲಕ್ಕೆ ಹೋಗಿಯೇ ಈ ಹಳೆಯ ತಲೆಮಾರಿನ ಲೇಖಕಿಯರ ಕೃತಿಗಳನ್ನು ನಾವು ಗಮನಿಸಬೇಕಾಗುತ್ತದೆ.[೨೦]

**೫.೨ ಪತ್ರಿಕೆಗಳಲ್ಲಿ ಪ್ರಕಟವಾದ ಸ್ತ್ರೀಪರ ಲೇಖನಗಳು**

ವಸಾಹತುಶಾಹಿ ಆಡಳಿತಕ್ರಮಕ್ಕೆ ಕರ್ನಾಟಕದಲ್ಲಿಯೇ ಮೊಟ್ಟಮೊದಲು ತೆರೆದುಕೊಂಡ ಕರಾವಳಿ ಭಾಗವು ೨೦ನೇ ಶತಮಾನದ ಮೊದಲ ೫ ದಶಕಗಳಲ್ಲಿ ಮಹಿಳಾ ಸುಧಾರಣೆಯಲ್ಲಿ ಪ್ರಮುಖ ಪಾತ್ರವಹಿಸಿರುವುದನ್ನು ಪರಿಗಣಿಸಬೇಕಾಗುತ್ತದೆ. ಈ ಕಾರಣದಿಂದಾಗಿಯೇ ಹೆಚ್ಚು ಸಂಖ್ಯೆಯ ಕರಾವಳಿ ಪತ್ರಿಕೆಗಳು ಸ್ವಾತಂತ್ರ್ಯಪೂರ್ವದ ಮಹಿಳೆಯನ್ನು ವಿವಿಧ ಆಯಾಮಗಳಲ್ಲಿ ಕಟ್ಟಿಕೊಟ್ಟಿವೆ. ವಸಾಹತು ಕಾಲಘಟ್ಟದಲ್ಲಿ ಪ್ರಕಟಗೊಳ್ಳುತ್ತಿದ್ದ ಪತ್ರಿಕೆಗಳಾದ ಅಂತರಂಗ, ಬಾಲಚಂದ್ರ, ಜಯಂತಿ, ಜಯಕರ್ನಾಟಕ, ಕನ್ನಡ ಕೋಗಿಲೆ, ನವಯುಗ, ಸ್ವದೇಶಾಭಿಮಾನಿ, ರಾಷ್ಟ್ರಮತ, ರಾಷ್ಟ್ರ ಬಂಧು, ಸದ್ಬೋದಚಂದ್ರಿಕೆ, ವಿವೇಕಾಭ್ಯುದಯ ಮೊದಲಾದ ಪತ್ರಿಕೆಗಳಲ್ಲಿ ಪ್ರಕಟಗೊಂಡ ಬರಹಗಳಲ್ಲಿ ಸ್ತ್ರೀತ್ವದ ಪ್ರಜ್ಞೆಯನ್ನು ಗುರುತಿಸಬಹುದು. **(ಅನುಬಂಧ ೨)**

೧೯೧೯ರ 'ಸ್ವದೇಶಾಭಿಮಾನಿ' ಪತ್ರಿಕೆಯಲ್ಲಿ ಪ್ರಕಟವಾದ 'ಸ್ತ್ರೀ ಶಿಕ್ಷಣ' ಎಂಬ ಲೇಖನದಲ್ಲಿ ಶಿಕ್ಷಣವನ್ನು ಹೊಂದುತ್ತಿರುವ ಸ್ತ್ರೀಯರ ಪ್ರಮಾಣದಲ್ಲಿ ಮೊದಲಿಗಿಂತ ಏರಿಕೆ ಕಂಡುಬಂದರೂ ಸರಕಾರವು ಹೊರಡಿಸಿದ ಕೆಲವು ಠರಾವುಗಳು ಸ್ತ್ರೀ ಶಿಕ್ಷಣಕ್ಕೆ ಉಂಟಾಗಿರುವ ಎಡರುಗಳನ್ನು ತೋರಿಸುತ್ತದೆ. ಅವುಗಳೆಂದರೆ, ಮೊದಲನೆಯದಾಗಿ ಉಪಾಧ್ಯಾಯಿನಿಯವರ ಅಭಾವ, ಎರಡನೆಯದಾಗಿ ಸ್ತ್ರೀವರ್ಗಕ್ಕೋಸ್ಕರ ಇರುವ ಅಭ್ಯಾಸಕ್ರಮವು ಇನ್ನೂ ನಿಶ್ಚಿತವಾಗಿರದೆ ಹುಡುಗರ ಶಾಲೆಗಳಲ್ಲಿರುವ ಮೆಟ್ರಿಕ್ಯುಲೇಷನ್ನಿನ ಅಭ್ಯಾಸ ಕ್ರಮವು ಅನೇಕ ಪಾಲಕರಿಗೆ ಸಮ್ಮತವಿಲ್ಲದಿರುವುದು ಹಾಗೂ ಸ್ತ್ರೀ ಶಿಕ್ಷಣದ ಪ್ರಸಾರಕ್ಕೆ ಪರೀಕ್ಷೆಯ ಮನೋರತ್ನವು ಮೂರನೆಯ ಕಾರಣವಾಗಿದೆ. ಈ ಲೇಖನವು ಹೆಣ್ಣಿಗೆ ಶಿಕ್ಷಣದ ಅನಿವಾರ್ಯತೆ ಕುರಿತು ಚರ್ಚೆ ನಡೆಸುವುದರೊಂದಿಗೆ ಮುಂದಿರುವ ಸವಾಲುಗಳ ಕುರಿತು ಜಾಗೃತಿ ಮೂಡಿಸುತ್ತದೆ.[೨೧]

'ಸ್ತ್ರೀ ವಿವಾಹ, ಸಂಪ್ರದಾಯ ಮತ್ತು ಸಮಕಾಲೀನತೆ' ಶೀರ್ಷಿಕೆಯಡಿಯಲ್ಲಿ ವಸಾಹತುಶಾಹಿ ಅವಧಿಯ ಮಹಿಳಾ ಪ್ರಶ್ನೆಯ ಕುರಿತು ಚರ್ಚೆ ಹಾಗೂ ಆಧುನಿಕ ಬದುಕಿಗೆ ವಿದ್ಯಾಭ್ಯಾಸಕ್ಕೆ ತೆರೆದುಕೊಂಡವರನ್ನು ಸನಾತನ ಚೌಕಟ್ಟಿನಲ್ಲಿಯೇ ಉಳಿಸಿಕೊಳ್ಳುವ ಕಾಳಜಿ ಕಂಡು ಬರುತ್ತದೆ. ತೆರೆಮರೆಯಲ್ಲಿದ್ದು ತಮ್ಮ ಮನಸ್ಸಿನ ಸಂದಿಗ್ಧಗಳನ್ನು ಅನಾವರಣಗೊಳಿಸುವ ಲೇಖನಗಳಲ್ಲಿ ಉದಾಹರಣೆಗೆ 'ಇತೀ ನಿಮ್ಮ ಸಹೋದರಿ' ಎಂಬ ಅನಾಮಧೇಯ ಸ್ತ್ರೀಯು 'ನವಯುಗ' ಪತ್ರಿಕೆಯಲ್ಲಿ ಬರೆದ 'ಸ್ತ್ರೀಯರು ಪಂಜರದ ಗಿಳಿಯಂತಿರಬೇಕೆ?'ಎಂಬ ಲೇಖನದಲ್ಲಿ 'ಇಂದು ಯಾವ ಸಮಸ್ಯೆಯೇ ಬರಲಿ ಅದನ್ನು ಬಿಡಿಸುವ

ಸಕಲ ಜವಾಬ್ದಾರಿ ಪುರುಷರದ್ದೇ ಆಗಿದೆ. ಹೀಗಾಗಿ ದೇಶದ ಅರ್ಧಪಾಲು ಜನತೆ ಮರೆಯಲ್ಲೇ ವ್ಯವಹರಿಸುವಂತಾಗಿದೆ. ಇದು ಉತ್ತರ ಹಿಂದೂಸ್ತಾನದ ಮಾತಾದರೆ, ನಮ್ಮ ಜಿಲ್ಲೆಯಲ್ಲಿ ಮಹಮ್ಮದೀಯರನ್ನು ಬಿಟ್ಟರೆ ಈ ಪರದಾನಿಷ್ಠರು ಬೇರೆ ಇಲ್ಲವೆನ್ನಬಹುದು. ಆದರೆ ಇದರಿಂದ 'ಮುಖಕ್ಕಿಲ್ಲ ಮರೆ' ಎಂಬ ಒಂದೇ ಸಮಾಧಾನವಲ್ಲದೆ ಸ್ತ್ರೀ ಸ್ವಾತಂತ್ರ್ಯದ ಮಾತಿಗೆ ಸರಿಯಾದ ಉತ್ತರವು ಇಲ್ಲಿಯೂ ಇಲ್ಲ. ಮಂಗಳೂರಿನ ಕೆಥೋಲಿಕ್ ಸ್ತ್ರೀಯರ ಮಾದರಿಯನ್ನು ದೃಷ್ಟಾಂತವಾಗಿ ತೆಗೆದುಕೊಂಡರೆ, ಅವರು ಸಲಿಗೆಯಲ್ಲಿ ಪೇಟೆಯಲ್ಲಿ ತಿರುಗಾಡುವ ರೀತಿ, ತಮ್ಮ ಅವಶ್ಯಕತೆಗಳಿಗೆ ಬೇಕಾದಲ್ಲಿ ಹೋಗುವ ಸ್ವಾತಂತ್ರ್ಯ, ಇವುಗಳಿಂದ ಸಮಾಜಕ್ಕೇನಾದರೂ ಹಾನಿಯಾಗಿದೆಯೇ?' ಎಂಬುವುದಾಗಿ ಪ್ರಶ್ನಿಸುತ್ತಾರೆ.

'ಸ್ತ್ರೀ ಸ್ವಾತಂತ್ರ್ಯ' ಎಂಬ ಸಂಪಾದಕೀಯ ಲೇಖನದಲ್ಲಿ ಸ್ತ್ರೀ ಸ್ವಾತಂತ್ರ್ಯದ ಅಗತ್ಯ ಪುರುಷರೊಡನೆ ಸ್ಪರ್ಧಿಸಲಿಕ್ಕಲ್ಲ. ಸ್ತ್ರೀಯೂ ಪುರುಷನೂ ಸಾಂಸಾರಿಕ ಜೀವನದ ಪ್ರತ್ಯೇಕ ಅಂಗಗಳೆಂಬ ತಿಳಿವೇ ಈ ತರಹದ ಭೇದಗಳಿಗೆ ಕಾರಣವಾಗಿರುತ್ತದೆ. ಸ್ತ್ರೀಯೂ ಪುರುಷನೂ ಒಂದೇ ಅಂಗದ ಎರಡು ವಿಭಾಗಗಳು ಮಾತ್ರವಾಗಿವೆ ಎನ್ನಲಾಗಿದೆ.[೨೨] ಶ್ರೀಮತಿ ವಿದ್ವತ್ತಮಾ ಮಿಶ್ರಾರವರು ಬರೆದ 'ಜಾಗೃತಗೊಂಡಿರುವ ಸ್ತ್ರೀಯರು' ಎಂಬ ಲೇಖನದಲ್ಲಿ ಅಮೇರಿಕಾದ ಸ್ತ್ರೀಯರು ಮತ್ತು ಸಮಾಜ ಹಾಗೂ ಅಲ್ಲಿನ ಸ್ತ್ರೀ ಪ್ರಧಾನ ಸಂಸ್ಕೃತಿಯ ಕುರಿತು ಮಾಹಿತಿ ನೀಡಿದ್ದಾರೆ. ಮಧ್ಯಕಾಲದ ಪರಾಧೀನತೆಯ ವಾತಾವರಣದಲ್ಲಿರುವ ಮತ್ತು ಪುರುಷ ಜಾತಿಯಿಂದ ತೊಂದರೆಗೀಡಾಗುವ, ಭಾರತದ ಸ್ತ್ರೀಯರಿಗೆ ಅಮೇರಿಕಾದ ಸ್ತ್ರೀಯರ ಸಾಮಾಜಿಕ ಸ್ಥಿತಿಯು ಅನೇಕ ವಿಚಾರಗಳಲ್ಲಿ ಆದರ್ಶವೂ, ಅನುಕರಣೀಯವೂ ಆಗಿದೆ. ಸಾಮಾಜಿಕ ಕ್ಷೇತ್ರಗಳಲ್ಲಿ ಉನ್ನತಿಗೈಯುತ್ತಾ ಅಮೇರಿಕಾದ ಸ್ತ್ರೀಯರು ಪ್ರಗತಿಯ ಸೀಮೆಯನ್ನು ಮುಟ್ಟಿರುವರು. ಇಂಗ್ಲೆಂಡಿನ ಸ್ತ್ರೀಯರೂ ಸಹ ಇವರಿಗಿಂತ ಹಿಂದೆ ಬಿದ್ದಿರುವರು. ಅಮೇರಿಕದ ಸಮಾಜದಲ್ಲಿ ಅಲ್ಲಿನ ಸ್ತ್ರೀಯರಿಗೆ ಪ್ರಮುಖ ಸ್ಥಾನವಿದೆ.

ಇಂಗ್ಲೆಂಡಿನ ಸಂಸ್ಕೃತಿಯು ಪುರುಷ ಪ್ರಧಾನವಾಗಿದ್ದರೆ ಅಮೇರಿಕದ್ದು ಸ್ತ್ರೀ ಪ್ರಧಾನವಾಗಿದೆ. ಎಲ್ಲೆಲ್ಲಿಯೂ ಅವರ ಪ್ರಭಾವವೇ ಹೆಚ್ಚು. ಅದೇ ರೀತಿ ಲೇಖನದ ಕೊನೆಯಲ್ಲಿ ಯಾವ ವಿಶ್ವದಲ್ಲಿ ಸ್ತ್ರೀ ಮತ್ತು ಪುರುಷರು ಸಮಕಕ್ಷಿಗಳೂ ಸಮಸಾಧನಾ ಸಂಪನ್ನರಾಗಿರುವರೋ ಅಂತಹ ವಿಶ್ವವೇ ಮನುಷ್ಯರು ಇರಲು ಯೋಗ್ಯವಾಗುವುದೋ ಇಲ್ಲವೋ ಎಂಬ ಪ್ರಶ್ನೆಯನ್ನು ಮುಂದಿಡುತ್ತಾರೆ.[೨೩] ದಕ್ಷಿಣ ಕನ್ನಡ ಜಿಲ್ಲೆಯ ಲೇಖಕಿ ವಿದೇಶಿಯರ ಕುರಿತು ಬರೆದಿರುವ ಲೇಖನ ಪಾಶ್ಚಾತ್ಯ ಶಿಕ್ಷಣದ ಪ್ರಭಾವಕ್ಕೊಂಡು ಉದಾಹರಣೆಯಾಗಿದೆ. ಅದೇ ರೀತಿ 'ಸ್ತ್ರೀ ಸಮಾಜದ ಉದ್ಧಾರ' ಎಂಬ ಲೇಖನದಲ್ಲಿ ಸ್ತ್ರೀಯರು ಪುರುಷರೊಡನೆ ಏಕೆ ಬೆರೆತು ಕೆಲಸ ಮಾಡಬಾರದು?, ನಿತ್ಯ ಜೀವನಕ್ರಮದಲ್ಲಿ ಸ್ತ್ರೀಯರಿಗೂ ಪುರುಷರಿಗೂ ಭೇದವೇ ಇಲ್ಲ ಎನ್ನುವಾಗ ನಾವು ಅನಾಗರಿಕ ಬರ್ಬರರಾಗಿಯೇ ಇರಬೇಕೆ? ಎಂದು ಅನಾಮಧೇಯವಾಗಿ ಬರೆದಿರುವ ಲೇಖಕಿ ಪ್ರಶ್ನಿಸುತ್ತಾರೆ.[೨೪] ಇದರ ಮುಂದುವರಿದ ಭಾಗವು (೧೫ ಎಪ್ರಿಲ್ ೧೯೩೭ರ 'ಸ್ವದೇಶಾಭಿಮಾನಿ') ಎಂಬ ಪತ್ರಿಕೆಯಲ್ಲಿ

ಪ್ರಕಟಗೊಂಡು ಸಮಾಜ ಸುಧಾರಣೆಗಳು ಹಲವು ವಿಧದಲ್ಲಿ ಆಗಬೇಕು; ವಿದ್ಯಾಭ್ಯಾಸ ಪ್ರಚಾರವಾಗಬೇಕು; ಸಾಮಾಜಿಕ ಚಳವಳಿಗಳು ಅಭಿವೃದ್ಧಿಗೊಳ್ಳಬೇಕು; ಸಮಸ್ತ ತರದ ಕಲೆಗಳ ವಿಜ್ಞಾನವು ಮೂಡಬೇಕು ಎಂಬ ವಿಷಯಗಳ ಕುರಿತು ಚರ್ಚಿಸುತ್ತದೆ.

'ಭಾರತದ ಮಹಿಳೆಯ ಆದರ್ಶ'ದ ಕುರಿತಾದ ಲೇಖನದಲ್ಲಿ ಸೇವಾಮನೋಭಾವ ಭಾರತೀಯ ಮಹಿಳೆಗೆ ರಕ್ತಗತವಾದುದು ಹಾಗೂ ಅವಳನ್ನು ನಾಚಿಸುವ ಸಂಕೋಚ ಪಡಿಸುವ, ಕೃತಕ ತಡೆಗಳಾವುದೂ ಇಲ್ಲದ ಕ್ಷೇತ್ರದಲ್ಲಿ ಭಾರತ ನಾರಿಯಿಂದಾಗುವಂತಹ ಸೇವೆಯನ್ನು ಬೇರೆಯವರು ಸಲ್ಲಿಸಲು ಸಾಧ್ಯವಿಲ್ಲ. ಐರೋಪ್ಯ ಮಹಿಳೆಯರ ಸೇವೆಯಲ್ಲಿ ಪುರುಷಯೋಗ್ಯವಾದ ಜಂಭ, ಕೀರ್ತಿಲಾಲಸೆ, ಪ್ರಕಾಶಕ್ಕೆ ಬರುವ ಆತುರ ಇವೆಲ್ಲವನ್ನೂ ಕಾಣಬಹುದು. ಆದರೆ ಹಿಂದೀ ಮಹಿಳೆಯ ಸೇವೆ ಭಿನ್ನವಾದುದು. ಅದಕ್ಕೊಂದು ಪೋಷಾಕಿಲ್ಲ; ಅದು ಬರಿಯ ತಿರುಳು ಮಾತ್ರ, ಸ್ವಭಾವ ಜನ್ಯವಾದ ಈ ಸೇವೆಯ ಲಾಭ ಹೊಂದಿಸಲಿಚ್ಛಿಸುವವರು ಕಾರ್ಯ ಕ್ಷೇತ್ರವನ್ನು ಅಷ್ಟೇ ಸ್ವಾಭಾವಿಕವಾಗಿ ಇಡಬೇಕಾಗುತ್ತದೆ. ಕೃತಕ ವಿಜೃಂಭಣೆಗಳಿಗೆ ಭಾರತದ ಮಹಿಳೆಯರು ಬೆದರುತ್ತಾರೆ. ಪಾಶ್ಚಿಮಾತ್ಯರಂತೆ ಭಾರತೀಯ ಮಹಿಳೆಯರು ನಿರಂಕುಶ ಪ್ರವರ್ತಕರಲ್ಲ. ಭಾರತೀಯರ ಸಾಮಾಜಿಕ ರೀತಿ ನೀತಿಗಳು ಅವರ ಸ್ವಭಾವವನ್ನು ತೀರಾ ಮೃದುಗೊಳಿಸಿದೆ. ಆದರೆ ಭಾರತೀಯ ಮಹಿಳೆಯರು ಧೈರ್ಯವಂತರು ಮತ್ತು ಸಾಹಸಮಯಿಗಳು ಎಂಬುವುದಕ್ಕೆ ಪದ್ಮಿನಿ, ಅಹಲ್ಯಾಬಾಯಿ ಹೋಲ್ಕರ್ ಮೊದಲಾದವರನ್ನು ಉದಾಹರಿಸುತ್ತಾರೆ'.[೨೫]

ಜನವರಿ ೨೫, ೧೯೩೯ರಲ್ಲಿ ಅಖಿಲ ತುಳುನಾಡಿನ ಸ್ತ್ರೀ ಸಮ್ಮೇಳನದಲ್ಲಿ ಬಾರಕೂರಿನಲ್ಲಿ ನಡೆಯಿತು. ಬಾರಕೂರಿನಿಂದ ಮಂಗಳೂರಿನವರೆಗಿನ ಎಲ್ಲ ಪ್ರಖ್ಯಾತ ಮಹಿಳೆಯರು ಚಿತ್ತೈಸಿ ಅನೇಕ ವಿಚಾರಗಳನ್ನು ಮಂಡಿಸಿದ ಭಾಷಣದ ವರದಿಯನ್ನು ಉಡುಪಿಯ ಬಿ.ಶಾಮ್ರಾಯ ಶೆಟ್ರು 'ನವಯುಗ' ಪತ್ರಿಕೆಯಲ್ಲಿ ಪ್ರಕಟಿಸಿರುವರು. ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನು ವಹಿಸಿದ್ದ ಶ್ರೀಮತಿ ಗೌರಮ್ಮನವರು ತುಳುನಾಡಿನ ಮಹಿಳೆಯರ ಏಳಿಗೆಗಾಗಿ ದುಡಿಯುವವರಾಗಿದ್ದು ತಮ್ಮ ಭಾಷಣದಲ್ಲಿ ಲಿಂಗ ತಾರತಮ್ಯ ಸಲ್ಲದು ಮತ್ತು ಅದನ್ನು ಪ್ರೋತ್ಸಾಹಿಸಬಾರದು ಎಂದು ಹೇಳಿದರು. ಮುಂದುವರಿದು, ಇನ್ನು ಮುಂದೆ ಹೆಣ್ಣು ಮಗು ಹುಟ್ಟಿತೆಂದು ಕೇಳಿದರೆ ಮತ್ತು ಕಂಡರೆ ಆತ್ಮಾನಂದ ಹೊಂದತಕ್ಕದ್ದು ಮಾತ್ರವಲ್ಲದೆ, ಹೆಣ್ಣ ಕಡೆಯವರು ಎಂದು ಗಂಡು ಕಡೆಯವರು ಕೀಳುಗೈದರೆ ಸ್ತ್ರೀ ಸಮಾಜವು ಪ್ರೊಟೆಸ್ಟ್ ಮಾಡಬೇಕು ಎಂದಿರುವರು. ಮಿಸ್ ಬಿಯವರು ಈ ಸೂಚನೆಯನ್ನು ಅನುಮೋದಿಸಿ ಭಾಷಣ ಮಾಡಿದ ನಂತರ ಸರ್ವಸಮ್ಮತವಾಗಿ ಅಂಗೀಕೃತವಾಯಿತು. ನಂತರ ಮಾತನಾಡಿದ ನಾಗಮ್ಮನವರು ನಮ್ಮನ್ನು ನಾವೇ ತುಚ್ಛೀಕರಣ ಮಾಡಿಕೊಂಡದ್ದರಿಂದ ನಮ್ಮ ಬೆಲೆಯೇ ನಮಗೆ ತಿಳಿಯದಾಗಿದೆ. ಒಂದು ಪ್ರೊಟೆಸ್ಟ್ ಕಮಿಟಿಯನ್ನು ಸ್ಥಾಪಿಸಿ ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯವನ್ನು ಪ್ರತಿಭಟಿಸಬೇಕು ಎಂದರು. ದುರ್ಗಮ್ಮನವರು ಮಾತನಾಡಿ, ವರದಕ್ಷಿಣೆಯೆಂಬ ಪಿಡುಗನ್ನು

ತೊಲಗಿಸಬೇಕೆನ್ನುವ ಬೇಡಿಕೆಯನ್ನಿತ್ತರು. ಮೇಲಿನ ಲೇಖನದಲ್ಲಿ ಮಹಿಳೆಯರನ್ನು ಅವರ ಹೆಸರುಗಳ ಬದಲು ಮಿಸ್ ಎ, ಮಿಸ್ ಬಿ, ಮಿಸ್ ಡಿ ಎಂಬುವುದಾಗಿ ಉಲ್ಲೇಖಿಸಲಾಗಿದೆ.[೨೬] 'ನವಯುಗ' ಪತ್ರಿಕೆಯ ಮಹಿಳಾ ಲೋಕದಲ್ಲಿ ಹರಿಹರದ ಉರ್ದೂ ಸ್ಕೂಲಿನ ಸುಬ್ರಮಣ್ಯಂರವರು 'ಹಿಂದೂ ಮಹಿಳೆಯರ ಭಯಂಕರ ಸ್ಥಿತಿ' ಎಂಬ ಲೇಖನದಲ್ಲಿ ಪುರುಷರು ಮರಣಪರ್ಯಂತ ಎಷ್ಟು ಸಾರಿಯೂ ಮದುವೆ ಮಾಡಿಕೊಳ್ಳಬಹುದು. ಅದಕ್ಕೆ ಶಾಸ್ತ್ರ ಸಮ್ಮತಿ ಇದೆ. ಆದರೆ ಸ್ತ್ರೀಯರು ಬಾಲವಿಧವೆಯರಾದರೂ ಕೊನೆಗೆ ಬ್ರಹ್ಮಚಾರಿಣಿಯಾಗಿರಬೇಕು. ಇದು ಪರಮಾವಧಿಯಲ್ಲವೇ? ಎಂಬುವುದಾಗಿ ಪ್ರಶ್ನಿಸಿದ್ದಾರೆ.[೨೭] ತಮ್ಮ ಮನೆಯ ವಿಧವೆಯರ ಸಮಸ್ಯೆಯನ್ನು ತಾವೇ ಪರಿಹರಿಸಬೇಕೆಂದು ಪುರುಷ ವರ್ಗವನ್ನು ಎಚ್ಚರಿಸುತ್ತಾರೆ. ಬಾಲವಿಧವೆಯರು ಬ್ರಹ್ಮಚಾರಿಣಿಯಾಗಿರಬೇಕೆಂದು ವಾದಿಸುವವರು ವೃದ್ಧಾಪ್ಯದಲ್ಲಿ ಸಹ ವಿವಾಹ ಮಾಡಿಕೊಳ್ಳುತ್ತಲೇ ಇರುವುದು ಎಷ್ಟು ನ್ಯಾಯ? ಪುನರ್ವಿವಾಹವಾಗ ಬಯಸುವ ಗಂಡಸರು ಅಪ್ರಾಪ್ತ ವಯಸ್ಸಿನ ಬಾಲಕಿಯರೊಡನೆ ಆಗ ಕೂಡದೆಂದು ಸುಬ್ರಮಣ್ಯಂರವರು ಪುರೋಹಿತಶಾಹಿ ವರ್ಗವನ್ನೇ ಮೂದಲಿಸುತ್ತಾರೆ. ಲೇಖಕರ ದೃಷ್ಟಿಕೋನವು ಇತರ ಪುರುಷರ ಉದ್ಧಾರಕ ಪಿತೃಪ್ರಧಾನ ಮನೋದೃಷ್ಟಿಗಿಂತ ಭಿನ್ನವಾಗಿದೆ. ಸಾಂಪ್ರದಾಯಿಕ ಪುರುಷ ಚಿಂತನೆಗಿಂತ ಭಿನ್ನವಾಗಿ ಆಧುನೀಕರಣದ ಚಿಂತನೆಗಳು ಪ್ರಗತಿಪರ ಚಿಂತಕರಲ್ಲಿ ಕಂಡು ಬರುತ್ತದೆ.

ರಬೀಂದ್ರನಾಥ ಟಾಗೂರರ ಅಭಿಪ್ರಾಯದಂತೆ 'ಹಿಂದೂ ಸಮಾಜದಲ್ಲಿ ಹುಡುಗಿಗೆ ಬಾಲ್ಯದಿಂದಲೇ, ಪತಿಯ ವಿಚಾರವಾಗಿ ಪೂಜ್ಯ ಭಾವನೆಗಳನ್ನು ಉಪದೇಶಿಸುವರು. ಉದಾಹರಣೆಗೆ-ಕತೆಗಳು ಹಾಡುಗಳು, ಹಬ್ಬ ಹರಿದಿನಗಳು, ಪ್ರಾರ್ಥನೆಗಳು, ಮುಂತಾಗಿ ಎಲ್ಲೆಡೆಯಲ್ಲಿಯೂ, ಎಲ್ಲಕಾಲದಲ್ಲಿಯೂ ಇರುವುದು ಕಂಡು ಬರುತ್ತದೆ. ಆದುದರಿಂದ ಹುಡುಗಿಗೆ ವಿವಾಹವಾದ ಮೇಲೆ, ಆಕೆಯ ಪತಿಯು ಆಕೆಯ ದೃಷ್ಟಿಕೋನದಲ್ಲಿ ಎಲ್ಲರಂತೆ ಒಬ್ಬ ಮನುಷ್ಯನಾಗಿರುವುದಿಲ್ಲ. ಮಾತೃಭೂಮಿಯ ಪ್ರೇಮದಂತೆ ಒಂದು ಗೊತ್ತಾದ ಸಿದ್ಧಾಂತ ಅಥವಾ ಸಂಸ್ಥೆಯಾಗಿ ಬಿಡುವನು'.[೨೮] ೧೯೩೮ರ 'ನವಯುಗ' ಪತ್ರಿಕೆಯಲ್ಲಿ ಇಂಗ್ಲಿಷ್ ಲೇಖನವೊಂದರ ಆಧಾರದಿಂದ 'ಗೃಹಿಣಿಯರ ಗೃಹ ರಕ್ಷಣೆಯ ಮಹತ್ವ' ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟವಾದ ಲೇಖನದಲ್ಲಿ 'ಜನಾಂಗದ ಏಳಿಗೆಯು ಸ್ತ್ರೀಯನ್ನು ಹೊಂದಿಕೊಂಡಿರುವುದು. ಬಾಲಕರನ್ನು ಸುಶಿಕ್ಷಿತರನ್ನಾಗಿ ಮಾಡುವ, ಪುರುಷರನ್ನು ಸುಧಾರಣೆಯ ಹಾದಿಯಲ್ಲಿ ನಡೆಸುವ ಪವಿತ್ರ ಕಾರ್ಯವು ಸ್ತ್ರೀಯರದ್ದಾಗಿದೆ' ಎಂಬ ಹೇಳಿಕೆಯು ಬಾಲಕಿಯರ ಪೋಷಣೆಯ ಕುರಿತು ಗಮನಹರಿಸದೆ ಕಡೆಗಣಿಸಿರುವುದು ಕಂಡುಬರುತ್ತದೆ. ವಂಶದ ರಕ್ಷಣೆ, ಜನಾಂಗದ ಪಾವನತೆ, ದೇಶದ ಅಭ್ಯುದಯವು ಮಾತೃತ್ವದ ಅಧೀನವಿರುವುದು ಹಾಗೂ ಕೊನೆಯಲ್ಲಿ ಪ್ರಸಿದ್ಧ ಆಂಗ್ಲೇಯ ಕವಿಯಾದ ಶೇಕ್ಸ್ ಪಿಯರ್ ಇವನ ಉಲ್ಲೇಖವಿದೆ.

ಸ್ತ್ರೀಯರನ್ನು ವಿಶ್ವಾಸಪೂರಿತ, ಭ್ರಮೆಗೊಳಪಡದ, ಬಹುತಿಳುವಿನ ದೋಷರಹಿತ ನ್ಯಾಯಮಾರ್ಗದ ಉಚ್ಛ, ಶುದ್ಧ ಆದರ್ಶವನ್ನೀಯುವ ಪವಿತ್ರತೆಯ ದಾರಿಗೆ ಮುನ್ನಡೆಸುವ ಜೀವನದ ಹಿತೈಷಿಗಳೆಂದು ಕೊಂಡಾಡಿ

ಹೆಣ್ಣಿಗೆ ಜಗತ್ತಿನ ಯಾವುದೋ ಅತ್ಯುನ್ನತ ಪದವಿ ದೊರಕಿಸಿಕೊಟ್ಟಂತೆ, ಇಲ್ಲಸಲ್ಲದ ಆತ್ಮತ್ಯಾಗ ಗುಣಗಳಿಂದ ಪ್ರತಿಬಂಧಿಸುತ್ತಾ ಅವಳು ಪುರುಷನನ್ನು ಅನುಸರಿಸದಂತೆ ಅವಳ ಪರಿಧಿಯನ್ನು ಮಾತೃತ್ವದ ಪರಿಮಿತಿಯೊಳಗೆ ಕೇಂದ್ರೀಕರಿಸಿ ಬಿಟ್ಟಿದ್ದಾರೆ. ಸ್ತ್ರೀ ಗುಣಗಳ ಪಟ್ಟಿಮಾಡುತ್ತಾ ಸ್ವಾತಂತ್ರ್ಯ, ಅಧಿಕಾರ, ಸ್ವಚ್ಛಂದತೆ ಪುರುಷತ್ವದ ಸತ್ವವಾದರೆ, ಸೌಂದರ್ಯ, ತಾಳ್ಮೆ ಮುಂತಾದ ಮೇಲಿನ ಗುಣಗಳೇ ಸ್ತ್ರೀತ್ವದ ಸಾರವೆಂದು ಪುರುಷ ಪ್ರಧಾನ ಸಮಾಜ ನಿರ್ಮಿಸಿದ ಮಿತಿಯ ಚೌಕಟ್ಟನ್ನೇ ಅವಳ ಮೇಲೆ ಹೇರುವ ಹವಣಿಕೆ ಇದೆ. ಈ ಮಧುರ ಗುಣಗಳೇ ಹೆಣ್ಣಿಗೆ ಮುಖ್ಯವಾದ ಆದರ್ಶವೆಂದಾಗ ಅದು ಅವಳ ವಿದ್ಯೆ, ಶಕ್ತಿ ಸ್ವಾತಂತ್ರ್ಯ ಮುಂತಾದ ಇತರ ಗುಣಗಳನ್ನು ಸಂಪೂರ್ಣವಾಗಿ ಕಡೆಗಣಿಸಿ, ಸ್ತ್ರೀ- ವಿರೋಧಿ ನಿಲುವನ್ನು ಪ್ರತಿಪಾದಿಸುತ್ತದೆ. ಹೆಣ್ಣಿನ ಸೌಂದರ್ಯಕ್ಕೆ ಅತಿಯಾದ ಮೌಲ್ಯ ಕಟ್ಟುವುದೂ ಕೂಡಾ ಮೋಸದಾಟವಾಗಿರುವಂತೆ ತೋರುತ್ತದೆ.[೨೯]

ಎಸ್. ಎಲ್. ಸುಬ್ರಮಣ್ಯರವರು 'ಪರಮ ವೈರಿ ವರದಕ್ಷಿಣೆ' ಎಂಬ ಲೇಖನದಲ್ಲಿ ಹಿಂದೂ ಸಮಾಜದ ದುಷ್ಟ ಪದ್ಧತಿಗಳಲ್ಲಿ ವರದಕ್ಷಿಣೆಯು ಬಹಳ ಭಯಂಕರವೂ ಅನಿಷ್ಟಕರವೂ ಆಗಿದ್ದು ಸಮಾಜವನ್ನು ಸಮೂಲವಾಗಿ ತಿನ್ನುತ್ತಿದೆ. ಈ ಕೆಟ್ಟ ಪದ್ಧತಿಯಿಂದ ಅನೇಕ ಸಹೋದರಿಯರು ಕೌಮಾರ ಜೀವನದಲ್ಲೇ ಇರುವರು ಹಾಗೂ ಕೆಲವರ ವಿವಾಹವು ವೃದ್ಧರೊಡನೆ ಆಗಿ ನಂತರ ಶಾಶ್ವತ ವೈಧವ್ಯವನ್ನು ಅನುಭವಿಸಬೇಕಾಗಿ ಬರುವುದು. ಇದಕ್ಕೆ ಪರಿಹಾರ ಲಭಿಸುವುದೇ? ಎಂದು ಪ್ರಶ್ನಿಸುತ್ತಾರೆ.[೩೦]

'ವರದಕ್ಷಿಣೆ ಪದ್ಧತಿಯು ನಿರ್ನಾಮವಾಗುವುದೆಂದು?' ಎಂಬ ಲೇಖನವು ಸಮಾಜವನ್ನು ಈ ಅನಿಷ್ಟ ಪಿಡುಗಿನ ವಿರುದ್ಧ ಎಚ್ಚರಿಸುವಂತಿದೆ.[೩೧] ಹಿಂದೂ ಸಮಾಜದ ಅನಿಷ್ಟ ಪದ್ಧತಿಗಳಲ್ಲೊಂದಾದ ವರದಕ್ಷಿಣೆಯು ಸಮಾಜವನ್ನು ಸಮೂಲವಾಗಿ ತಿನ್ನುತ್ತಿದೆ. ಇದರಿಂದಾಗಿ ಆಗುತ್ತಿರುವ ಹಾನಿಯನ್ನು ಕೇಳಿ ರೋಮಾಂಚನವಾಗುವುದು. ಇಂತಹ ಹೃದಯ ವಿದ್ರಾವಕವಾದ ಘಟನೆಗಳ ಅರಿವಿನಿಂದಾದರೂ ನವಯುವಕರು ಸುಮ್ಮನಿರುವುದು ಸಮಾಜದ ಮತ್ತು ದೇಶದ ದೌರ್ಭಾಗ್ಯವಲ್ಲವೇ? ಎಂದು ಪ್ರಶ್ನಿಸಿದ್ದಾರೆ. 'ಸ್ತ್ರೀಯರಿಗೆ ಯಾವ ರೀತಿಯ ಶಿಕ್ಷಣವನ್ನು ಕೊಡಬೇಕು?' ಎಂಬ ಕೆ.ಎಸ್. ಸೀತಾರಾಮಯ್ಯರವರ ಲೇಖನದಲ್ಲಿ 'ಇತ್ತೀಚೆಗೆ ಉಚ್ಛ ಶಿಕ್ಷಣವನ್ನು ಪಡೆದ ಮಹಿಳೆಯರೂ ಧರ್ಮಶಿಕ್ಷಣದ ಕಡೆಗೆ ಹೆಚ್ಚು ಲಕ್ಷ್ಯವಿಡುತ್ತಿಲ್ಲ. ಧರ್ಮ ಶಿಕ್ಷಣವು ಮಹಿಳೆಯರಿಗೆ ಅನಿವಾರ್ಯವಾದದ್ದು. ಪಾಶ್ಚಾತ್ಯ ಶಿಕ್ಷಣದ ಪ್ರಭಾವದಿಂದ ನಮ್ಮವರ ಹೃದಯದಲ್ಲಿ ಧರ್ಮಕ್ಕೆ ಸ್ಥಾನವಿಲ್ಲದಂತಾಗಿದೆ ಎಂದಿದ್ದಾರೆ.'[೩೨] ಮಹಿಳಾ ಶಿಕ್ಷಣದ ಕುರಿತಂತೆ ಪುರುಷಪರ ಸಮಾಜ ಹೊಂದಿದ್ದ ಧೋರಣೆಯನ್ನು ಈ ಲೇಖನವು ಪ್ರಸ್ತುರ ಪಡಿಸುತ್ತದೆ. ದಶಂಬರ ೨೨, ೧೯೪೦ರಂದು ನಡೆದ ದಕ್ಷಿಣ ಕನ್ನಡ ಜಿಲ್ಲಾ ಮಹಿಳಾ ಪರಿಷತ್ತಿನಲ್ಲಿ ಸ್ವಾಗತಾಧ್ಯಕ್ಷೆಯಾದ ಲೀಲಾಬಾಯಿ ಕಾಮತ್ ರವರು ನೀಡಿದ ಭಾಷಣದ ವರದಿ 'ನವಯುಗ' ಪತ್ರಿಕೆಯಲ್ಲಿ ಪ್ರಕಟಗೊಂಡಿತ್ತು. ಮಹಿಳಾ ಸಂಬಂಧಿ ಸಮಸ್ಯೆಗಳನ್ನು ಕುರಿತು ಉಪನ್ಯಾಸ ನೀಡಿದ ಇವರು 'ಇಂದು ಮದುವೆಯೆಂದರೆ ಒಂದು ತರಹದ

ವ್ಯಾಪಾರವಾಗಿದೆ. ಹೆಚ್ಚು ಗಂಡು ಮಕ್ಕಳಿದ್ದವನು ಹೆಚ್ಚಿನ ಲಾಭ ಪಡೆಯುವ ವ್ಯಾಪಾರಿಯಾಗಿದ್ದಾನೆ. ಮದುವೆಯಾಗದ ಸ್ತ್ರೀಯರ ಆತ್ಮಹತ್ಯೆಯ ವಾರ್ತೆಗಳನ್ನು ದಿನಂಪ್ರತಿ ಕೇಳುತ್ತಿದ್ದೇವೆ. ಈ ಪದ್ಧತಿಯನ್ನು ನಾಶಮಾಡದ ವಿನಹ ಸ್ತ್ರೀಯರ ಪ್ರಗತಿ ಅಸಾಧ್ಯ ಮತ್ತು ಇಂದಿನ ವಿಧವಾ ಪದ್ಧತಿಯು ಆತ್ಮಹತ್ಯೆ ಅಥವಾ ವ್ಯಭಿಚಾರಕ್ಕೆ ಪ್ರೋತ್ಸಾಹ ಕೊಡುವಂತಿದೆ. ಇಂದು 'ತೊಟ್ಟಿಲು ತೂಗುವ ಕೈ ರಾಜ್ಯವಾಳಬಲ್ಲದು' ಎಂಬ ಗಾದೆಯ ತೇಜ ಪ್ರತಿಬಿಂಬದಂತೆ ಪ್ರಾಚೀನ ಹಾಗೂ ಆಧುನಿಕ ವೀರ ಮಹಿಳೆಯರ ನಿದರ್ಶನಗಳನ್ನು ನೀಡಿರುವರು. ಉಡುಪಿ, ಮಂಗಳೂರು, ಕಾರ್ಕಳ ಹಾಗೂ ಜಿಲ್ಲೆಯ ಇನ್ನಿತರ ಕಡೆಗಳಿಂದ ಸುಶಿಕ್ಷಿತ ಮಹಿಳೆಯರು ಸಾಕಷ್ಟು ಸಂಖ್ಯೆಯಲ್ಲಿ ನೆರೆದಿದ್ದರು. ಪರಿಷತ್ ಅಧ್ಯಕ್ಷೆ ಶ್ರೀಮತಿ ಸೋನ್ಸ್ ರವರು ಮಾತನಾಡಿ 'ಹೆಂಗಸಿನ ಪೂರ್ತಿ ಬೆಂಬಲವಿದ್ದರೇನೇ ಪುರುಷನ ಕಾರ್ಯ ಫಲಿಸಬಲ್ಲುದೆಂದೂ, ಇಂತಹ ಜವಾಬ್ದಾರಿ ಮತ್ತು ಸಮಾನತೆ ಪಡೆದಿರುವ ಮಹಿಳೆಯರಿಗೆ ಯೋಗ್ಯ ಶಿಕ್ಷಣ ದೊರೆಯಬೇಕೆಂದೂ ವಾದಿಸಿದರು'[೩೩]

೧೯೪೦ರ ಫೆಬ್ರವರಿ ೫ ರಂದು 'ಸ್ತ್ರೀ ವಿದ್ಯಾಭ್ಯಾಸ ಮತ್ತು ಗೃಹಿಣಿ ಧರ್ಮ' ಇದರ ಕುರಿತಂತೆ ಬೆಂಗಳೂರಿನ ಮಹಾರಾಣಿ ಕಾಲೇಜಿನ ಘಟಿಕೋತ್ಸವದಲ್ಲಿ ಸರ್. ಮಿರ್ಜಾ ಇಸ್ಮಾಯಿಲ್ ರವರು ಮಾಡಿದ ಭಾಷಣದ ವರದಿ 'ನವಯುಗ' ಪತ್ರಿಕೆಯಲ್ಲಿ ಪ್ರಕಟಗೊಂಡಿತ್ತು. ಅವರ ಅಭಿಪ್ರಾಯದಂತೆ 'ಇಂದು ಸ್ತ್ರೀ ಪುರುಷರ ಜೀವನಕ್ರಮಗಳಿಗಿರುವ ಭೇದವು ಐವತ್ತು ವರ್ಷಗಳು ಹಿಂದಿರುವುದಕ್ಕಿಂತಲೂ ಕಡಿಮೆಯಾಗಿದೆ. ಈಗ ಸ್ತ್ರೀಯರ ಜೀವನ ವಿಧಾನದಲ್ಲಿ ಗೃಹಿಣಿಧರ್ಮಗಳೂ ಸೇರಿರುತ್ತದೆ. ಗೃಹಕೃತ್ಯದ ಕೆಲಸಗಳು ಮಾತ್ರವಲ್ಲದೆ ಕುಟುಂಬಕ್ಕೆ ಸಂಬಂಧಪಡದ ಕೆಲಸಗಳೂ ಸೇರಿರುತ್ತದೆ. ಸತ್ಪ್ರಜೆಗಳ ಕರ್ತವ್ಯಗಳನ್ನು ನಿರ್ವಹಿಸುವ ಪ್ರಜಾಧರ್ಮವೂ ಮಹಿಳೆಯರ ಜೀವನ ವಿಧಾನದಲ್ಲಿ ಸೇರಿರುತ್ತದೆ, ತಾನು ಹೇಳಿರುವುದನ್ನು ಯಾರೂ ತಪ್ಪು ತಿಳಿದುಕೊಳ್ಳುವುದಿಲ್ಲವೆಂದು ಹೇಳಿ ಮುಂದುವರಿಸಿ, ಗೃಹಿಣಿಧರ್ಮವನ್ನು ಸರಿಯಾಗಿಯೂ ಜಾಗರೂಕತೆಯಿಂದಲೂ ನಡೆಸಿಕೊಂಡು ಬಂದಲ್ಲಿ ಮಾತ್ರವೇ ಜನಜೀವನವು ಸರ್ವ ವಿಧಗಳಲ್ಲಿಯೂ ಸೊಂಪುಗೂಡಿ ಬೆಳಗಲು ಸಾಧ್ಯ ಹಾಗೂ ಕೇವಲ ಗೃಹ ಕಾರ್ಯ ಮಾತ್ರವಲ್ಲದೆ ಸಮಾಜಸೇವೆಯಲ್ಲೂ ಆಸಕ್ತಿ ವಹಿಸಲು ಸಾಧ್ಯ' ಎಂದಿರುವರು.[೩೪]

### ೫.೩ ವಸಾಹತು ಕಾಲಘಟ್ಟದ ಮಹಿಳಾ ಬರಹಗಾರ್ತಿಯರು

ವಸಾಹತುಶಾಹಿ ಕಾಲಘಟ್ಟದ ಸಮಾಜದ ಸ್ವರೂಪವನ್ನು ಅರಿಯಬೇಕಾದರೆ ಆ ಕಾಲದಲ್ಲಿ ಹೊರಬಂದ ಸಾಹಿತ್ಯ ಕೃತಿಗಳನ್ನು ಅವಲಂಬಿಸಬೇಕಾದ್ದು ಅನಿವಾರ್ಯ. ಮಹಿಳೆಯರಿಂದ ರಚಿತವಾದ ಉನ್ನತ ಸಾಹಿತ್ಯ ಕೃತಿಯೂ ತನ್ನ ಕಾಲದ ಸಾಮಾಜಿಕ ಸ್ಪಂದನೆಗಳನ್ನು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಅಭಿವ್ಯಕ್ತಗೊಳಿಸುತ್ತದೆ. ಸಮಾಜದಲ್ಲಿ ಅಂತಸ್ಥವಾದ ರೂಢಿ-ಸಂಪ್ರದಾಯ, ರೀತಿ-ನೀತಿ, ಆಚಾರ- ವಿಚಾರ ಇವುಗಳ ಬಗೆಗೆ ಪ್ರತಿಯೊಂದು ಸಾಹಿತ್ಯ ಕೃತಿಯೂ ಅವಶ್ಯವಾಗಿ ಪ್ರಸ್ತಾಪಿಸುತ್ತದೆ. ಕನ್ನಡ ಕಾದಂಬರಿಯು

೧೯ನೆಯ ಶತಮಾನದ ಭಾರತೀಯ ಇಂಗ್ಲಿಷ್ ವಿದ್ಯಾವಂತವರ್ಗದ ಮತೀಯ ಕಾಳಜಿಯನ್ನು ಪ್ರತಿನಿಧಿಸುತ್ತದೆ. ವಿಧವಾ ಸಮಸ್ಯೆ, ಸ್ತ್ರೀ ಶಿಕ್ಷಣ ಇವೇ ಮೊದಲಾದ ಮೊದಲ ಕಾದಂಬರಿಗಳ ವಸ್ತುಗಳನ್ನು ಗಮನಿಸಿದರೂ ಮೇಲಿನ ಅಂಶವು ಸ್ಪಷ್ಟವಾಗುತ್ತದೆ.[೩೫]

ಕಾದಂಬರಿಯ ಪ್ರಧಾನ ಲಕ್ಷಣವಾಗಿರುವ ವಾಸ್ತವಿಕತೆಯು ವಾಸ್ತವದ ಬೇಜಾರುಪಡಿಸುವ ವಿವರಗಳ ದಾಖಲೆ ಮಾತ್ರವಾಗದೇ ವಾಸ್ತವವನ್ನು ಕುರಿತ ವಿಮರ್ಶೆಯನ್ನು ಒಳಗೊಂಡ ಒಂದು ಧೋರಣೆಯಾಗಿರುವುದು ಈ ಮಾತಿಗೆ ಪೂರಕವಾಗಿರುವ ಅಂಶ. ಅಂದರೆ ವಾಸ್ತವವಾದಿ ಕಾದಂಬರಿಯು ವಾಸ್ತವದಲ್ಲಿ ಜನ ಬದುಕುವ ರೀತಿಯನ್ನು ವಿವರಿಸುತ್ತದೆ. ತಾನು ಬಂದಿರುವ ವರ್ಗವು ಬದುಕನ್ನು ಕುರಿತು ತಳೆದ ಧೋರಣೆಯನ್ನು ಪ್ರಕಟಿಸುವ ಸಾಮಾಜಿಕ ಗುಂಪು ಇವೆರಡನ್ನೂ ಕುರಿತ ಚಾರಿತ್ರಿಕ ತಿಳುವಳಿಕೆಯನ್ನೂ ಕಾದಂಬರಿಯು ಮೂಡಿಸುತ್ತದೆ. ಆದುದರಿಂದ ಕಾದಂಬರಿಯ ರೂಪವೆನ್ನುವುದು ಕೃತಿಯ ವಸ್ತು, ಅದರ ತತ್ವ ಮತ್ತು ಜೀವನದರ್ಶನದಿಂದ ಸಿದ್ಧಿಸುತ್ತದೆ. ಕಾದಂಬರಿಯಲ್ಲಿ ಕಂಡುಬರುವ ಆದರ್ಶ ಮತ್ತು ವಾಸ್ತವಗಳ ಸಂಘರ್ಷದಲ್ಲಿ ಈ ಅಂಶಗಳು ವ್ಯಕ್ತವಾಗುತ್ತದೆ. ಆಧುನಿಕ ಕನ್ನಡ ಸಾಹಿತ್ಯದ ಯುಗಾರಂಭದಲ್ಲಿ ಪುರುಷ ಸಾಹಿತಿಗಳು ಬರಹವನ್ನಾರಂಭಿಸಿದ ಕೆಲವು ವರ್ಷಗಳಲ್ಲಿ ಸ್ತ್ರೀ ವಿದ್ಯಾಭಾಸಕ್ಕೆ ಏನೇನೂ ಪ್ರೋತ್ಸಾಹವಿಲ್ಲದ ಕಾಲಘಟ್ಟದಲ್ಲಿ ಮಹಿಳೆಯರೂ ಕೂಡಾ ಬರಹವನ್ನಾರಂಭಿಸಿದ್ದು ಒಂದು ವಿಶೇಷತೆಯಾಗಿತ್ತು. ಸ್ತ್ರೀಯರ ತ್ಯಾಗ, ಸಹನೆ, ಪಾತಿವ್ರತ್ಯವನ್ನು ವೈಭವೀಕರಿಸಿ ರಚಿಸಲ್ಪಟ್ಟ ಸಾಹಿತ್ಯ ಸಮಾಜದ ಗಮನ ಸೆಳೆಯುತ್ತಿತ್ತು. ಮಹಿಳೆಯರ ಕೈಗೆ ಲೇಖನಿ ಬಂದ ಪ್ರಾರಂಭದಲ್ಲಿ ಲೇಖಕಿಯರ ಚಿಂತನೆಗಳು ಪತಿಯ ದೈವತ್ವ ಮತ್ತು ಸತೀಧರ್ಮಗಳ ದಿಕ್ಕಿನಲ್ಲೇ ಹರಿದಿದ್ದನ್ನು ಕಾಣಬಹುದು. ಆದರೆ ಪಾತಿವ್ರತ್ಯ, ಸತೀಧರ್ಮಗಳ ಮೆರುಗು ಮಂಕಾಗಬಹುದೆಂದೋ ಏನೋ ಅಂದಿನ ಹೆಸರಾಂತ ಪುರುಷ ಲೇಖಕರು ಈ ಲೇಖಕಿಯರನ್ನು ಸಾಹಿತ್ಯ ಕ್ಷೇತ್ರಕ್ಕೆ ಸಮನಾಗಿ ಸ್ವಾಗತಿಸಲಿಲ್ಲ.[೩೬]

ಆದರೂ ಮಹಿಳೆಯರು ಮಾತ್ರ ಹೊರ ಪ್ರಪಂಚದ ಮಹತ್ವದ ವಿಷಯಗಳನ್ನು ಹಾಗೂ ಜಗತ್ತಿನ ಬದಲಾವಣೆಗಳನ್ನು ಮನೆಯ ಹೊಸ್ತಿಲೊಳಗಿನಿಂದಲೇ ಗಮನಿಸಿದ್ದಾರೆ. ಮಹಿಳಾ ಬರಹಗಾರ್ತಿಯರಿಗೆ ಪ್ರಧಾನವಾಹಿನಿಯ ಜೊತೆಗೆ ಅನುಸಂಧಾನ ನಡೆಸುವುದು ಸಾಧ್ಯವಾಗಿಲ್ಲ ಎನ್ನುವುದು ನಿಜವಾದ ಮಾತಾಗಿದೆ. ಕೈ ಬೆರಳಿನ ಎಣಿಕೆಗೂ ಪೂರ್ತಿಯಾಗಿ ದೊರೆಯದಂತಿರುವ ಪ್ರಾಚೀನ ಕವಯಿತ್ರಿಗಳ ಬಗೆಗೆ ಯೋಚಿಸಿದರೆ ಮೂಡುವ ಭಾವನೆಗಳು ನೋವಿನದಾದರೂ, ಪುರುಷಪ್ರಧಾನ ವ್ಯವಸ್ಥೆಯೊಳಗಿನ ಮನೋಧರ್ಮದಿಂದಲೇ ಅಂದಿನ ವಿಮರ್ಶೆ, ಟೀಕೆಗಳು ಬಂದಿರುವುದು ವಾಸ್ತವ. ಮಹಿಳೆಗೆ ತನ್ನ ಸೃಜನಶೀಲ ಚಿಂತನೆಗಳನ್ನು ಅನಾವರಣಗೊಳಿಸಲು ಅವಕಾಶವಿಲ್ಲದ ಕಾಲದಲ್ಲಿಯೂ ತಂದೆ ತಾಯಿಯರ ಹಾಗೂ ಪತಿಯ ಪ್ರೋತ್ಸಾಹಗಳಿಂದ ತನ್ನ ಅನುಭವಗಳನ್ನು ಅಥವಾ ಭಾವನೆಗಳನ್ನು ಕತೆ, ಕವನ, ಕಾವ್ಯ, ನಾಟಕ, ಲೇಖನಗಳಾಗಿ ಪ್ರಕಟಿಸಿ ಸಾಹಿತ್ಯಿಕ ವ್ಯಕ್ತಿತ್ವಗಳಾಗಿರುವ ಅನೇಕ ಹಿರಿಯ ಬರಹಗಾರ್ತಿಯರ ಬರಹಗಳು ದೊರಕಿರುವುದು

ಸ್ತ್ರೀಯ ಸಾಮಾಜಿಕ ಕಳಕಳಿಗೆ ಹಾಗೂ ಮಾನವೀಯ ನೆಲೆಗಳಿಗೆ ಸಾಕ್ಷಿಯಾಗಿದೆ. ಅಂತೆಯೇ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ವಸಾಹತುಶಾಹಿ ಕಾಲಘಟ್ಟದ ಆಯ್ದ ಪ್ರಮುಖ ಬರಹಗಾರ್ತಿಯರ ಜೀವನ ಹಾಗೂ ಕೃತಿಗಳ ಸ್ಥೂಲವಾದ ಪರಿಚಯವನ್ನು ಮಾಡಲಾಗಿದೆ.

## ೧. ಮುಳಿಯ ಮುಕಾಂಬಿಕಾ ಅಮ್ಮ

ಇವರು ಬಂಟ್ವಾಳ ತಾಲೂಕಿನ ಪುಣಚ ಗ್ರಾಮದ 'ಮಲೆತಡ್ಕ' ಎಂಬ ಊರಿನಲ್ಲಿ ಸುಮಾರು ೧೮೭೦ರಲ್ಲಿ ಮೂಕಾಂಬಿಕಾ ಜನಿಸಿದರು. ತಂದೆ ಶಾಮಾಶಾಸ್ತ್ರಿ ತಾಯಿ ಗೌರಮ್ಮ ನವರದು ತುಂಬು ಕುಟುಂಬವಾದುದರಿಂದ ಆ ಮನೆಯಲ್ಲಿ ಸಂಸ್ಕೃತ ಮತ್ತು ಹಳೆಗನ್ನಡಗಳನ್ನು ತಿಳಿದ ಪ್ರಕಾಂಡ ಪಂಡಿತರಿದ್ದರು. ಅಂದಿನ ಪದ್ಧತಿಯಂತೆ ಹೆಣ್ಣು ಮಗು ಮುಕಾಂಬಿಕೆ ಶಾಲೆಗೆ ಹೋಗದಿದ್ದರೂ, ಅಷ್ಟಿಷ್ಟು ವಿದ್ಯೆಯನ್ನು ಮನೆಯಲ್ಲೇ ಕಲಿತ ಮೂಕಾಂಬಿಕೆಗೆ ಎಳೆಯ ಹರೆಯದಲ್ಲಿ ಮದುವೆಯಾಯಿತು. ಎದೆಯಾಳದಲ್ಲಿ ಕಲಿಕೆಯ ದಾಹವನ್ನು ಹೊತ್ತುಕೊಂಡೇ ಪತಿಗೃಹಕ್ಕೆ ಕಾಲಿಟ್ಟ ಇವರು ತಮ್ಮ ಪತಿಯವರಾದ ಮುಳಿಯ ಕೃಷ್ಣ ಭಟ್ಟರನ್ನು ಮಕ್ಕಳಿನ್ನೂ ಎಳವೆಯಲ್ಲಿದ್ದಾಗಲೇ ಕಳೆದುಕೊಂಡು ವಿಧವೆಯಾದರು. ಆಗಿನ ಕಾಲದ ಪದ್ಧತಿಯಂತೆ ಕೇಶಮುಂಡನ ಹಾಗೂ ಬಿಳಿಯ ಸೀರೆಯ ಕಟ್ಟಿಗೆ ಒಳಗಾಗಬೇಕಾಯಿತು. ಪತಿವಿಯೋಗ, ಬಡತನದ ಬದುಕು ಇವುಗಳನ್ನು ತಮ್ಮ ಕಾವ್ಯ ಪ್ರೀತಿಯಿಂದ ಸಹ್ಯವಾಗಿಸಿಕೊಂಡರು. ಸೋಬಾನೆ ಪದಗಳನ್ನು ಕಟ್ಟಿ ಹಾಡುತ್ತಿದ್ದ ಇವರು ತಮ್ಮ ರಚನೆಗಳ ಕೊನೆಗೆ ಮುಕಾಂಬೆ ಅಥವಾ ಮೂಕಾಂಬಿಕೆ ಎನ್ನುವ ಅಂಕಿತ ನಾಮಗಳನ್ನು ಬಳಸಿಕೊಂಡಿದ್ದಾರೆ. ದ್ರೌಪದಿ ವಸ್ತ್ರಾಪಹರಣ, ಹರಿಲೀಲಾಮೃತ, ಸೀತಾ ಕಲ್ಯಾಣ, ಧ್ರುವ ಚರಿತ್ರೆ, ಪುತ್ರ ಕಾಮೇಷ್ಠಿ, ಗಜೇಂದ್ರ ಮೋಕ್ಷ, ಬಾಲಲೀಲೆ ಬಿಲ್ಲ ಹಬ್ಬ, ಶ್ರೀ ಮಹಿಷಮರ್ದಿನಿ ಸ್ತುತಿ ಮುಂತಾದುವು ಈಕೆ ರಚಿಸಿದ ಕೃತಿಗಳು. ಆದರೆ ಇಷ್ಟು ರಚನೆಗಳಲ್ಲಿ ದೊರಕಿರುವುದು ಮೂರು ಕೃತಿಗಳು ಮಾತ್ರ.[೩೭] 'ಹರಿಲೀಲಾಮೃತ' ಶ್ರೀ ಕೃಷ್ಣನ ಜನನ ವೃತ್ತಾಂತವನ್ನು ಹೇಳುತ್ತದೆ. 'ದ್ರೌಪದಿವಸ್ತ್ರಾಪಹರಣ' ಇದು ಕವಯತ್ರಿಯ ಲಭ್ಯವಿರುವ ಕೃತಿಗಳಲ್ಲೊಂದು. ಭಾರತೀಯ ಸಮಾಜದಲ್ಲಿದ್ದ ಕಟ್ಟುಪಾಡುಗಳ ವಿರೋಧವಾಗಿ ಒಂದು ಪ್ರತಿಭಟನೆಯ ಎಳೆಯನ್ನು ಈ ಕೃತಿಯಲ್ಲಿ ಕಾಣಬಹುದು.

## ೨. ನೆಲ್ಲಿಕಾರು ರಾಧಮ್ಮ

ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಜೈನ ಸಮಾಜದ ನೆಲ್ಲಿಕಾರು ಶಾಂತಿ ಶೆಟ್ಟರು ಮತ್ತು ಚೆನ್ನಮ್ಮ ದಂಪತಿಗಳ ಹಿರಿಯ ಮಗಳಾಗಿ ೧೮೯೯ರಲ್ಲಿ ನೆಲ್ಲಿಕಾರು ರಾಧಮ್ಮನವರು ಬೆಳ್ತಂಗಡಿ ತಾಲೂಕು ಗುರುವಾಯನಕೆರೆ ಶೆಟ್ಟಿಪೇಟೆ (ಜೈನ ಪೇಟೆ) ಯಲ್ಲಿ ಜನಿಸಿದರು. ತಾಯಿ ಚೆನ್ನಮ್ಮನವರು ಪ್ರಸಿದ್ಧ ಆಯುರ್ವೇದ ಚಿಕಿತ್ಸಕರು ಮತ್ತು ಜೋತಿಷ್ಯಿಯಾಗಿದ್ದರಲ್ಲದೆ ಸಂಸ್ಕೃತ ಕವಯತ್ರಿಯರೂ ಆಗಿದ್ದರು. ಮಗಳು ರಾಧಾಮತಿ ಅಮ್ಮನವರ ಬಾಲ್ಯ ವಿದ್ಯಾಭ್ಯಾಸ ಎಂದರೆ ೩-೪ ತರಗತಿಗಳಷ್ಟು, ಪುತ್ತೂರಿನ ಪ್ರಾಥಮಿಕ ಶಾಲೆಯಲ್ಲಾಯಿತು.

‘ಅನಂತಮತಿ ಚರಿತೆ’ ಅವರ ಚೊಚ್ಚಲ ಕೃತಿ. ಇದರಲ್ಲಿ ‘ಅರಿತವಳು ನಾನಲ್ಲ ವಿದನೆನ್ನರೆಯಪ್ಪಣೆಯಂತೆ ವಿರಚಿಸಿಹೆ’ ಎನ್ನುವುದನ್ನು ಮೊದಲಿಗೆ ಪತಿಯ ಪ್ರೇರಣೆ ಹಾಗೂ ಪ್ರೋತ್ಸಾಹದಿಂದ ಬರೆದೆನೆಂದು ಹೇಳಿಕೊಂಡಿದ್ದಾರೆ. ಆತ್ಮ ಸಂತೋಷಕ್ಕಾಗಿ ಬರೆಯುತ್ತಲೇ ಇದ್ದ ಇವರು ವಿವಾಹಪೂರ್ವದಿಂದಲೇ ಶೋಭಾನೆ, ಭಜನೆಗಳನ್ನು ರಚಿಸುತ್ತಿದ್ದರು. ನೆಲ್ಲಿಕಾರು ಜೈನ ಮಹಿಳೆ ಎಂಬುವುದು ಇವರ ಕಾವ್ಯನಾಮ.

ಪುತ್ತೂರಿನಿಂದ ಪ್ರಕಟವಾಗುತ್ತಿದ್ದ ಪತ್ರಿಕೆಯಾದ ‘ಕರ್ನಾಟಕ ಕೇಸರಿ’ ಯಲ್ಲಿ ಇವರು ರಚಿಸಿರುವ ‘ಲಕ್ಷ್ಮಿಬಾಯಿ’ ಎಂಬ ಕಾವ್ಯ ಧಾರಾವಾಹಿಯಾಗಿ ಪ್ರಕಟಗೊಂಡಿರುತ್ತದೆ. ೧೯೩೦ರಲ್ಲಿ ಗೋವಿಂದ ಪೈಯವರು ಈ ಕವಿತೆಯನ್ನು ಆಂಗ್ಲ ಕವಿ ಟೆನಿಸನ್ ರಚಿಸಿದ ‘ಡೋರಾ’ ಎಂಬ ಕವಿತೆಯಂತೆ ಇದು ಒಂದೇ ಸವನೆ ಸರಳವೂ, ಸುಗಮವೂ, ಮನೋಜ್ಞವೂ ಆಗಿದೆ ಎಂದಿದ್ದಾರೆ. ಕತೆ ಕಿರಿದಾದರೂ ಈ ಕವಿತೆಯಲ್ಲಿ ಒಂದೆಡೆ ವಾರಾಂಗನೆಯ ಧರ್ಮಬುದ್ಧಿ, ಇನ್ನೊಂದೆಡೆ ಬ್ರಾಹ್ಮಿಣಿಯ ಪತಿಭಕ್ತಿ ಕಂಡು ಬಂದಿದೆ.[೨೮] ಜಯಕುಮಾರ ಚರಿತೆ, ನೀಲೀಕುಮಾರಿ ಚರಿತೆ, ಉದ್ದಾಯನ ಚರಿತೆ, ವರ್ಧಮಾನ ಪುರಾಣ ಇವು ಇವರ ರಚನೆಗಳು. ಹಿಂದಿ ಭಾಷೆಯಲ್ಲಿ ಪರಿಣಿತರಾಗಿದ್ದ ಇವರಿಗೆ ಸಂಸ್ಕೃತ, ಪ್ರಾಕೃತ ಭಾಷೆಗಳಲ್ಲಿ ಪ್ರವೇಶವಿತ್ತು. ಇಂಗ್ಲಿಷಿನ ಪರಿಚಯವಿದ್ದ ಇವರು ಕನ್ನಡದಲ್ಲಿ ನಿಷ್ಣಾತರಾಗಿದ್ದರು. ಹಿಂದಿಯಲ್ಲಿ ಕಿಶೋರ್ ಮುಖ್ತರ್ ರಚಿಸಿರುವ ‘ಮೇರಿ ಭಾವನಾ’ ಎಂಬ ಆತ್ಮ ನಿವೇದನೆಯನ್ನು ‘ನನ್ನ ಭಾವನೆ’ ಎಂಬ ಹೆಸರಿನಿಂದ ಅನುವಾದಿಸಿದ್ದಾರೆ.[೨೯] ಇವರ ಬಿಡಿ ಕವಿತೆಗಳು ‘ಗುರುದೇವ’, ‘ವಿವೇಕಾಭ್ಯುದಯ’, ‘ಸನ್ಮತಿ’, ‘ವೀರ ಭಾರತಿ’, ‘ಜನವಾಣಿ’ ಮೊದಲಾದ ಪತ್ರಿಕೆಗಳಲ್ಲಿ ಬಹುವಾಗಿ ಅಚ್ಚಾಗಿವೆ.

**೨. ಸೀತಾದೇವಿ ಪಡುಕೋಣೆ**

ರಾಷ್ಟ್ರಭಕ್ತ ಮೊಳಹಳ್ಳಿ ಶಿವರಾಯ ಮತ್ತು ಉಮಾದೇವಿರವರ ಮೊದಲ ಮಗಳಾಗಿ ಸುಶೀಲೆಯವರು ೧೯೦೩ರ ಜೂನ್ ೫ ರಂದು ಪುತ್ತೂರಿನಲ್ಲಿ ಜನಿಸಿದರು. ಪಡುಕೋಣೆ ರಮಾನಂದರಾಯರನ್ನು ವಿವಾಹವಾದ ಮೇಲೆ ಸಾರಸ್ವತರ ಪದ್ಧತಿಯಂತೆ ಅತ್ತೆ ಮನೆಯಲ್ಲಿ ಸೀತಾದೇವಿಯಾದರು. ಪ್ರೌಢಶಾಲೆಯವರೆಗೆ ವಿದ್ಯಾಭ್ಯಾಸ ಪಡೆದು ಹದಿಮೂರನೇ ವರ್ಷಕ್ಕೆ ಗೃಹಿಣಿಯಾದ ಸೀತಾದೇವಿಯವರಿಗೆ ಮನೆ ಮಾತು ಕೊಂಕಣಿಯಾದಾರೂ ಕನ್ನಡ, ಮರಾಠಿ, ಹಿಂದಿ, ಇಂಗ್ಲಿಷ್ ಭಾಷೆಗಳ ಪರಿಚಯವಿತ್ತು. ಮರಾಠಿಯ ‘ಜ್ಞಾನೇಶ್ವರಿ’ ಗ್ರಂಥದ ಮೇಲೆ ಬೆಂಗಳೂರಿನ ಚಿತ್ರಾಪುರ ಮಠದಲ್ಲಿ, ಉಪನ್ಯಾಸ ಮಾಲೆಯಲ್ಲೇ ನೀಡಿ ಖ್ಯಾತಿಗಳಿಸಿದ್ದರಂತೆ. ಕನ್ನಡ, ಮರಾಠಿ ಸುಗಮ ಸಂಗೀತ, ದಾಸರ ಪದಗಳನ್ನು ಹಾಡುವುದರೊಂದಿಗೆ ನಾಟಕಗಳಲ್ಲಿ ಹಿನ್ನೆಲೆ ಗಾಯಕಿಯಾಗಿಯೂ ಭಾಗವಹಿಸಿದ್ದಾರೆ. ಸೀತಾದೇವಿಯವರಿಗೆ ಲಲಿತಕಲೆಗಳಲ್ಲಿ ಆಸಕ್ತಿ ಇದ್ದು, ಅಭಿನಯ ಅವರ ಪ್ರೀತಿಯ ಹವ್ಯಾಸವಾಗಿತ್ತು. ಗೃಹಿಣಿಯೊಬ್ಬಳು ರಂಗದ ಮೇಲೆ ಅಭಿನಯಿಸಿ ಅಭ್ಯುದಯವನ್ನು ಸಾಧಿಸುವುದು ಅಂದಿನ ಸಮಾಜಕ್ಕೆ ಸವಾಲಾಗಿತ್ತು. ಆದರೂ ಪತಿಯ ಬೆಂಬಲದಿಂದ ಸೀತಾದೇವಿ, ರಮಾನಂದರೊಂದಿಗೆ ಟಿ. ಪಿ

ಕೈಲಾಸ್‌ಂರವರ 'ಹೋಂರೂಲ್'ನಲ್ಲಿ ವೆಂಕಮ್ಮನಾಗಿ, ಸಿ.ಕೆ.ವೆಂಕಟರಾಮಯ್ಯ ಅವರ 'ಮಂಡೋದರಿ'ಯಲ್ಲಿ ಮಂಡೋದರಿಯಾಗಿ ವೀ.ಸೀ ಅವರ 'ಸೊಹ್ರಾಬ್ ರುಸ್ತುಂ'ನಲ್ಲಿ ತಾಹಮೀನೆಯಾಗಿ ಸಮರ್ಥ ಪಾತ್ರ ನಿರ್ವಹಿಸಿದ್ದಾರೆ. ಶಿವರಾಮಕಾರಂತರ ಕಲಾ ಪ್ರಯೋಗಗಳಿಗೆ ಹಿನ್ನೆಲೆ ಸಂಗೀತದಲ್ಲಿ ನೆರವು ನೀಡಿದ ಹೆಗ್ಗಳಿಕೆ ಸೀತಾದೇವಿಯವರದ್ದು. ಕನ್ನಡದಲ್ಲಿ 'ಹೀಗಾಗಬೇಕೆ?'ಎಂಬುದು ಸೀತಾದೇವಿಯವರ ಮೊದಲ ಕೃತಿಯಾಗಿದ್ದು ಇದು ೧೯೨೯ರಲ್ಲಿ ಪ್ರಕಟವಾಯಿತು. ವೇಶ್ಯಾ ಸಮಸ್ಯೆಯ ಬಗ್ಗೆ, ಸನ್ಮಾರ್ಗದಲ್ಲಿ ನಡೆಯಲು ಮನಸ್ಸಿದ್ದರೂ ವೇಶ್ಯಾಬಾಲಿಕೆಯರು ವೇಶ್ಯಾವೃತ್ತಿ ಎಂಬ ಅಗ್ನಿಕುಂಡದಲ್ಲಿ ತಮ್ಮ ಬಲಿದಾನವನ್ನು ಹೇಗೆ ಮಾಡುವವರೆಂಬುದು ಈ ಕಥೆಯ ತಿರುಳು.

'ಕಟುಕ ರೋಹಿಣಿ ಸಂವತ್ಸರ' ನಾಟಕದಲ್ಲಿ ಗಂಡಂದಿರೆಲ್ಲ ಹೆಂಡತಿಯರಂತೆ ಮನೆವಾರ್ತೆ ನೋಡಿಕೊಂಡು ತಗ್ಗಿಬಗ್ಗಿ ನಡೆಯುವುದು, ಹೆಂಗಸರೆಲ್ಲ ಹೊರಗೆ ಕೆಲಸ ಮಾಡುತ್ತಾ ಕ್ಲಬ್, ಮೀಟಿಂಗುಗಳಲ್ಲಿ ಕಾಲಕಳೆಯುವುದು, ವಧುದಕ್ಷಿಣೆ ನೀಡಬೇಕಾದ ಪರಿಸ್ಥಿತಿ, ಮನೆಯಲ್ಲಿ ಗಂಡಸರೆಲ್ಲ ಸೇರಿ ತಮ್ಮ ಸಂಸಾರದ ಕಷ್ಟ ಸುಖಗಳನ್ನು ಹಂಚಿಕೊಳ್ಳುವುದು ಇತ್ಯಾದಿ ಘಟನೆಗಳನ್ನು ವಿನೋದಾತ್ಮಕವಾಗಿ ವಿಡಂಬಿಸಿ ಬರೆದಿದ್ದಾರೆ. 'ವೇಣುಮಾವ' ಎಂಬುವುದು ಸೀತಾದೇವಿಯವರ ಗಮನಾರ್ಹ ಕೃತಿ.[೮೦] ಇವರು ಬರಹಗಳ ಮೂಲಕ ಸಾಮಾಜಿಕ ಜಾಗೃತಿಯನ್ನು ಮೂಢಿಸುವ ಯತ್ನ ಇವರು ಮಾಡಿದ್ದಾರೆ.

## ೪. ಭಾರತಿ ಬಾಯಿ ಪಣಿಯಾಡಿ

ಪಾವಂಜೆ ಗುರುರಾವ್ ಹಾಗೂ ಪದ್ಮಾವತಿ ದೇವಿಯವರ ನಾಲ್ವರು ಹೆಣ್ಣು ಮಕ್ಕಳಲ್ಲಿ ಕೊನೆಯವರಾದ ಭಾರತಿದೇವಿಯವರು ಬಾಲ್ಯದಲ್ಲಿಯೇ ಸಂಗೀತ, ಸಾಹಿತ್ಯದಲ್ಲಿ ಆಸಕ್ತಿ ಹೊಂದಿದ್ದರು. ಆದರೆ ಇವರಿಗೆ ಐದನೇ ತರಗತಿಯವರೆಗಷ್ಟೇ ವಿದ್ಯಾಭ್ಯಾಸ ಲಭ್ಯವಾಗಿ, ಹನ್ನೆರಡನೇ ವಯಸ್ಸಿನಲ್ಲಿ ಶ್ರೀನಿವಾಸ ಉಪಾಧ್ಯಾಯ ಪಣಿಯಾಡಿಯವರೊಂದಿಗೆ ವಿವಾಹವಾಯಿತು. ಬರೋಡಾದಲ್ಲಿ ಸಂಸ್ಕೃತ ರೀಡರ್ ಆಗಿದ್ದ ಶ್ರೀನಿವಾಸ ಪಣಿಯಾಡಿಯವರು ಹುಟ್ಟೂರಿಗೆ ಮರಳಿ, ಗಾಂಧೀ ಚಳವಳಿಯಲ್ಲಿ ಪಾಲ್ಗೊಂಡಾಗ, ಮನೆಯಲ್ಲಿ ಎಲ್ಲರಿಗೂ ಖಾದೀಬಟ್ಟೆಯು ಕಡ್ಡಾಯವಾಯಿತು. ಪಣಿಯಾಡಿಯವರು ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲ್ಗೊಂಡು ಗಾಂಧೀಮಾರ್ಗ ಹಿಡಿದಾಗ ಭಾರತೀಬಾಯಿಯವರು ಖಾದೀದಾರಿಯಾದರು. ಉಡುಪಿಯ 'ಅಂತರಂಗ'ಪತ್ರಿಕೆಯ ಸಂಪಾದಕ ಹಾಗೂ ಪ್ರಕಾಶಕರಾದ ಇವರ ಪತಿ ಪಣಿಯಾಡಿಯವರಿಂದ ಸಾಹಿತ್ಯಾಭಿರುಚಿ ಹೆಚ್ಚಿ, ಪತ್ರಿಕೆಯ ಸಲಹೆಗಾರ ಮಂಡಳಿಯಲ್ಲಿ ಇವರ ಹೆಸರು ಕಾಣಿಸಿಕೊಂಡಿತಲ್ಲದೆ ಕಥೆ, ಲೇಖನಗಳು ಪ್ರಕಟವಾಗತೊಡಗಿದವು. ೧೯೩೪ರಲ್ಲಿ ಗಾಂಧೀಜಿಯವರು ದಕ್ಷಿಣ ಕನ್ನಡ ಜಿಲ್ಲೆಗೆ ಬಂದಾಗ ಪಣಿಯಾಡಿಯವರ ಪತ್ನಿ ಭಾರತಿ ಪಣಿಯಾಡಿಯವರು ತಮ್ಮ ಆಭರಣಗಳನ್ನು ಪುತ್ರನಾದ ವಾದಿರಾಜನ ಮೂಲಕ ಗಾಂಧೀಜಿಯವರಿಗೆ ನೀಡಿದರು.

೧೯೩೭ರಲ್ಲಿ ಜವಹರಲಾಲ್ ನೆಹರೂರವರು ಜಿಲ್ಲೆಗೆ ಬಂದ ಸಂದರ್ಭ ಪಣಿಯಾಡಿಯವರು ತಮ್ಮ ಮಗನಿಗೆ ಜವಾಹರ್ ಎಂದು ನಾಮಕರಣ ಮಾಡಿದರು. ಖಾದಿ ಪ್ರಚಾರ, ಮಧ್ಯಪಾನ ನಿಷೇಧ ಮೊದಲಾದ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇವರು ಪ್ರಾರಂಭಿಸಿದ ಅಂತರಂಗ ವಾರಪತ್ರಿಕೆಯಲ್ಲಿ ರಾಷ್ಟ್ರೀಯ ಚಟುವಟಿಕೆಗಳ ಕುರಿತಂತೆ ಚರ್ಚೆ ಇದೆ. ಸತಿಕಮಲೆ ಬಂಗಾಳದ ಕ್ರಾಂತಿಕಾರಿ ರಾಷ್ಟ್ರೀಯವಾದವನ್ನು ಬೆಂಬಲಿಸಿತು. ವಿಧವೆಯಾದರೂ ಸುಧಾರಣಾವಾದಿಯಾದ ತಮ್ಮ ಮಾವನ ಪ್ರೋತ್ಸಾಹದಿಂದ ಕಮಲೆಯು ಶಿಕ್ಷಣವನ್ನು ಮುಂದುವರಿಸಿದಳು. ಮುಂದೆ ಮದ್ರಾಸಿನಲ್ಲಿ ಶಿಕ್ಷಣವನ್ನು ಪಡೆದ ನಾರಾಯಣರಾವ್ ಕಮಲೆಯನ್ನು ಮರುವಿವಾಹವಾಗಲು ಕೇಳಿಕೊಂಡಾಗ ಆಕೆಯಲ್ಲಿ ಮೂಡುವ ತಿರಸ್ಕಾರ ಭಾವನೆಯನ್ನು ಗಮನಿಸಬೇಕಾಗಿದೆ. ಆಕೆ ಸತಿಯಾಗಿ ಬಾಳಲು ಇಷ್ಟಪಡುತ್ತಾಳೆಯೇ ವಿನಾ ಮರುವಿವಾಹದ ಪ್ರಸ್ತಾಪವನ್ನು ತಿರಸ್ಕರಿಸುತ್ತಾಳೆ. ಅದೇ ರೀತಿ ಲೇಖಕರು ಇಂಗ್ಲಿಷ್ ಶಿಕ್ಷಣವು ಭ್ರಷ್ಟಾಚಾರ ಮತ್ತು ಪರಕೀಯ ನಿಲುವುಗಳಿಗೆ ಪ್ರಚೋದನೆ ನೀಡುತ್ತದೆ ಎಂಬ ಸಂದೇಶವನ್ನೂ ನೀಡುತ್ತದೆ.[೪೧]

ಇವರ ಪ್ರಕಟಿತ ಕೆಲವು ಕಥೆಗಳಲ್ಲಿ, ಉಡುಪಿಯ ದಿ. ಶ್ರೀ ಹೊನ್ನಯ್ಯಶೆಟ್ಟರ ಸಂಪಾದಕತ್ವದ ಕಿರಿಯರ ಪ್ರಪಂಚದ 'ತೊದಲ್ನುಡಿ' ಗ್ರಂಥಮಾಲೆಯಲ್ಲಿ ವಿ.ವಿ.ಆಚಾರ್ಯರು ಸಂಪಾದಿಸಿದ 'ಮಧುವನ' ಎಂಬ ಕಥಾಸಂಕಲನದಲ್ಲಿರುವ 'ಹುಟ್ಟು -ಕೆಟ್ಟೆ' ಎಂಬ ಕಥೆ. ಇದು ಅಸ್ಪೃಶ್ಯತಾ ನಿವಾರಣೆಗಾಗಿ ಬ್ರಾಹ್ಮಣನೊಬ್ಬನು ಹೋರಾಡಿದ್ದನ್ನು ಚಿತ್ರಿಸುತ್ತದೆ. ಕಥೆಯ ಮೂಲಕ ವರ್ಗಸಂಘರ್ಷವನ್ನು ಖಂಡಿಸಲು ಪ್ರಯತ್ನಿಸಿರುವುದು ಶ್ಲಾಘನೀಯವಾಗಿದೆ. ಸಾಮಾಜಿಕ ಅಂತರದ ಬಗ್ಗೆ ಹಣೆದ ಧಾರವಾಡದ ಲಲಿತ ಸಾಹಿತ್ಯ ಮಾಲೆಯಿಂದ ಪ್ರಕಟವಾದ 'ರಂಗವಲ್ಲಿ' ಎಂಬ ಪ್ರಥಮ ಮಹಿಳಾ ಸಂಕಲನದಲ್ಲಿನ 'ರಹಸ್ಯ ಭೇದ' ಎಂಬ ಕಥೆಯು ಸ್ವಾರಸ್ಯಕರವಾಗಿದೆ.[೪೨]

### ೫. ಮಟ್ಪಾಡಿ ಕಮಲಾಕ್ಷಮ್ಮ

ಉಡುಪಿಯ ಅಂಬಲಪಾಡಿ ನಿಡಂಬೂರು ಬೀಡು ನಾರಾಯಣ ಬಲ್ಲಾಳ ಹಾಗೂ ಲಕ್ಷ್ಮಿಯವರ ಏಕಮಾತ್ರ ಪುತ್ರಿಯಾದ ಕಮಲಾಕ್ಷಮ್ಮ ಓದಿದ್ದು ಐದನೇ ತರಗತಿಯವರೆಗೆ. ಇವರ ಪತಿ ವೆಂಕೋಬಾಚಾರ್ಯರು. ಕಮಲಾಕ್ಷಮ್ಮನವರಿಗೆ ಬಾಲ್ಯದಿಂದಲೇ ಕಾವ್ಯಾಸಕ್ತಿ ಇದ್ದುದರಿಂದ ಕಾವ್ಯಾಧ್ಯಯನವು ರೂಢಿಯಾಯಿತು. ಬೆಂಗಳೂರಿನವರಾದ ಖ್ಯಾತ ಪತ್ರಕರ್ತೆ ಲೇಖಕಿ ಆರ್. ಕಲ್ಯಾಣಮ್ಮನವರ ನಿಕಟ ಸ್ನೇಹ ಸಂಪಾದಿಸಿದ ಇವರು 'ಸರಸ್ವತಿ' ಪತ್ರಿಕೆಯಲ್ಲಿ ಲೇಖನಗಳನ್ನು ಬರೆದಿದ್ದಾರೆ. 'ಸತಿಧರ್ಮ' ಎಂಬ ಖಂಡಕಾವ್ಯವನ್ನು ಭಾಮಿನಿ ಷಟ್ಪದಿಯಲ್ಲಿ ಹಾಗೂ 'ವತ್ಸಲಾ' ಎಂಬ ೬೬ ಪುಟಗಳ ಸಾಮಾಜಿಕ ಕಿರು ಕಾದಂಬರಿಯನ್ನು ರಚಿಸಿದ್ದಾರೆ. ಉಡುಪಿಯ 'ನವಯುಗ' ಮತ್ತು 'ಅಂತರಂಗ' ವಾರ ಪತ್ರಿಕೆಗಳಲ್ಲಿ ಈ ಕಿರು ಕಾದಂಬರಿಯ ಜಾಹಿರಾತು ಪ್ರಕಟವಾಗಿದೆ. ಈ ಕಾದಂಬರಿಯ ಜಾಹಿರಾತಿನಲ್ಲಿ ಸ್ತ್ರೀಯರಿಗೆ

ವಿದ್ಯಾಭ್ಯಾಸವಿಲ್ಲದಿರುವ ಪರಿಣಾಮವನ್ನು, ಸ್ತ್ರೀ ಪುರುಷ ಹೃದಯಗಳ ಪರಿಚಯವನ್ನು ಸೊಗಸಾಗಿ ಚಿತ್ರಿಸಿದ ಕಾದಂಬರಿಯೆಂದು ಬಣ್ಣಿಸಲಾಗಿದೆ.

**೬. ಕೃಷ್ಣವೇಣಿ ಬಾಯಿ ಕೆ. ಏ.**

ಸುಮಾರು ಇಪ್ಪತ್ತನೆಯ ಶತಮಾನದ ಮೊದಲನೆಯ ಭಾಗದಲ್ಲಿ ಉಡುಪಿಯಲ್ಲಿ ನೆಲೆಸಿದ್ದು, ವಿವಿಧ ವಿಷಯಗಳನ್ನು ಆಯ್ದುಕೊಂಡು ಕಥೆ ಬರೆಯುತ್ತಿದ್ದರು. ಪ್ರತ್ಯಕ್ಷವಾಗಿ ಪತ್ರಿಕೋದ್ಯಮದಲ್ಲಿ ಕಾಣಿಸಿಗದಿದ್ದರೂ ಒಳ್ಳೆಯ ಪತ್ರಿಕೆಯೊಂದನ್ನು ಹೊರಡಿಸುವ ಕನಸು ಕಾಣುತ್ತಿದ್ದರು. ಇವರ ಕಿರಿಯ ಸಹೋದರ ಶ್ರೀ ವ್ಯಾಸರಾವ್ ಎಂಬುವವರು ವಾರಪತ್ರಿಕೆ ನಡೆಸುತ್ತಿದ್ದು, ಮಡಿದ ಸಹೋದರಿಯ ಹೆಸರಿನಲ್ಲಿ ಪ್ರತಿವಾರ ಕಥಾಸ್ಪರ್ಧೆ ಏರ್ಪಡಿಸುತ್ತಿದ್ದರು ಎನ್ನಲಾಗಿದೆ. ಇವರ ಕೆಲವು ಪ್ರಕಟಿತ ಕಥೆಗಳ ವಿವರ ಹೀಗಿವೆ. ತಿಲಕ – 'ಅಂತರಂಗ' ವಾರ ಪತ್ರಿಕೆ, ಉಡುಪಿ (ಜನವರಿ ೭, ೧೯೪೧), ಆ ಬೆಳಕು – 'ನವಯುಗ' ವಾರ ಪತ್ರಿಕೆ, ಉಡುಪಿ (೨೭ನೇ ಫೆಬ್ರವರಿ ೧೯೪೧), ಕನಸು - ನನಸು – 'ಅಂತರಂಗ'(ಉಡುಪಿ ೬. ೫. ೧೯೪೧), ತಂಗಿ - ಅಂತರಂಗ, ಉಡುಪಿ ( ೧೩ - ೬ -೧೯೪೧), ವೀಣಾವಾದ – 'ಅಂತರಂಗ' ಉಡುಪಿ (೨೦ .೧. ೧೯೪೧), ಪರ್ಯವಸಾನ – 'ಧುರೀಣ' ಮಾಸಪತ್ರಿಕೆ, ಉಡುಪಿ (ಮಾರ್ಚ್ ೧೯೪೨, ೬ನೇ ಸಂಚಿಕೆ).

**೭. ವಾಸಂತಿ ಬಾಯಿ ಪಡುಕೋಣೆ**

೧೯೦೮ರಲ್ಲಿ ಅಣ್ಣಾಜಿ ರಾವ್ ಮತ್ತು ರಾಧಾಬಾಯಿ ದಂಪತಿಗಳ ಆರನೆಯ ಮಗುವಾಗಿ ಬರ್ಮಾದಲ್ಲಿ ಜನಿಸಿದ್ದು ವಾಸಂತಿಯವರಿಗೆ ಮೂರು ವರ್ಷವಾಗಿದ್ದಾಗ ಇವರ ಕುಟುಂಬ ಮಂಗಳೂರಿಗೆ ಮರಳಿತು. ವಾಸಂತಿಯವರ ಜೀವನ ತುಂಬ ಏರಿಳಿತಗಳೊಂದಿಗೆ ಕೂಡಿದ್ದಾಗಿತ್ತು. ಅವರು ತುಂಬಾ ಚಿಕ್ಕವರಿರುವಾಗಲೇ ತಾಯಿ ತಂದೆಯ ನಡುವೆ ವಿರಸ, ಆರ್ಥಿಕ ದುಸ್ಥಿತಿ ಸೋದರ ಸೋದರಿಯರ ಸಾವು, ಇವುಗಳ ನಡುವೆ ತಾಯಿಯ ಅಂಕೆಯಲ್ಲಿ ಅವರಿವರ ಮನೆಯಲ್ಲಿ ನೊಂದು ಬೆಂದು ವಾಸಂತಿ ಬೆಳೆದರು. ನಿಂತು ನಿಂತು ಸಾಗಿದ ಓದು, ಸಂಗೀತ ಪಾಠಗಳು, ಮದುವೆಯೊಂದಿಗೆ ಪೂರ್ತಿಯಾಗಿ ನಿಂತುಹೋದವು. ವಸಂತಿಗೆ ಹನ್ನೆರಡು ವರ್ಷವಾದಾಗ ಪಡುಕೋಣೆ ಶಿವಶಂಕರರಾವ್ ಅವರೊಂದಿಗೆ ವಿವಾಹವಾಯಿತು. ಇವರ ವೈವಾಹಿಕ ಜೀವನವು ತುಂಬಾ ಏರಿಳಿತಗಳಿಂದ ಕೂಡಿತ್ತು. ಎಳೆಯ ಹುಡುಗಿಯ ಬಗ್ಗೆ ಸರಿಯಾದ ತಿಳುವಳಿಕೆ ಇಲ್ಲದ್ದರಿಂದ ಪತಿಯ ಸಂಶಯ, ಮುನಿಸು, ಮಲೇರಿಯ ಕಾಯಿಲೆ, ಆಗಾಗ ಕೆಲಸ ಬಿಡುತ್ತಿದ್ದ ಗಂಡ, ದಾಂಪತ್ಯ ಜೀವನದ ಇರಿಸು ಮುನಿಸು, ಬಡತನ ಹೀಗೆ ನಾನಾ ಕಷ್ಟಗಳು ವಾಸಂತಿಯವರನ್ನು ಕಾಡಿದವು. ಈ ಎಲ್ಲ ಕಷ್ಟಗಳ ನಡುವೆಯೂ ವಾಸಂತಿಯವರು ಜೀವನವನ್ನು ಕುತೂಹಲದಿಂದ ನೋಡುತ್ತಿದ್ದರು. ಅಂಧಶ್ರದ್ದೆಯನ್ನು ಪ್ರಶ್ನಿಸುವ ವಿಚಾರವಂತಿಕೆಯನ್ನು ಇಟ್ಟುಕೊಂಡಿದ್ದರು. ಹನ್ನೆರಡು ಹದಿಮೂರು ವರ್ಷಗಳ

ವೈವಾಹಿಕ ಜೀವನದ ಸಂಕಷ್ಟ ಬಡತನಗಳು ವಾಸಂತಿಯವರನ್ನು ಹೊರಗೆ ದುಡಿಯಲು ಪ್ರೇರೇಪಿಸಿದವು. ಐದು ರೂಪಾಯಿ ದೊರಕುವ ಮನೆಪಾಠದಿಂದ ಅವರ ಉದ್ಯೋಗದ ಬದುಕು ಪ್ರಾರಂಭವಾಯಿತು. ಸತತ ಹೋರಾಟದ ನಡುವೆ ಮೆಟ್ರಿಕ್ ನಲ್ಲಿ ತೇರ್ಗಡೆಯಾದರು. ಇಂಥ ಸವಾಲುಗಳ ನಡುವೆಯೇ ಅನುವಾದ, ಕಥೆಗಳು, ಆತ್ಮಚರಿತ್ರೆ ಹೀಗೆ ಬೇರೆ ಬೇರೆ ಪ್ರಕಾರಗಳಲ್ಲಿ ಬರೆಯುತ್ತಾ ಬಂದರು. ೧೯೨೮ರ ಸುಮಾರಿಗೆ ಇವರ ಪತಿ ಕೆಲವು ಕಾಲ 'ರಾಷ್ಟ್ರ ಬಂಧು' ಪತ್ರಿಕೆಯ ಉಪಸಂಪಾದಕರಾಗಿದ್ದಾಗ ವಾಸಂತಿಯವರೂ ತಮ್ಮ ಲೇಖನಗಳನ್ನು ಬರೆಯುತ್ತಿದ್ದರು. ವಾಸಂತಿಯವರು ಬಂಗಾಲಿ, ಹಿಂದಿ, ಇಂಗ್ಲಿಷ್, ಕೊಂಕಣಿ ಮತ್ತು ಮರಾಠಿ ಭಾಷೆಗಳಲ್ಲಿ ಹಿಡಿತ ಸಾಧಿಸಿದ್ದರು.

ಅವರ ಕೆಲವು ಸಣ್ಣ ಕಥೆಗಳೆಂದರೆ ಮೋಹಿನಿ, ತ್ಯಾಗವೋ ಒಪ್ಪಿಗೆಯೋ, ಪುನರ್ಜೀವನ, ಸಂಶಯ ಪಿಶಾಚಿ, ವರದಕ್ಷಿಣೆ ಮೊದಲಾದುವು. ಈ ಕಥೆಗಳಲ್ಲಿ ಹೆಣ್ಣಿನ ಪ್ರೇಮವಿಶಿಷ್ಟ ಜೀವನ, ಗಂಡಿನ ವ್ಯವಹಾರ, ಪ್ರೇಮದ ತೀವ್ರತೆ ತನ್ನನ್ನು ತಾನು ಘಾಸಿಗೊಳಿಸಿಕೊಳ್ಳುವ ವ್ಯಕ್ತಿಯ ಪರಿಸ್ಥಿತಿ, ಮದುವೆಯ ಚೌಕಟ್ಟಿನ ಹೊರಗಿನ ಗಂಡುಹೆಣ್ಣಿನ ಸಂಬಂಧದ ವೈಪರೀತ್ಯಗಳು, ತೀವ್ರತೆಗಳು, ಸಂಸಾರದೊಳಗಿನ ಭಾವಶೂನ್ಯ ಸಂಬಂಧ, ಗಂಡ ಹೆಂಡಿರ ನಡುವಿನ ಸಾಮರಸ್ಯದ ಅಭಾವ, ದಾಂಪತ್ಯವನ್ನು ಕಾಡುವ ಸಂಶಯ, ಬಡತನದ ಕಷ್ಟವನ್ನು ಚಿತ್ರಿಸಲಾಗಿದೆ. ಇವರ ಕಥಾ ವಸ್ತುಗಳು ಸೂಕ್ಷ್ಮವೂ, ಮುನ್ನೋಟವುಳ್ಳವೂ ಆಗಿವೆ ಎಂಬುವುದನ್ನು ಓದುಗರು ಗಮನಿಸಬಹುದು. 'ಮಿಥುನ ಲಗ್ನ', 'ಆಸೆಯ ಕಣ್ಣು', 'ಕರ್ಮಾಚಾರಿ' ಮುಂತಾದುವು ಅವರು ಕನ್ನಡಕ್ಕೆ ಅನುವಾದಿಸಿರುವ ಕಾದಂಬರಿಗಳು. 'ನನ್ನ ಜೀವನದ ಹೋರಾಟ' ಮತ್ತು 'ನನ್ನ ಮಗ ಗುರುದತ್ತ' ಇವರ ಆತ್ಮ ಕಥಾನಕಗಳು. ತನ್ನ ನೋವು, ನಲಿವು, ಪತಿ ಮತ್ತು ಇವರ ಸ್ವಭಾವದಲ್ಲಿನ ಅಜಗಜಾಂತರ ವ್ಯತ್ಯಾಸ, ಹೈರಾಣಾಗಿಸುವ ದುಡಿಮೆಯ ಕುರಿತು ಮುಕ್ತವಾಗಿ ತಿಳಿಸಿದ್ದಾರೆ. ತನ್ನ ಮಗನನ್ನು ಕಳೆದುಕೊಂಡ ದುಃಖ ಇವರ 'ನನ್ನ ಮಗ ಗುರುದತ್ತ' ಎಂಬ ಪುಸ್ತಕದಲ್ಲಿ ಉಕ್ಕಿ ಬಂದಿದೆ.

### ೮. ಬೆಳ್ಳೆ ಸೀತಾರತ್ನಮ್ಮ

ಕೊಳಾಲ್ ರಾಮರಾಯ್ ಹಾಗೂ ಶೃಂಗಾರಮ್ಮ ಎಂಬ ಅನುಕೂಲಸ್ಥ ದಂಪತಿಗಳ ಏಕಮಾತ್ರ ಪುತ್ರಿ ಸೀತಾರತ್ನಮ್ಮ, ೧೯೧೦ರ ಜೂನ್ ೭ರಂದು ಜನಿಸಿದರು. ಹನ್ನೆರಡನೇ ವಯಸ್ಸಿಗೆ ಬೆಳ್ಳೆ ರಾಮಚಂದ್ರ ರಾವ್ ಅವರೊಂದಿಗೆ ವಿವಾಹವಾಯಿತು. ೧೯೪೦ರ ದಶಕದಲ್ಲಿ ಗಾಂಧೀಜಿಯವರು ಕರ್ನಾಟಕ ಪ್ರವಾಸದಲ್ಲಿ ಪುತ್ತೂರಿಗೆ ಬಂದಾಗ ಅವರಲ್ಲಿ ಹಿಂದಿಯಲ್ಲೇ ಮಾತನಾಡಿ ಅವರಿಗೆ ಊರ ನಾಗರಿಕರ ಪರವಾಗಿ ಹಾರ ಹಾಕಿದ ಹಿರಿಮೆ ಇವರದು. ಗಾಂಧೀಜಿಯವರ ಚರಕ ಚಳವಳಿಯಲ್ಲಿ ಭಾಗವಹಿಸಿದ ತೃಪ್ತಿ ಅವರದ್ದು. ಸ್ವತಃ ಚರಕ ತಿರುಗಿಸಿ ನೂಲು ತೆಗೆದು ಅಂಗವಸ್ತ್ರ, ಉಡುವ ಪಂಚೆ ಇತ್ಯಾದಿಗಳನ್ನು ಮಾಡಿ ಮಾರುತ್ತಿದ್ದರು. ಅವರ ಪ್ರಕಟಿತ ಮತ್ತು ಅಪ್ರಕಟಿತ ಕೃತಿಗಳಲ್ಲಿ ಕನ್ನಡ ಭಗವದ್ಗೀತೆ, ಭಕ್ತಿವಾಹಿನಿ ಮಿಸಾ ಎಂಬ ದೀರ್ಘಕತೆ ಲಭ್ಯವಿದೆ.

ಅತ್ಯಂತ ಭಾವುಕ ಮನೋಭಾವದ ಸೀತಾರತ್ನಾಬಾಯಿ ಅವರ ರಚನೆಗಳಲ್ಲಿ ಎದ್ದು ಕಾಣುವ ಅಂಶ ದೈವಭಕ್ತಿ. ಆಧ್ಯಾತ್ಮ ಚಿಂತನೆಯೆಡೆಗೆ ತುಡಿಯುತ್ತಿದ್ದ ಮನಸ್ಸಿನ ಪ್ರತಿಬಿಂಬವಾಗಿ ಅವರ ಅಮೂಲ್ಯವಾದ 'ಕನ್ನಡ ಭಗವದ್ಗೀತೆ' ಕಂಡು ಬರುತ್ತದೆ.[೪೩]

ಗಾಂಧೀಜಿಯವರು ಮೂರನೆಯ ಬಾರಿಗೆ ತಮ್ಮ ಕರ್ನಾಟಕ ಪ್ರವಾಸದಲ್ಲಿ ಪುತ್ತೂರಿಗೆ ಬಂದಾಗ ಅವರಲ್ಲಿ ಹಿಂದಿಯಲ್ಲಿ ಮಾತನಾಡಿ ಊರಹಿರಿಯರ ಪರವಾಗಿ ಗಾಂಧೀಜಿಯವರಿಗೆ ಹಾರ ಹಾಕಿದ ಹಿರಿಮೆ ಸೀತಾರತ್ನಮ್ಮನವರದು. ಗಾಂಧೀಜಿಯವರ ಚರಕ ಚಳವಳಿಯಲ್ಲಿ ಭಾಗವಹಿಸಿ ಸ್ವತಃ ಚರಕ ತಿರುಗಿಸಿ ನೂಲು ತೆಗೆದು ಅಂಗವಸ್ತ್ರ ಉಡುವ ಪಂಚೆ ಇತ್ಯಾದಿಗಳನ್ನು ಮಾಡಿ ಮಾರುತ್ತಿದ್ದರು. 'ಹಾಕು ಬೆಂಕಿಲಿ ಉರಿಲಿ ಧಗಧಗ, ಧರಿಸು ಖಾದಿ ಪವಿತ್ರವು' ಎಂಬ ಸ್ವದೇಶಿ ಚಳವಳಿಯಲ್ಲಿ ಅವರು ಸಕ್ರಿಯವಾಗಿ ಪಾಲ್ಗೊಂಡಿದ್ದರು. ವಿವಾಹದ ನಂತರ ಹಿಂದಿ ಕಲಿತು ವಿಶಾರದ ಪದವಿ ಪಡೆದು ಗಾಂಧೀಜಿಯವರ ಪ್ರಭಾವದಿಂದ, ಮನೆಯಲ್ಲೇ ಹಿಂದಿ ತರಗತಿಗಳನ್ನು ತೆರೆದು ಎಷ್ಟೋ ವಿದ್ಯಾರ್ಥಿನಿಯರಿಗೆ ಧರ್ಮಾರ್ಥ ಹಿಂದಿ ಕಲಿಸಿದರು. ಓರ್ವ ಮಹಿಳೆಯಾಗಿ, ಆರು ಮಕ್ಕಳ ತಾಯಿ ಸಂಸ್ಕೃತ ಪಂಡಿತರನ್ನು ಮನೆಗೆ ಕರೆಸಿ ಸಂಸ್ಕೃತ ಕಲಿತದ್ದು ಆಗಿನ ಕಾಲದಲ್ಲಿ ವಿಶೇಷ ಸಾಧನೆಯೇ ಸರಿ. ಸಾಮಾಜಿಕ ಸೇವೆಗೆ ಪ್ರೀತಿಯಿಂದ ಸ್ಪಂದಿಸುತ್ತಿದ್ದ ಸೀತಾರತ್ನಮ್ಮ ಪುತ್ತೂರಿನ ಮಹಿಳಾ ಸಮಾಜದ ಪ್ರಥಮ ಅಧ್ಯಕ್ಷೆಯಾಗಿದ್ದರು. ತನ್ನ ಮೂವತ್ತನೆಯ ವಯಸ್ಸಿನಲ್ಲಿ ಕೃತಿ ರಚನೆಯಲ್ಲಿ ತೊಡಗಿಸಿಕೊಂಡ ಇವರ ಮನೆಗೆ ಕನ್ನಡದ ಶ್ರೇಷ್ಠ ಕವಿಗಳಾದ ಬಿ.ಎಂ.ಶ್ರೀಕಂಠಯ್ಯ, ಡಿ.ವಿ.ಜಿ, ಬೇಂದ್ರೆ, ಮಾಸ್ತಿ, ಅನಕೃ ಮುಂತಾದ ಸಾಹಿತ್ಯ ದಿಗ್ಗಜರು ಆಗಾಗ್ಗೆ ಭೇಟಿ ನೀಡುತ್ತಿದ್ದರು. ಮುಂದೆ ಅವರ ಸಂಪರ್ಕವು ಸೀತಾರತ್ನಮ್ಮ ಅವರ ಸಾಹಿತ್ಯ ರಚನೆಗೂ ಪೂರಕವಾಗಿದ್ದವು. ಓದಿದ ಸಾಹಿತ್ಯ, ಕಲಿತ ಸಂಗೀತ ಅವರ ಬರಹಕ್ಕೆ ಪ್ರೇರಕವಾದವು. ಸೀತಾರತ್ನಾಬಾಯಿ ಅವರ ರಚನೆಗಳಲ್ಲಿ ಎದ್ದು ಕಾಣುವ ಅಂಶ ದೈವಭಕ್ತಿ. ಅದನ್ನುಳಿದು ಅವರ ಬರಹವೇ ಇಲ್ಲವೋ ಎಂಬಂತೆ ಕೃತಿಗಳಲ್ಲಿ ದೈವಪ್ರೇಮ ಪ್ರತಿಬಿಂಬಿಸುತ್ತದೆ. ಆಧ್ಯಾತ್ಮದ ಚಿಂತನೆಯೆಡೆಗೆ ತುಡಿಯುತ್ತಿದ್ದ ಮನಸ್ಸಿನ ಪ್ರತಿಬಿಂಬವಾಗಿ ಅವರ ಅಮೂಲ್ಯವಾದ ಕನ್ನಡ ಭಗವದ್ಗೀತೆ ಹಾಗೂ ಭಕ್ತಿವಾಹಿನಿ ಎಂಬ ಭಕ್ತಿಗೀತೆಗಳ ಕೃತಿಯೂ ಕಂಡುಬರುತ್ತದೆ.[೪೪]

## ೯. ಆರ್. ಸತ್ಯಭಾಮಾದೇವಿ

ಉಡುಪಿಯಲ್ಲಿ ಕತೆಗಾರ್ತಿಯಾಗಿದ್ದ ಇವರ ಜೀವನ ವೃತ್ತಾಂತದ ಬಗ್ಗೆ ಯಾವುದೇ ಮಾಹಿತಿ ಲಭ್ಯವಾಗಿಲ್ಲದಿದ್ದರೂ ಇವರ ಕತೆಗಳು ಪತ್ರಿಕೆಗಳಲ್ಲಿ ಪ್ರಕಟವಾಗಿದ್ದು 'ಕಂಠೀರವ' ದಸರಾ ವಿಶೇಷಾಂಕದಲ್ಲಿ 'ಮೀನಾಕ್ಷಿ ಮನೋವ್ಯಾಧಿ' ಎಂಬ ಕಥೆಯು ಪ್ರಕಟವಾಗಿದೆ. ಈ ಕಥೆಯಲ್ಲಿ ಗಂಡನ ಅವಜ್ಞೆ ಮತ್ತು ಪರ ಸ್ತ್ರೀ ಆಕರ್ಷಣೆಯನ್ನು ತಾಳಲಾರದೆ ಆತ್ಮಹತ್ಯೆ ಮಾಡಿಕೊಂಡ ಮೀನಾಕ್ಷಿಯ ದುರಂತ ಕತೆಯಿದೆ.[೪೫]

### ೧೦. ಲೀಲಾ ಬಾಯಿ ಕಾಮತ್

ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಲ್ಲಿ ೧೯೧೧ರ ಅಕ್ಟೋಬರ್ ೧೫ರಂದು ಲೀಲಾಬಾಯಿ ಕಾಮತ್ ರವರು ಜನಿಸಿದರು. ತಂದೆ ಶ್ರೀನಿವಾಸ ದಾಂಗೆ ಮತ್ತು ತಾಯಿ ಕಾಶೀಬಾಯಿ ದಾಂಗೆ. ಏಳನೇ ವಯಸ್ಸಿಗೆ ತಂದೆಯನ್ನು ಕಳೆದುಕೊಂಡ ಇವರಿಗೆ ತಾಯಿಯ ಬದುಕು ಮತು ಆದರ್ಶಗಳು ಮಾದರಿಯಾಗಿ ಬದುಕಿನುದ್ದಕ್ಕೂ ಪ್ರಭಾವಿಸಿದವು. ೧೧ನೇ ವಯಸ್ಸಿನಲ್ಲೇ ಇವರ ವಿವಾಹವಾಯಿತು. ವಿವಾಹ ನಂತರ ಹಿಂದಿ ಪ್ರಥಮ, ಮಧ್ಯಮ ಹಾಗೂ ರಾಷ್ಟ್ರಭಾಷೆಗಳಿಗೆ ಪರೀಕ್ಷೆ ಬರೆದು ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾದರು. ಮನೆಭಾಷೆ ಕೊಂಕಣಿಯಾದರೂ ಪರಿಸರದ ಭಾಷೆಯಾಗಿ ಕನ್ನಡ, ಮರಾಠಿ, ಹಿಂದಿ, ಇಂಗ್ಲಿಷ್ ಭಾಷೆಗಳಲ್ಲೂ ಅವರು ಪ್ರಾವೀಣ್ಯ ಪಡೆದುಕೊಂಡರು. ಸಾಹಿತ್ಯ ಕ್ಷೇತ್ರವನ್ನು ಅನುವಾದ ಕತೆಗಳ ಮೂಲಕ ಪ್ರವೇಶಿಸಿದರು. ೧೯೪೦ರ ಅಗಸ್ಟ್ ೨ರ 'ಸ್ವದೇಶಾಭಿಮಾನಿ' ಪತ್ರಿಕೆಯಲ್ಲಿ ಪ್ರಕಟವಾದ 'ವಿಶ್ವಾಸಘಾತ' ಇವರ ಮೊದಲ ಕತೆ. ವೈಯಕ್ತಿಕ ಆಸಕ್ತಿಯಿಂದ ಬಿಡುವಿನ ಸಮಯದಲ್ಲಿ ಅಡುಗೆಮನೆಯಲ್ಲಿ ಆರಂಭವಾದ ಈ ಸಾಹಿತ್ಯ ನಿರ್ಮಾಣ ಕಾರ್ಯ ಮುಂದೆ ಅವರಿಗೆ ಸ್ವತಂತ್ರ ಕತೆಗಳನ್ನು ಬರೆಯಲು ಪ್ರೇರಣೆ ನೀಡಿತು. 'ಹಾರಿಹೋದ ಹಕ್ಕಿ' ಮತ್ತು 'ನಮ್ಮೂರ ಶಿವಪಾರ್ವತಿ' ಇವರ ಪ್ರಕಟಿತ ಕಥಾಸಂಕಲನಗಳು. ಮಂಗಳೂರಿನ ಕೆನರಾ ಗರ್ಲ್ಸ್ ಶಾಲೆಯಲ್ಲಿ ಶಿಕ್ಷಣ ಪಡೆದ ಅವರು ಹಿಂದೆ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿ ಪ್ರಾವೀಣ್ಯವನ್ನು ಪಡೆದಿದ್ದರು.[೪೬]

### ೧೧. ಗಿರಿಬಾಲೆ ಸರಸ್ವತಿ ಬಾಯಿ ರಾಜಾವಾಡೆ

೧೯೧೩ರಲ್ಲಿ ಅಕ್ಟೋಬರ್ ೩ರಂದು ಉಡುಪಿಯ ಬಳಿಯ ಬಳಂಜಾಲ ಎಂಬಲ್ಲಿ ಜನಿಸಿದ ಸರಸ್ವತಿ ಬಾಯಿಯವರ ತಂದೆ ನಾರಾಯಣರಾವ್ ಹಾಗೂ ತಾಯಿ ಕಮಲಾಬಾಯಿ. ಮೂಲತಃ ಇವರು ಮಹಾರಾಷ್ಟ್ರದಿಂದ ವಲಸೆ ಬಂದ ಕರಾಡಿ ಬ್ರಾಹ್ಮಣರಾಗಿದ್ದರು. ಹೆಂಡತಿಯ ಗರ್ಭದಲ್ಲಿ ಜೀವವೊಂದು ಅಂಕುರಿಸಿದ ವಿಷಯ ತಿಳಿದ ನಾರಾಯಣ ರಾವ್ ಅದನ್ನು ನಿವಾರಿಸಲು ಹೆಂಡತಿಗೆ ಹೇಳಿದರು. ಆದರೆ ಅದಕ್ಕೆ ಕಮಲಾಬಾಯಿಯವರು ಒಪ್ಪದ ಕಾರಣ, ಹೆಂಡತಿಯನ್ನು ಅವರ ಪಾಡಿಗೆ ಬಿಟ್ಟು ಮನೆಯನ್ನೂ ತೊರೆದು ನಡೆದರು. ದಟ್ಟದರಿದ್ರವಾದ ಬಾಳಿನಲ್ಲಿ ಒಂಟಿಯಾಗಿ ಸಿಲುಕಿದ ಆ ತಾಯಿಗೆ ಬಯಸಿ ಪಡೆದ ಮಗು ಭಾರವಾಯಿತು. ಇಂಥ ವಿಷಮ ಸ್ಥಿತಿಯಲ್ಲಿ ಸರಸ್ವತಿಬಾಯಿಯವರ ಜನನವಾಯಿತು. ಮೂರನೆಯ ವಯಸ್ಸಿನಲ್ಲಿ ತಂದೆಯವರು ತೀರಿಕೊಂಡ ಸುದ್ದಿ ಬಂದಾಗ ಸ್ವಂತ ತಾಯಿಯಿಂದ ತಂದೆಯನ್ನು ತಿಂದ ಮಾರಿ ಎಂಬ ನಿಂದನೆಗೆ ಒಳಪಡಬೇಕಾಯಿತು. ಅಂಥ ದರಿದ್ರ ಪರಿಸ್ಥಿಯಲ್ಲೂ ಓದಬೇಕೆನ್ನುವ ಹಟದಿಂದಾಗಿ, ಕಮಲಾಬಾಯಿಯವರು ಅವರಿವರಲ್ಲಿ ಬೇಡಿ ಸ್ಲೇಟು, ಬಳಪ ತಂದು ಶಾಲೆಗೆ ಸೇರಿಸಿದರು. ಅಕ್ಷರ ಕಲಿತದ್ದೇ ಓದುವ ಹುಚ್ಚು ಬೆಳೆಯಿತು. ಆದರೆ ಎರಡನೆಯ ತರಗತಿಗೆ ಓದು ನಿಂತಿತು. ಕಡುಬಡತನದಲ್ಲಿ ಗಿರಿಬಾಲೆಯವರ ಬಾಲ್ಯ ಕಳೆಯಿತು.

ಗಿರಿಬಾಲೆಯವರ ಹುಟ್ಟು ಹೆಸರು ಸರಸ್ವತಿಬಾಯಿ ಬಾಲ್ಯದಿಂದಲೇ ಓದುವುದರಲ್ಲಿ ಆಸಕ್ತಿ. ಬಾಲೆಯ ಹಠದಿಂದ ತಮ್ಮ ಬಡತನದಿಂದ ಬೇಸತ್ತು ನೊಂದು ದೇವರಲ್ಲಿ ಮೊರೆಯಿಟ್ಟಳು. ಅವರೇ ಹೇಳುವಂತೆ 'ಕುಂಬಳಕಾಯಿ ಅಕ್ಷರಗಳಲ್ಲಿ ಓ ದೇವರೇ ನಾನು ತುಂಬಾ ಓದಬೇಕು ತುಂಬಾ ದುಡ್ಡು ಕೊಡು' ಎಂದು ದೇವರಿಗೆ ಪತ್ರ ಬರೆದೆ. ಅವನು ನನ್ನ ಮೊರೆ ಕೇಳಿದ, ನನಗೆ ತುಂಬಾ ಹಣವುಳ್ಳ ಗಂಡನನ್ನು ಕೊಟ್ಟ. ಆನಂತರ ನಾನು ಎಸ್.ಎಸ್.ಎಲ್.ಸಿ. ಮಾಡಿಕೊಂಡೆ ಎನ್ನುತ್ತಾರೆ. ೧೫ ವರ್ಷದ ಗಿರಿಬಾಲೆಗೆ ೫೧ ವರ್ಷದ ಶ್ರೀ ಅಂಬಿಕಾಪತಿ ರಾಯಶಾಸ್ತ್ರಿ ರಾಜವಾಡೆಯವರೊಂದಿಗೆ ವಿವಾಹವಾಯಿತು. ರಾಜಾವಾಡೆಯವರು ಅಕೌಂಟೆಂಟ್ ಜನರಲ್ ಹುದ್ದೆಯಲ್ಲಿದ್ದರು. ಬಳಂಜಾಲದ ಸಣ್ಣಹಳ್ಳಿಯಿಂದ ಸಿಂಗಾಪುರಕ್ಕೆ ಪತಿಯ ಹಿಂದೆ ಹೊರಟರು. ಅಲ್ಲಿಯೇ ಅವರ ಬರವಣಿಗೆಯು ಆರಂಭವಾಯಿತು. ಗಿರಿಬಾಲೆಯವರು ೧೯೩೯ರಲ್ಲಿ ತಮ್ಮ ಸಾಹಿತ್ಯ ಸೇವೆಯನ್ನು ಆರಂಭಿಸಿದರು. ನಂತರ ನಿರಂತರವಾಗಿ ಮೂರು ದಶಕಗಳ ಕಾಲ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಕೃಷಿ ಮಾಡಿದರು. ತಾನು ಬರೆದ ಬರಹಗಳನ್ನು ಜನರು ಮೆಚ್ಚುತ್ತಾರೋ ಎಂದು ಪರೀಕ್ಷಿಸಿಕೊಳ್ಳಲು ಶಾಖ, ವೀಣಾಪಾಣಿ, ಸರಸ್ವತಿಬಾಯಿ, ಸರಸ್ವತಿಬಾಯಿ ರಾಜಾವಾಡೆ ಮೊದಲಾದ ಹೆಸರುಗಳಿಂದ ಬರೆಯುತ್ತಿದ್ದ ಗಿರಿಬಾಲೆ ತಮ್ಮನ್ನು ತಾವು ವಿಮರ್ಶಿಸಿಕೊಂಡು ಬೆಳೆದ ಚಿಕಿತ್ಸಕ ಬುದ್ಧಿಯ ಕವಚಿುತ್ರಿಯಾಗಿದ್ದಾರೆ. ಇವರ ಹಲವು ಕತೆಗಳಲ್ಲಿ ಸ್ತ್ರೀ ಶೋಷಣೆಯ ವಿವಿಧ ಮುಖಗಳು ಕಂಡುಬರುತ್ತದೆ. ೧೯೨೯ರಲ್ಲಿ ಮೊದಲ ಕತೆ 'ನನ್ನ ಅಜ್ಞಾನ' ಪ್ರಕಟವಾಯಿತು. ಅಲ್ಲಿಂದ ಸಾಹಿತ್ಯ ಸೇವೆ ೧೯೬೬ರವರೆಗೂ ಮುಂದುವರಿಯಿತು.

ಗಿರಿಬಾಲೆಯವರು ಸುಮಾರು ೬೫ ಪ್ರಬಂಧಗಳನ್ನು ಪ್ರಕಟಿಸಿದ್ದಾರೆ. ೧೭ ಪ್ರಬಂಧಗಳು ಮಹಿಳೆಗೆ ಸಂಬಂಧಿಸಿದ ವಿಷಯಗಳನ್ನೊಳಗೊಂಡಿದ್ದು ೨೩ ಪ್ರಬಂಧಗಳು ಆರೋಗ್ಯ ಕುರಿತಾಗಿವೆ. ಜಾತಿ, ಧರ್ಮ, ಭಾಷೆ ಇವುಗಳ ಬಗ್ಗೆ ಲೇಖಕಿಯ ಚಿಂತನೆಗಳು ಅನೇಕ ಪ್ರಬಂಧಗಳಲ್ಲಿ ವ್ಯಕ್ತವಾಗಿದೆ. ಆರಂಭದ ಲೇಖಕಿಯರನ್ನು ಪ್ರಬಲವಾಗಿ ಕಾಡಿದ ವಿಷಯಗಳೆಂದರೆ ವಿಧವೆಯರ ಬವಣೆ, ವೇಶ್ಯಾ ವೃತ್ತಿ ಹಾಗೂ ವರದಕ್ಷಿಣೆ ಸಮಸ್ಯೆ. 'ಅವಳ ಉದ್ಧಾರ', 'ಆ ಭಿಕ್ಷುಕಿ', 'ಪಶ್ಚಾತಾಪ' ಈ ಕತೆಗಳಲ್ಲಿ ವಿಧವಾ ಸಮಸ್ಯೆಗಳು ಕಥಾವಸ್ತುಗಳಾಗಿವೆ. 'ಅವಳ ಉದ್ಧಾರ' ಬಾಲವಿಧವೆಯಾದ ಗೋಪಿಯ ಬಾಳಿನಲ್ಲಿ ನಡೆಯುವ ಬವಣೆಯನ್ನೂ, ಸಮಾಜದಲ್ಲಿ ಹೆಣ್ಣು ಎಷ್ಟು ನಿರ್ದಯವಾಗಿ ಶೋಷಣೆಗೆ ಒಳಗಾಗುತ್ತಾಳೆ ಎಂಬುವುದನ್ನು ಮಾರ್ಮಿಕವಾಗಿ ಚಿತ್ರಿಸಲಾಗಿದೆ. 'ಆ ಭಿಕ್ಷುಕಿ' ಎಂಬ ಕಥೆಯಲ್ಲಿ ಶ್ರೀಮಂತ ಮನೆತನದ ಬಾಲವಿಧವೆ ಮಗಳು ತರುಣನೊಬ್ಬನ ಅಶ್ವಾಸನೆಗೆ ಮಣಿದು ಗರ್ಭಿಣಿಯಾದಾಗ ಮನೆಯವರು ಹೊರದಬ್ಬಿದ ಸಂದರ್ಭ ಭಿಕ್ಷುಕಿಯಾಗಿ ದಾರುಣ ಪರಿಸ್ಥಿತಿ ಎದುರಿಸಬೇಕಾದ ಕುರಿತು ಮಾಹಿತಿ ನೀಡುತ್ತದೆ. 'ಪಶ್ಚಾತಾಪ' ಕತೆಯಲ್ಲಿಯೂ ಬಾಲ ವಿಧವೆಯಾದ ಕುಮುದಿನಿಯೆ ತನ್ನನ್ನು ಮೆಚ್ಚಿದ ರಮೇಶನನ್ನು ಮದುವೆಯಾಗಲು

ತಿರಸ್ಕರಿಸುತ್ತಾಳೆ. ಗಾಂಧೀಜಿಯವರ ಬಗ್ಗೆ ಗೌರವವಿದ್ದರೂ ವಿಧವಾವಿವಾಹ ಅಪರಾಧವಲ್ಲ ಎಂಬ ಅವರ ಭೋಧನೆಯನ್ನು ಅನುಸರಿಸಲು ಪರಾಂಪರಾಗತ ಮೌಲ್ಯಗಳು ಅವಕಾಶ ಕೊಡುವುದಿಲ್ಲ ಎಂಬುವುದನ್ನು ಗುರುತಿಸಬಹುದು.

ವರದಕ್ಷಿಣೆ ಸಮಸ್ಯೆಯು ಅವರ 'ಕುಲವಧು' ಎಂಬ ಕತೆಯಲ್ಲಿ ಕಂಡು ಬಂದಿದೆ.[೪೭] ಪ್ರತಿಯೊಬ್ಬ ಮಹಿಳೆಗೂ ಪುರುಷರಂತೆಯೇ ಜೀವನ ಕ್ಷೇತ್ರದಲ್ಲಿ ಅವಕಾಶ ದೊರೆಯಬೇಕು. ವೈಯಕ್ತಿಕ, ಸಾಮಾಜಿಕ ಮತ್ತು ಮಾನಸಿಕ ಅಧಿಕಾರಗಳಲ್ಲಿ ಸ್ತ್ರೀ ಪುರುಷರಲ್ಲಿ ಸಮಾನ ವ್ಯವಹಾರವಿರಬೇಕು. ಪತ್ರಿಕೆ, ವೇದಿಕೆಗಳಲ್ಲಿ ಮಾತ್ರವಲ್ಲದೆ ಆಚರಣೆಗೂ ಬರಬೇಕು ಎಂಬುವುದು ಅವರ ನಿಲುವಾಗಿತ್ತು.[೪೮] 'ನಮ್ಮ ಮಹಿಳೆಯರು' ಎಂಬ ಲೇಖನದಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯವರಾದ ಪಂಡಿತಾ ರಮಾಬಾಯಿ, ಉಮಾದೇವಿ ಕುಂದಾಪುರ, ಮಂದಾಕಿನಿ ಬಾಯಿ, ಪಡುಕೋಣೆ ಸೀತಾದೇವಿ, ನೆಲ್ಲಿಕಾರು ಸುಂದರಮ್ಮ, ಮಟ್ಪಾಡಿ ಕಮಲಾಕ್ಷಿ, ಪಡುಕೋಣೆ ವಸಂತಿ ಬಾಯಿ, ಶಾಂಭವಿ ಆರ್. ಪೂಂಜ, ಗಿರಿಜಾಬಾಯಿ ಪೈ, ಕೆ. ವಾರಿಜಾ ದೇವಿ, ಲೀಲಾ ಕಾರಂತ, ಲಲಿತಾ ಮಂಗಳೂರು, ಕಾರ್ಕಳದ ಗಿರಿಜಾ ದೇವಿ, ವತ್ಸಲಾದೇವಿ, ಹೇಮಲತಾ ಶೆಡ್ತಿ, ಸುಶೀಲಾ ಚೌಟಾ, ಸೀತಾ ದೇವಿ, ಲೀಲಾಬಾಯಿ ಕಾಮತ್, ಜೈನ ಮಹಿಳೆ, ಕಮಲಾಬಾಯಿ ಮಂಗಳೂರ್ಕರ್ ಕುರಿತು ಮಾಹಿತಿ ಇದೆ. ಗಿರಿಬಾಲೆಯವರು ಹರಿಜನೋದ್ಧಾರದ ಕುರಿತು ಬರೆಯುವ ಸಂದರ್ಭದಲ್ಲಿ ತಳಸ್ತರದ ಮೇಲಿನ ದೌರ್ಜನ್ಯವನ್ನು ಕಟುವಾಗಿ ಟೀಕಿಸಿದರು. ದಲಿತವರ್ಗದವರ ಆರ್ಥಿಕ ಪ್ರಶ್ನೆಯನ್ನು ರಾಷ್ಟ್ರದ ಪ್ರಶ್ನೆಯ ಒಂದು ಭಾಗವೆಂದು ತಿಳಿದುಕೊಳ್ಳುವುದು ಅವಶ್ಯಕವೆಂದೂ, ಪ್ರತಿಯೊಬ್ಬ ಸಮಾಜದ ಹಿತೈಷಿಯು ತಮ್ಮ ಸಹಾನುಭೂತಿಯನ್ನು ತೋರಿಸಿ ಹರಿಜನರನ್ನು ಉದ್ದರಿಸುವ ಪ್ರಯತ್ನ ಮಾಡಬೇಕು ಎಂದು ಉಧ್ಘೋಷಣೆ ಮಾಡಿದರು. ದಕ್ಷಿಣ ಕನ್ನಡ ಜಿಲ್ಲೆಗೆ ಸಂಬಂಧಿಸಿದಂತೆ ಸರಸ್ವತಿ ಬಾಯಿ ರಾಜವಾಡೆಯವರ ಕಥೆಗಳು ಶೋಷಿತ ಸ್ಥಿತಿಯ ಅರಿವನ್ನು ವ್ಯವಸ್ಥೆಯೊಂದಿಗಿನ ಮುಖಾಮುಖಿಯನ್ನಾಗಿಸುತ್ತದೆ.

### ೧೨. ಚಂದ್ರಭಾಗಿ ಕೆ. ರೈ

ಬಂಟ್ವಾಳ ತಾಲೂಕಿನ ಅನಂತಾಡಿ ಗ್ರಾಮದ ಮರ್ಮ ಎಂಬಲ್ಲಿ ಶ್ರೀ ಸುಬ್ಬಯ್ಯ ಆಳ್ವ ಮತ್ತು ತಂಗಮ್ಮ ದಂಪತಿಗಳ ಮಗಳಾಗಿ ೧೯೧೬ರಲ್ಲಿ ಜನಿಸಿದ ಚಂದ್ರಭಾಗಿಯವರು ಪುರಾಣ, ಶಾಸ್ತ್ರ ಇತ್ಯಾದಿಗಳಲ್ಲಿ ಪರಿಣಿತರಾಗಿದ್ದು, ಏಳನೆಯ ತರಗತಿಗೆ ಶಿಕ್ಷಣ ನಿಂತುಹೋಯಿತು. ಬಾಲ್ಯದಲ್ಲಿಯೇ ನಾಟಕಗಳ ರಚನೆಯನ್ನು ಪ್ರಾರಂಭಿಸಿದ ಇವರು ಬಿ.ಕೃಷ್ಣಪ್ಪ ರೈಯವರನ್ನು ವಿವಾಹವಾದರು. ಸುಮಾರು ಮೂವತ್ತಕ್ಕೂ ಮೀರಿದ ಲೇಖನಗಳನ್ನೂ ಹಲವಾರು ತುಳು ಕವಿತೆಗಳನ್ನೂ ರಚಿಸಿದ್ದಾರೆ. ಐತಿಹಾಸಿಕ ಲೇಖನ, ಸಾಮಾಜಿಕ ಲೇಖನ, ಸ್ಥಳ ಪುರಾಣ, ಜಾನಪದ ಸಂದರ್ಶನ ಹೀಗೆ ಹಲವು ವಿಚಾರಗಳಲ್ಲಿ ಚಂದ್ರಭಾಗಿಯವರು ಬರೆಯುವ ಆಸಕ್ತಿ ತೋರಿದ್ದಾರೆ. ಸ್ತ್ರೀ ವಿದ್ಯಾಭ್ಯಾಸ, ಹರಿಜನೋದ್ದಾರ, ವರದಕ್ಷಿಣೆ ಮುಂತಾದುವುಗಳ ಬಗ್ಗೆ ವೈಚಾರಿಕ

ಲೇಖನಗಳನ್ನು ಬರೆದಿದ್ದಾರೆ. ಸಮಾಜದಲ್ಲಿ ವಿಧವೆಯವರಿಗೆ ಉತ್ತಮ ಸ್ಥಾನಮಾನ ಲಭ್ಯವಾಗಬೇಕೆನ್ನುವ ಪ್ರಗತಿಪರ ವಿಚಾರವನ್ನು ಬಿಂಬಿಸುವ ಮಂಗಳ ಅವಮಂಗಳ ಎನ್ನುವ ಕಥೆಯೊಂದನ್ನು ರಚಿಸಿ ಸ್ತ್ರೀ ಸಮೂಹಕ್ಕೇ ಮಾದರಿಯಾಗಿದ್ದಾರೆ. ಬುದ್ಧಿ ಹಾಗೂ ಭಾವಲೋಕಗಳು ಎಲ್ಲಾ ಮಾನವರಲ್ಲೂ ಒಂದಲ್ಲ ಒಂದು ಪ್ರಮಾಣದಲ್ಲಿ ಪ್ರವೃತ್ತವಾಗಿಯೇ ತೀರುತ್ತವೆ. ಅವರ ಈ ಲೋಕ ಗ್ರಹಿಕೆಯು ಸಾಮಾನ್ಯ ಸಂದರ್ಭಗಳಲ್ಲಿ ಅವರ ವರ್ತನೆಗಳಲ್ಲಿ, ಮಾತುಕತೆಗಳಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ಸೀಮಿತ ಅರ್ಥದಲ್ಲಿ ಇದು ಕೂಡಾ ಸೃಜನಶೀಲತೆಯ ಅಂಶವೇ ಆಗಿದ್ದು ಗಾದೆ, ಒಡಪು, ನುಡಿಗಟ್ಟುಗಳಲ್ಲಿ ಕಾಣಿಸಿಕೊಂಡಿದೆ. ಇಂಥಾ ಅಭಿವ್ಯಕ್ತಿಗೆ ಹೆಣ್ಣು ಗಂಡುಗಳೆಂಬ ಬೇಧಗಳೇನೂ ಇಲ್ಲ. ಹಾಗೊಮ್ಮೆ ನೋಡಿದರೆ ಮಹಿಳೆಯರ ಮಾತುಕತೆಗಳಲ್ಲೇ ಈ ಸಹಜ ಪ್ರತಿಭೆಯು ಹೆಚ್ಚಾಗಿ ಪ್ರಕಾಶಿಸುತ್ತದೆ ಎಂಬುವುದನ್ನು ಸೂಕ್ಷ್ಮವಾಗಿ ನೋಡಬಹುದು.[೪೯]

## ೧೩. ಲೀಲಾ ಕಾರಂತ

ಲೀಲಾ ಕಾರಂತರು ಶಿವರಾಮ ಕಾರಂತರ ಒಡನಾಡಿಯಾಗಿ, ಅವರ ಬರವಣಿಗೆಗಳನ್ನೇ ಆಧಾರವಾಗಿಟ್ಟುಕೊಂಡು, ಪರಿಚಿತ ಭಾವಪ್ರಪಂಚಕ್ಕೆ ಪ್ರವೇಶ ಪಡೆದರು. ಲೀಲಾ ಕಾರಂತರ ಬಗೆಗಿನ ಸ್ಫುಟವಾದ ಚಿತ್ರಣಕ್ಕೆ ಕಾರಂತರ ಮಾತುಗಳೇ ಸಾಕ್ಷಿ. ಕಾರಂತರೇ ಒಂದೆಡೆ ಹೇಳುವಂತೆ 'ನನ್ನ ಕೈ ಹಿಡಿದು ಜತೆಗೆ ಬಾಳಲು ಬಂದ ಮಡದಿ, ಏನೇನೂ ಗೊಣಗದೆ ಇಪ್ಪತ್ತೈದು ವರ್ಷಗಳ ಕಾಲ ಬಡತನಕ್ಕೆ ಅಂಜದೆ, ಇಲ್ಲದ್ದಕ್ಕೆ ಕೊರಗದೆ, ಸಂಸಾರವನ್ನು ಸಹನೀಯವಾಗಿ ಮಾಡಿದಳು. ಆದರೆ ಅವಳ ಬದುಕು ಮಾತ್ರ ಅವಳ ಕೈಯೊಳಗಿನ ಬದುಕಾಗದೆ ಹೋಯಿತು' ಎಂದಿರುವರು. ಶಿವರಾಮ ಕಾರಂತರ ರಚನೆಗಳಾದ 'ಮರಳಿ ಮಣ್ಣಿಗೆ'ಯ ಪಾರೋತಿ, ಸರಸೋತಿಯರಂತೆ ಬಡತನಕ್ಕೆ ಅಂಜದೆ, ಇಲ್ಲದ್ದಕ್ಕೆ ಕೊರಗದೆ ಸಹನೆ, ಒಲವುಗಳ ಪ್ರತಿಮೂರ್ತಿಯಾಗಿ ಬದುಕು ಸವೆಸಿದ ದೊಡ್ಡ ಜೀವ ಅವರದು. ಇವರ 'ನಾ ಕಂಡ ಕಾರಂತ' ಎಂಬ ಲೇಖನವು ಕಾರಂತರೊಡನೆ ಇವರ ಒಡನಾಟದ ಕುರಿತು ಬೆಳಕು ಚೆಲ್ಲುತ್ತದೆ. ಕಾರಂತರ ಜೊತೆಯಾಗಿ ಲೀಲಾ ಕಾರಂತರು ಅನುವಾದಿಸಿದ 'ಯಾರು ಲಕ್ಷಿಸುವವರು?' ಎಂಬ ತೊಂಭತ್ತೊಂದು ಪುಟಗಳ ಬೃಹತ್ ಕಾದಂಬರಿಯು ಮೂಢನಂಬಿಕೆಗಳ ನಡುವೆ ನಲುಗಿಹೋದ ಹೆಣ್ಣಿನ ಕಥೆಯನ್ನು ಮನಮುಟ್ಟುವಂತೆ ಹೇಳುತ್ತದೆ.[೫೦]

## ೧೪. ಶಾರದಾ ಶಾಸ್ತ್ರಿ

೧೯೨೫ರ ಮಾರ್ಚ್ ೧೯ರಂದು ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳದಲ್ಲಿ ಜನಿಸಿದ ಶ್ರೀಮತಿ ಶಾರದಾ ಶಾಸ್ತ್ರಿಯವರು ಹಳೆಯ ತಲೆಮಾರಿನ ಲೇಖಕಿಯರಲ್ಲೊಬ್ಬರು. ಮಹಿಳೆಯರು ಶಿಕ್ಷಿತರಾದರೆ ಸದೃಢ ಸಮಾಜ ನಿರ್ಮಾಣ ಸಾಧ್ಯ ಎಂದು ಅವರು ನಂಬಿದ್ದರು.[೫೧] ಇವರು ರಚಿಸಿರುವ ೧೯ ನಾಟಕಗಳಲ್ಲಿ ರುಕ್ಮಿಣಿ ಸ್ವಯಂವರ,

ಬೇಡರ ಕಣ್ಣಪ್ಪ, ಅಮರ ಅಭಿಮನ್ಯು, ಸುಧನ್ವ ಕಾಳಗ, ಏಕಲವ್ಯ, ಲವಕುಶ, ಹತಭಾಗ್ಯ ಕರ್ಣ, ಸೀತಾಪರಿತ್ಯಾಗ, ಅಭಿಜ್ಞಾನ ಶಾಕುಂತಲ, ಭಕ್ತ ಪ್ರಹ್ಲಾದ, ಶರವು ಮಹಾತ್ಮೆ, ರಕ್ತ ಸಂಬಂಧ, ನಾಟ್ಯರಾಣಿ ಶಾಂತಲಾ, ವೀರ ಬಭ್ರುವಾಹನ, ಸತ್ಯ ಪ್ರೇಮಿ ಹರಿಶ್ಚಂದ್ರ, ವೀರ ಪಾಂಡ್ಯ ಕಟ್ಟಬೊಮ್ಮನ್, ಹತಭಾಗ್ಯ ಕುಂತಿ, ವಿಕ್ಷಿಪ್ತ ಪ್ರಮುಖವಾಗಿದೆ. ಇವುಗಳಲ್ಲಿ ನಾಟ್ಯರಾಣಿ ಶಾಂತಲಾ ನಾಲ್ಕಾರು ಪ್ರದರ್ಶನಗಳನ್ನು ಕಂಡಿತ್ತು.[೨೨] ಇವರು 'ಬಾಲಕಲಾಕಲ್ಪ' ಎಂಬ ಮಕ್ಕಳ ನಾಟಕ ಸಂಘ ಸ್ಥಾಪಿಸಿ, ನಾಟಕಗಳನ್ನು ರಚಿಸಿ ನಿರ್ದೇಶಿಸಿರುವರು.

## ೧೫. ದೇವಾಂಗನಾ ಶಾಸ್ತ್ರಿ

೧೯೨೫ರಲ್ಲಿ ಗಣೇಶ್ ರಾವ್ ಹೊಸಮನೆ ಮತ್ತು ಶಾರದಾಬಾಯಿಯವರ ಮಗಳಾಗಿ ಗೋಕರ್ಣದಲ್ಲಿ ದೇವಾಂಗನಾ ಶಾಸ್ತ್ರಿಯವರು ಜನಿಸಿದರು. ಕೇವಲ ಎಳನೇ ತರಗತಿಯಷ್ಟೇ ಓದಿದ್ದರೂ ಅವರ ಜ್ಞಾನ ಅಗಾಧವಾಗಿತ್ತು. ವೇಣಿಸಂಹಾರ, ನಾಲ್ಕು ನೂರು, ಹಾರೆಗೋಲು, ವರದಕ್ಷಿಣೆ, ಅಡಕತ್ತರಿ, ಬಯಲಾಟ, ಆಣೆ, ಪಾವಲಿ, ಪುಣ್ಯದ ಫಲ ಇವರ ಸಣ್ಣ ಕಥೆಗಳಾಗಿವೆ. ತಮ್ಮ ಹದಿನಾರನೆಯ ವಯಸ್ಸಿನಲ್ಲಿ ಇವರು ವೇಣಿ ಸಂಹಾರವೆಂಬ ಕಥೆಯನ್ನು ರಚಿಸಿದ್ದು, ಈ ಕಥೆಯು ಜಯಂತಿ ಮಾಸ ಪತ್ರಿಕೆಯು ನಡೆಸಿದ್ದ ಕಥಾ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಗಳಿಸಿತ್ತು. ದೇವಾಂಗನಾ ಶಾಸ್ತ್ರಿಯವರಿಗೆ ತಮ್ಮ ಸ್ವಂತ ಅಕ್ಕ ಬಾಲವಿಧವೆಯಾದ ವೆಂಕಮ್ಮನ ಬಾಳಿನಲ್ಲಿ ನಡೆದ ದುರ್ಘಟನೆ ವೇಣಿ ಸಂಹಾರ ಕತೆಯ ವಿಷಯ ವಸ್ತುವಾಯಿತು. 'ಇಂದಿನ ಸ್ತ್ರೀಯರ ಕರ್ತವ್ಯ', ಕಾದಂಬರಿ ಮತ್ತು ಸಣ್ಣ ಕತೆ ಕುರಿತಾದ ಲೇಖನಗಳು ದೇವಾಂಗನೆಯರ ಲಭ್ಯ ರಚನೆಗಳು. ಸ್ತ್ರೀ ಪರ ಧೋರಣೆ, ಅನ್ಯಾಯದ ಖಂಡನೆ, ಸ್ತ್ರೀಯರು ಎದುರಿಸುತ್ತಿದ್ದ ಸಮಸ್ಯೆಗಳು, ವರದಕ್ಷಿಣೆ, ಕೇಶಮುಂಡನ, ನಾಲ್ಕು ಗೋಡೆಗಳಿಗೆ ಸೀಮಿತವಾದ ಹೆಣ್ಣಿನ ಸ್ವಾತಂತ್ರ್ಯ ಮೊದಲಾದ ಅಂಶಗಳು ಇವರ ಕತೆಗಳು ಹಾಗೂ ಲೇಖನಗಳಲ್ಲಿ ಕಂಡು ಬರುತ್ತದೆ.

## ೧೬. ಲಲಿತಾ ರೈ

ಬಂಟ ಸಮುದಾಯದ ನೇಮು ಶೆಟ್ಟಿ ಮತ್ತು ಕಲ್ಯಾಣಿ ದಂಪತಿಗಳಿಗೆ ೧೯೨೮ರ ಆಗೋಸ್ಟ್ ೨೨ರಂದು ಜನಿಸಿದ ಲಲಿತಾ ರೈಯವರು ಕುಟುಂಬದ ಕಣ್ಮಣಿಯಾಗಿಯೇ ಬೆಳೆದರು. ಮುಂದೆ ಕಾಲೇಜು ವಿದ್ಯಾಭ್ಯಾಸವನ್ನು ಮಂಗಳೂರಿನ ಸೈಂಟ್ ಆಗ್ನೇಸ್ ಮತ್ತು ಸರಕಾರಿ ಕಾಲೇಜಿನಲ್ಲಿ ಪೂರೈಸಿದರು. ಹೈಸ್ಕೂಲಿನಲ್ಲಿ ಪಿ.ಕೆ ನಾರಾಯಣರು, ಕಾಲೇಜಿನಲ್ಲಿ ಕಡೆಂಗೋಡ್ಲುಶಂಕರ ಭಟ್ಟರು ಲಲಿತಾ ಅವರಲ್ಲಿ ಸಾಹಿತ್ಯ ಪ್ರೀತಿಯ ಬೀಜವನ್ನು ಬಿತ್ತಿದರು. ಮಂಗಳೂರಿನಲ್ಲಿ ತಮ್ಮ ಗುರುಗಳಾದ ಕಡೆಂಗೋಡ್ಲು ಶಂಕರ ಭಟ್ಟರ 'ರಾಷ್ಟ್ರಬಂಧು' ಪತ್ರಿಕೆಯ ಕಾರ್ಯಾಲಯದ ಎದುರು ಕಾಲೇಜಿಗೆ ಹೋಗುತ್ತಿದ್ದ ಲಲಿತಾರವರು ಒಮ್ಮೆ ಅಲ್ಲಿಗೆ ಭೇಟಿ ನೀಡುವ ಸಂದರ್ಭ ಒದಗಿ ಬಂತು. ಇಂಗ್ಲಿಷ್ ಭಾಷೆಯ ಮೇಲೆ ಉತ್ತಮ ಹಿಡಿತವಿದ್ದ ಲಲಿತಾರವರಲ್ಲಿ ಶಂಕರಭಟ್ಟರು

ಭಾಷಾಂತರಿಸುವ ಕೆಲಸವನ್ನು ಮಾಡಿಕೊಡಲು ಕೇಳಿದಾಗ ಶ್ರದ್ಧೆಯಿಂದ ಒಪ್ಪಿಕೊಂಡು ಕೆಲಸ ಮುಂದುವರಿಸಿದ ನಂತರದಲ್ಲಿ ಅವರ ಲೇಖನಗಳು ಪ್ರಕಟವಾಗತೊಡಗಿತು. ಪದವಿ ಮುಗಿಯುತ್ತಿದ್ದಂತೆ ಪುತ್ತೂರಿನ ಗುತ್ತಿನ ಅನುಕೂಲಸ್ಥ ಮನೆತನದ ಯುವಕ ರಘುನಾಥ ರೈಯವರೊಂದಿಗೆ ವಿವಾಹ ನೆರವೇರಿತು. ಕೂಡುಕುಟುಂಬದ ದೊಡ್ಡ ಮನೆಯ ಸೊಸೆಯಾಗಿ ಹೋದಾಗ ಮೊದಲಿಗೆ ಸಂತೋಷವಾದರೂ ನಂತರ ಜೀವನ ಪಥದ ಚಕ್ರ ಕಿರುಟುತ್ತಾ ಸಾಗತೊಡಗಿದಾಗ ಬದುಕೇ ಭಾರವಾಗಿ ಬಿಟ್ಟಿತು. ತನ್ನ ನಾಲ್ಕು ಮಕ್ಕಳ ಜವಾಬ್ದಾರಿಯ ಹೊಣೆಹೊತ್ತ ಇವರು ಬಿ.ಎಡ್ ಪದವಿ ಪಡೆದು ಶಿಕ್ಷಣ ಪೂರೈಸಿದ ಮರುವರ್ಷವೇ ಕೆನರಾ ಹೈಸ್ಕೂಲಿನಲ್ಲಿ ಶಿಕ್ಷಕಿಯಾಗಿ ಸೇರಿಕೊಂಡರು. ನಂತರದಲ್ಲಿ ಸಮಾಜಮುಖಿ ಸ್ಪಂದನದಿಂದ ಅವರ ಮನಸ್ಸು ಕ್ರಿಯಾತ್ಮಕವಾಯಿತು.

ಲಲಿತಾರವರು ತಮ್ಮ ಬಂಧುಗಳಾಗಿದ್ದ ಕಲ್ಯಾಣಿ ಡಿ. ಶೆಟ್ಟಿಯವರೊಡನೆ ಸೇರಿ 'ಭಗಿನಿ ಸಮಾಜ'ದ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿದರು. 'ಅರುಣ' ಎಂಬ ಪತ್ರಿಕೆಯಲ್ಲಿ ಹಲವು ಸಣ್ಣ ಕಥೆಗಳನ್ನು ಬರೆದಿರುವರು. 'ಎಚ್ಚೆತ್ತ ಹೃದಯ' ಎಂಬ ಕಥೆಯ ಪ್ರಕಟಣೆಯಲ್ಲಿ ಲೇಖಕಿಯನ್ನು ಪರಿಚಯಿಸುತ್ತಾ ಸಂಪಾದಕರು ಈಕೆಯನ್ನು ಕನ್ನಡದ 'ಪರ್ಲ್ ಬಕ್' ಎಂದು ಪ್ರಶಂಶಿಸಿದ್ದಾರೆ. ಇವರ ಪ್ರಕಟಿತ ಕೃತಿಗಳು: ಚಿತ್ತಗಾಂಗಿನ ವೀರರು (ಅನುವಾದ), ಮತ್ತೆ ಬೆಳಗಿತು ಸೊಡರು ( ಕಥಾ ಸಂಕಲನ), ಇಂಟರ್ನೆಟ್ಟಿನ ಒಳಗೆ ಮತ್ತು ಇತರ ಕಥೆಗಳು (ಕಥಾ ಸಂಕಲನ), ಸೌಪರ್ಣಿಕಾ ಕಡತ್ದ್ ವೈತರಣೆಗ್ (ತುಳು ಕಥಾಸಂಕಲನ) ಇತ್ಯಾದಿ.[೫೩]

## ೧೭. ಅಂಬಿಕಾ ಪಿ. ಎನ್

ಮಂಗಳೂರಿನಲ್ಲಿ ೧೯೨೯ರಲ್ಲಿ ಜನಿಸಿದ ಅಂಬಿಕಾ ಪಿ. ಎನ್ ಇವರು ಕನ್ನಡ, ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ನಿರರ್ಗಳತೆಯನ್ನು ಕಾಯ್ದು ಕೊಂಡಿದ್ದರು. ಕತೆ, ಹನಿಗವನ, ವಚನ ಸೇರಿದಂತೆ ಸುಮಾರು ೪೦೦ರಕ್ಕೂ ಹೆಚ್ಚು ಪದ್ಯಗಳನ್ನು ಬರೆದಿದ್ದಾರೆ. ಇವರು ೧೮ ಹಿಂದಿ ಕತೆಗಳು, ೧೯ ಇಂಗ್ಲಿಷ್ ಕತೆಗಳು ಹಾಗೂ ೬ ಮುಕ್ತ ಛಂದಸ್ಸಿನ ಕಥನ ಕಾವ್ಯಗಳನ್ನು ಬರೆದಿರುವರು.[೫೪]

## ೧೮. ಆನಂದಿ ಸದಾಶಿವರಾವ್

ಮಂಗಳೂರಿನ ಸುಪ್ರಸಿದ್ಧ ನ್ಯಾಯವಾದಿ ಶ್ರೀ ನರ್ಸಪ್ಪಯ್ಯ ಮತ್ತು ಶ್ರೀಮತಿ ಕಾವೇರಿಬಾಯಿ ಇವರ ಪ್ರಥಮ ಪುತ್ರಿಯಾದ ಆನಂದಿಯವರು ೧೯೨೯ರ ಜನವರಿ ೨೦ರಂದು ಜನಿಸಿದರು. ಬೆಸೆಂಟ್ ಬಾಲಿಕಾ ಪ್ರೌಢಶಾಲೆ ಮತ್ತು ಸರಕಾರಿ ಹೆಮ್ಮಕ್ಕಳ ಪ್ರೌಢಶಾಲೆಯಲ್ಲಿ ವಿದ್ಯಾಭ್ಯಾಸವನ್ನು ಪೂರೈಸಿದ ಇವರು ಮಂಗಳೂರಿನ ಸೈಂಟ್ ಆಗ್ನೇಸ್ ಕಾಲೇಜಿನಲ್ಲಿ ಉನ್ನತ ಶಿಕ್ಷಣವನ್ನು ಪಡೆದರು. ಇವರ ಕತೆಗಳು ಮತ್ತು ಲೇಖನಗಳು ಜನಪ್ರಗತಿ, ಕಥಾವಳಿ, ಪ್ರಜಾಮತ, ಉಷಾ, ಕರ್ಮವೀರ, ಪ್ರಜಾವಾಣಿ, ನವಭಾರತ, ಚಿತ್ರಗುಪ್ತ,

ಸಚೇತನ, ರಾಯಭಾರಿ, ಮುಂತಾದ ಪ್ರಮುಖ ಪತ್ರಿಕೆಗಳಲ್ಲಿ ಸುಮಾರು ಎರಡು ದಶಕಗಳ ಕಾಲ ಪ್ರಕಟವಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಂಗ್ಲ ಭಾಷೆಯಲ್ಲಿ ಕಾವ್ಯ ರಚನೆ ಮಾಡಿದ ಮಹಿಳೆಯರು ಕಾಣಸಿಗುವುದು ಅಪರೂಪ. ಆನಂದಿಯವರು ಅಮೇರಿಕಾದ 'ಪರ್ಲ್ ಎಸ್ ಬುಕ್' ಮತ್ತು ಇಂಗ್ಲೆಂಡಿನ ಡಾ. ಡ್ರಮಾರಿಯರ್ ಇವರಿಂದ ಪ್ರಭಾವಿತರಾಗಿ ಇಂಗ್ಲಿಷಿನಲ್ಲಿ 'ಎಕ್ಯೋಸ್ ಅಫ್ ಫ್ರೀಡಂ ಆಂಡ್ ಸೋನ್ಸ್ ಆಫ್ ಸೈಲೆನ್ಸ್' ಎಂಬ ಕಾವ್ಯಮಾಲೆಯನ್ನು ಬರೆದರು.[೫೫೯] ಸ್ನೇಹಸುಧೆ, ಅಪರ್ಣಾ, ಕಲಾವಿದೆ ಇವು ಇವರ ಪ್ರಕಟಿತ ಪುಸ್ತಕಗಳು.

## ೧೯. ಸುನಿತಾ ಶೆಟ್ಟಿ

೧೯೩೨ರಲ್ಲಿ ಮಂಗಳೂರು ತಾಲೂಕಿನ ಕಳವಾರು ಗ್ರಾಮದಲ್ಲಿ ಜನಿಸಿದ ಸುನೀತಾ ಶೆಟ್ಟಿಯವರು ಸುರತ್ಕಲ್ ವಿದ್ಯಾದಾಯಿನಿ ಹೈಸ್ಕೂಲಿಗೆ ಅಂದು ಏಕೈಕ ವಿದ್ಯಾರ್ಥಿನಿಯಾಗಿ, ಆ ಕಾಲದಲ್ಲಿ ಹುಡುಗರ ಜೊತೆ ಕಳವಾರಿನಿಂದ ಸುರತ್ಕಲ್ ತನಕ ಅಷ್ಟು ದೂರಕ್ಕೆ ನಡೆದುಕೊಂಡು ಹೋಗಿ ವಿದ್ಯೆ ಕಲಿತದ್ದು ನಿಜಕ್ಕೂ ಅಭಿಮಾನಪಡುವಂಥಹ ವಿಷಯವಾಗಿದೆ. ವರದಕ್ಷಿಣೆ ನೀಡದೆ ವಿವಾಹವಾಗುವುದಾಗಿ ಛಲತೊಟ್ಟು, ಪೆರಾರ ಮುಂಡಬೆಟ್ಟು ಮಹಾಬಲಶೆಟ್ಟಿಯವರನ್ನು ಬಾಳ ಸಂಗಾತಿಯನ್ನಾಗಿ ಮಾಡಿಕೊಂಡದ್ದು ದಿಟ್ಟ ಹೆಜ್ಜೆಯಾಗಿದೆ.[೫೬೦] ನಿನಾದ, ಅಂತರಗಂಗೆ, ಪಯಣ, ನನ್ನ ದೋಣಿ ನಿನ್ನ ತೀರ ಇವು ಕನ್ನಡ ಕವನ ಸಂಕಲನಗಳು. ಬಂಟರು-ಕೆಲವು ಅಧ್ಯಯನಗಳು, ಅರವತ್ತು ಕವಿತೆಗಳು ಇವರು ಸಂಪಾದಿಸಿದ ಎರಡು ಕನ್ನಡ ಕೃತಿಗಳು. ತುಳುವಿನಲ್ಲಿಯೂ ಸಾಹಿತ್ಯ ಕೃಷಿ ಮಾಡಿದ ಇವರು ಕಲಾ ತಪಸ್ವಿ ಕೆ.ಕೆ.ಹೆಬ್ಬಾರ್ (ವ್ಯಕ್ತಿ ಚಿತ್ರಣ) 'ಪದಪನ್ ಕಣ್ಣಾರೋ' ಎಂಬ ಭಾವಗೀತೆಗಳ ಸಂಗ್ರಹಗಳು ತುಳುವಿನಲ್ಲಿ ಹೊರತಂದ ಇನ್ನೆರಡು ಕೃತಿಗಳು.

## ೨೦. ಗೀತಾ ಕುಲಕರ್ಣಿ

೧೯೨೭ರಲ್ಲಿ ಕೆ.ಟಿ ಆಳ್ವಾ ಮತ್ತು ಕಮಲಾ ಆಳ್ವ ದಂಪತಿಗಳ ಪುತ್ರಿಯಾಗಿ ಜುಲೈ ೪ರಂದು ಮುಂಬಯಿಯಲ್ಲಿ ಜನಿಸಿದ ಗೀತಾ ಕುಲಕರ್ಣಿಯವರು ಮಂಗಳೂರು ಸಮೀಪದ ಪಾವೂರಿನವರು. ಕತೆಗಾರ್ತಿಯಾಗಿ ಅವರು ಬರೆದ ಮೊದಲ ಕಥೆ 'ಅಂದು ಇಂದು'. ಇವರು ಲೇಖನಿ ಕೈಯಾಡಿಸಿದ ಸಾಹಿತ್ಯ ಬಗೆಗಳಲ್ಲಿ ನಾಟಕ, ಸಣ್ಣ ಕಥೆ, ಮಕ್ಕಳ ಸಾಹಿತ್ಯ, ಹಾಸ್ಯ ಮತ್ತು ಜೀವನ ಚರಿತ್ರೆ ಇವುಗಳು ಮುಖ್ಯವಾಗಿದೆ. ಇವರು ಬರೆದ ಒಟ್ಟು ಕೃತಿಗಳಲ್ಲಿ ಸ್ವಪ್ನ ಮಂದಿರ, ಶೋಭನಾ, ದೀಪ ಮಿಂಚಿತು, ನೂಲ ಏಣಿ, ತೇಲಿ ಹೋದ ಮೋಡ ಮುಂತಾದುವು ಇವರ ಕಾದಂಬರಿಗಳು. ಹಾರುವ ಕಂಬಳಿ, ಏಳು ಕನ್ನಿಕೆಯವರು, ಹೂವಿನ ಮನೆ ಮುಂತಾದ ಮಕ್ಕಳ ಕೃತಿಗಳನ್ನು ರಚಿಸಿದ್ದಾರೆ. ಇವರು ೨೫ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ತಿಮ್ಮಪ್ಪ ನಾಯಕ, ಹುರಿಗಾಳು, ಮೂರು ನಾಟಕಗಳು, ತೇಲಿ ಹೋದ ಮೋಡಗಳು, ಹಚ್ಚ ಹಸುರಿನ ಮಲೇಷಿಯ

ಮುಂತಾದುವು ಗೀತಾರವರ ರಚನೆಗಳು. ಇವರು ಸ್ತ್ರೀಯರ ಪರವಾಗಿ, ಪ್ರಗತಿಗಾಗಿ, ಪ್ರತಿಭಟನೆಯ ದನಿ ಎತ್ತುವ ಮೂಲಕ ಮಹಿಳೆಯ ಸ್ಥಾನಮಾನ, ವರದಕ್ಷಿಣೆ, ವಿಧವಾ ವಿವಾಹ ಇವುಗಳನ್ನು ತಮ್ಮ ಕೃತಿಗಳಲ್ಲಿ ವಿರಚಿಸಿ ಆ ಮೂಲಕ ಜಾಗೃತಿ ಮೂಡಿಸಿದರು.

## ೨೧. ಲಕ್ಷ್ಮಿ ಕುಂಜತ್ತೂರು

೧೯೩೧ರಲ್ಲಿ ಬೀರ ಬೆಳ್ಚಪ್ಪಾಡ ಮತ್ತು ಆರ್ಚ ದಂಪತಿಗಳ ಮಗಳಾಗಿ ಜನಿಸಿದ ಲಕ್ಷ್ಮಿ ಕುಂಜತ್ತೂರು ಇವರು ಸ್ವಸಾಮರ್ಥ್ಯದಿಂದ ಸಾಹಿತ್ಯ ಕೃಷಿ ನಡೆಸಿದರು. ಕರಾವಳಿಯ ಬೋವ್ ಜನಾಂಗದಲ್ಲಿ ಹುಟ್ಟಿ ಬೆಳೆದ ಇವರು ಸಮಾಜದ ಕೆಳವರ್ಗದ ಸ್ತ್ರೀಯರು ಸಾಹಿತ್ಯ ಪರಂಪರೆಯಿಂದ ವಂಚಿತರಾಗಿದ್ದ ಕಾಲಘಟ್ಟದಲ್ಲಿ ಸಾಹಿತ್ಯಾಭಿರುಚಿ ಬೆಳೆಸಿಕೊಂಡರು. ಕಷ್ಟ ಕಾರ್ಪಣ್ಯದ ಬಾಲ್ಯ ಜೀವನದಿಂದ ಹೆಚ್ಚಿನ ವಿದ್ಯಾಭ್ಯಾಸ ದೊರಕಲಿಲ್ಲ. ಬದುಕಿನಲ್ಲಿ ಮಾಗಿ ಹಣ್ಣಾಗಿರುವ ಅವರ ಸ್ನೇಹ, ಪ್ರೀತಿ ಅನನ್ಯವಾದದ್ದು. 'ಭವಭೂತಿಯ ಉತ್ತರ ರಾಮ ಚರಿತ'ದಂತಹ ಪ್ರೌಢ ಕೃತಿಗಳ ರಚನೆ ಒಂದೆಡೆಯಾದರೆ, ಪುಟಾಣಿ ಮಕ್ಕಳಿಗೆ ಕತೆ ಕವನಗಳ 'ಪೆಪ್ಪರ್ ಮಿಂಟ್'ನ್ನು ಹಂಚುವ ಶಿಶು ಸಾಹಿತ್ಯ ಇನ್ನೊಂದೆಡೆ. ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಕರ್ಮಯೋಗಿನಿಯಂತೆ ಸಾಹಿತ್ಯ ಕ್ರಿಯೆಯಲ್ಲಿ ತೊಡಗಿಕೊಂಡಿರುವ ಲಕ್ಷ್ಮಿಯವರ ವ್ಯಕ್ತಿತ್ವ ಮತ್ತು ಸ್ನೇಹ ಎರಡೂ ವಿಶಿಷ್ಟವಾದುದು. ಅಬಲೆ, ಅಮರ ಸ್ವಾತಂತ್ರ್ಯ, ಇಕ್ಯ, ಮೊದಲಾದ ಕವನಗಳನ್ನು, ಪ್ರಗತಿ ಪಥವೆಂಬ ಕಾದಂಬರಿ, ಬೀಬಿನಾಚಿಯಾರ್ ಎಂಬ ನಾಟಕ ಹಾಗೂ ಗದ್ಯ ಕಥನಗಳನ್ನು ಇವರು ರಚಿಸಿರುವರು.[೫೭]

## ೨೨. ಪದ್ಮಾ ಶೆಣೈ

ಕಥನ ಸಾಹಿತ್ಯದ ಮೂಲಕ ಅಪಾರ ಓದುಗರವರ್ಗವನ್ನು ಸೃಷ್ಟಿಸಿದ ಕನ್ನಡದ ಜನಪ್ರಿಯ ಲೇಖಕಿಯರಲ್ಲಿ ಪದ್ಮಾ ಶೆಣೈ ಕೂಡಾ ಒಬ್ಬರು. ೧೯೩೩, ನವೆಂಬರ್ ೩ ರಂದು ಮದರಾಸಿನಲ್ಲಿ ಪದ್ಮಾ ಶೆಣೈಯವರು ಜನಿಸಿದರು. ತಂದೆ ರಾಮ ಬಾಳಿಗ, ತಾಯಿ ಲಕ್ಷ್ಮೀದೇವಿ. ಪದ್ಮಾ ಶೆಣೈಯವರು ಮಂಗಳೂರಿನ ಕೆನರಾ ಹೆಣ್ಮಕ್ಕಳ ಶಾಲೆಯಲ್ಲಿ ೬ನೇ ತರಗತಿಯವರೆಗೆ ಓದಿ ತದನಂತರ ಬೊಂಬಾಯಿ, ಬ್ರಹ್ಮಾವರ ಹಾಗೂ ಕಟ್ಪಾಡಿಯಲ್ಲಿ ಹೈಸೂಲ್ ಶಿಕ್ಷಣ ಪೂರೈಸಿದರು. ಇವರ ತಂದೆ ಸರಕಾರಿ ಸೇವೆಯಲ್ಲಿದ್ದುದರಿಂದ ಹಲವು ಕಡೆಗಳಲ್ಲಿ ವಿದ್ಯಾಭ್ಯಾಸ ಮುಂದುವರಿಸಬೇಕಾಯಿತು. ಸಂಸ್ಕೃತ ಮತ್ತು ಇಂಗ್ಲಿಷ್ ಪಾಂಡಿತ್ಯವಿದ್ದ ಸಾತ್ವಿಕ ಸ್ವಭಾವದವರಾದ ಅವರ ತಂದೆಯವರಿಂದ ಪ್ರಭಾವಿತರಾದ ಪದ್ಮಾ ಶೆಣೈಯವರಿಗೆ ಸಾಹಿತ್ಯದ ಒಲವು ಮೂಡಲು ಕಾರಣವಾಯಿತು. ಇವರು ತಮ್ಮ ಬಿಡುವಿನ ವೇಳೆಯಲ್ಲಿ ಕತೆ ಕಾದಂಬರಿಗಳಲ್ಲಿ ತಮ್ಮ ಒಲವನ್ನು ಬೆಳೆಸಿಕೊಂಡರು. ಮುಂದೆ ಬಂಕಿಮಚಂದ್ರ, ಶರಶ್ಚಂದ್ರ, ಶಿವರಾಮ ಕಾರಂತ, ಅ.ನ.ಕೃ, ಕೃಷ್ಣಮೂರ್ತಿ ಪುರಾಣಿಕ, ಬಸವರಾಜ ಕಟ್ಟೀಮನಿ ಮೊದಲಾದ ಪ್ರಸಿದ್ಧ ಬರಹಗಾರರ ಕಾದಂಬರಿಗಳಲ್ಲಿ ಆಸಕ್ತಿ ತಾಳಿದರು. ತಂದೆಯವರ ಪ್ರಭಾವದಲ್ಲಿ ಆಧ್ಯಾತ್ಮಿಕ ಗ್ರಂಥಗಳ, ಇಂಗ್ಲಿಷ್ ಕಾದಂಬರಿಗಳ ಓದು ಕೂಡಾ

ಜೊತೆಜೊತೆಯಲ್ಲಿ ಸಾಗಿತು. ಹೀಗೆ ತಮ್ಮ ಬಾಲ್ಯದ ದಿನಗಳನ್ನು ಬೇರೆಬೇರೆ ಊರುಗಳಲ್ಲಿ ಕಳೆದ ಪದ್ಮಾ ಮೆಟ್ರಿಕ್ ಮುಗಿಸಿ ನೆಲೆ ನಿಂತದ್ದು ಉಡುಪಿಯಲ್ಲಿ. ಒಟ್ಟು ೩೦ ಹೊಸ್ತಿಕೆಗಳನ್ನು ಹೊರತಂದಿರುವ ಇವರು ೧೨ ಕಾದಂಬರಿಗಳನ್ನು ರಚಿಸಿದ್ದಾರೆ. 'ರಸವಿರಸ' ಎಂಬುದು ಇವರ ಮೊದಲ ಕಾದಂಬರಿ. 'ರಸವಿರಸ' ಮತ್ತು 'ಸಂಧಿಕಾಲ' ಸುಶಿಕ್ಷಿತ ಯುವತಿಯರ ಬದುಕಿನ ಚಿತ್ರಣವಿರುವ ಕಾದಂಬರಿಗಳು. ಇವರ ಮೊದಲನೆಯ ಕಾದಂಬರಿಗೆ ಅಂದಿನ ಮೈಸೂರು ಸರಕಾರದ ರಾಜ್ಯ ಪ್ರಶಸ್ತಿ ದೊರಕಿದೆ.

ಇವರು ರಚಿಸಿರುವ 'ಅನಿಶ್ಚಿತ' ಎಂಬ ಕಾದಂಬರಿ ಸಿನಿಮಾ ಪ್ರದರ್ಶನವನ್ನು ಕಂಡಿದೆ. 'ಬಲಿಪಶುಗಳು' ಎಂಬ ಕತೆಯಲ್ಲಿ ಸ್ತ್ರೀ ಸ್ವಾತಂತ್ರ್ಯದ ಕಲ್ಪನೆಗಳು ಸಮಕಾಲೀನ ಸಾಮಾಜಿಕ ಸಂದರ್ಭಗಳಲ್ಲಿ ಹೆಣ್ಣಿನ ಬದುಕನ್ನು ಸುಧಾರಿಸುವ ನಿಟ್ಟಿನಲ್ಲಿ ಹೇಗೆ ಸಹಕಾರಿಯಾಗಬಲ್ಲುದೆಂಬುವುದನ್ನು ನಿರೂಪಿಸಿದ್ದಾರೆ. ಬ್ಯಾಂಕಿಂಗ್ ಉದ್ದಿಮೆಯಲ್ಲಿ ಉದ್ಯೋಗಾವಕಾಶಗಳು ತೆರದುಕೊಂಡ ಕಾಲದಲ್ಲಿ ಅನಿರೀಕ್ಷಿತವಾಗಿ ಒದಗಿದ ಸದವಕಾಶವನ್ನು ಬಳಸಿ ಪದ್ಮಾಶೆಣೈಯವರೂ ಕೂಡಾ ಸಿಂಡಿಕೇಟ್ ಬ್ಯಾಂಕ್ (ಉಡುಪಿ ಶಾಖೆ) ಯಲ್ಲಿ ನೌಕರಿಗೆ ಸೇರಿದರು. ಆದರೆ ಕೇವಲ ೪ ವರ್ಷಗಳಿಗೆ ಸೀಮಿತವಾದ ಆ ಬದುಕು, ಮದುವೆ ಪ್ರಸ್ತಾಪದೊಂದಿಗೆ ಕೊನೆಗೊಂಡಿತು. ೨೦ನೇ ವರ್ಷಕ್ಕೆ ವಿವಾಹವಾದ ನಂತರ ಬ್ಯಾಂಕ್ ಕೆಲಸಕ್ಕೆ ರಾಜೀನಾಮೆ ಸಲ್ಲಿಸಿದರು. ಮಂಗಳೂರಿನ ಪ್ರಖ್ಯಾತ ವ್ಯಾಪಾರಿ ಕುಟುಂಬಿಕರಾದ ಯು. ಆರ್. ಶೆಣೈಯವರ ಸುಪುತ್ರರಾದ ಮೋಹನ್ ಶೆಣೈಯವರೊಂದಿಗೆ ವಿವಾಹವಾದ ನಂತರ, ಪತಿಯ ಪ್ರಭಾವ ಜೊತೆಗೂಡಿದುದರಿಂದ ಸಾಹಿತ್ಯದತ್ತ ಒಲವು ಹೆಚ್ಚಿತು. ಪದ್ಮಾ ಶೆಣೈಯವರ ಮೇಲೆ ಅವರ ಅಜ್ಜಿ ಪದ್ಮಾವತಿ ಬಹಳ ತುಂಬಾ ಪ್ರಭಾವ ಬೀರಿದ್ದಾರೆ. ಕಟ್ಟಾ ಗಾಂಧೀವಾದಿಯಾಗಿದ್ದ ಪದ್ಮಾವತಿಯವರು 'ಹರಿಜನ ಪತ್ರಿಕೆ'ಯನ್ನು ತರಿಸುತ್ತಿದ್ದರು ಮಾತ್ರವಲ್ಲದೆ ಹರಿಜನ ಪತ್ರಿಕೆಯ ವಿಚಾರವನ್ನು ಮೊಮ್ಮೊಗಳೊಂದಿಗೆ ಹಂಚಿಕೊಳ್ಳುತ್ತಿದ್ದರು.

ಗಾಂಧೀಜಿಯವರನ್ನು 'ಮಹಾತ್ಮಾ' ಎಂದು ಕರೆಯುತ್ತಿದ್ದ ಪದ್ಮಾವತಿ ಬಾಳಿಗರು ಖದ್ದರ್ (ಖಾದಿ) ಧರಿಸುತ್ತಿದ್ದರು. ಸ್ವತ: ಚರಕ ಮತ್ತು ತಕಲಿಯಿಂದ ನೂಲುತ್ತಿದ್ದರು. ಗಾಂಧೀಜಿ ಸತ್ಯಾಗ್ರಹ ಪ್ರಾರಂಭಿಸಿದಾಗ ತಾನೂ ಉಪವಾಸ ಆಚರಿಸುತ್ತಿದ್ದರು ಎಂದು ಪದ್ಮಾ ಶೆಣೈಯವರು ನೆನಪಿಸುತ್ತಾರೆ. ಇವರು ರಾತ್ರಿ ಹೊತ್ತು ಊಟ ತ್ಯಜಿಸುವಷ್ಟು ಗಾಂಧೀಜಿಯವರಿಂದ ಪ್ರಭಾವಿತರಾಗಿದ್ದರು. ಪದ್ಮಾವತಿ ಬಾಳಿಗರು ತರಗತಿಗೆ ಹೋಗಿ ಪಾಠ ಪ್ರವಚನಗಳನ್ನು ಕಲಿತುಕೊಳ್ಳದಿದ್ದರೂ, ಸ್ವತಃ ಮನೆಯಲ್ಲಿಯೇ ಇಂಗ್ಲಿಷ್ ಓದುವ ಸಾಮರ್ಥ್ಯ ಹೊಂದಿ ನಾಟಕಗಳನ್ನು ಓದುತ್ತಿದ್ದರು. ಪದ್ಮಾವತಿ ಬಾಳಿಗರು ತಮ್ಮ ಹೆಣ್ಣು ಮಕ್ಕಳಾದ ಆನಂದಿಪ್ರಭು ಮತ್ತು ಕೊಚ್ಚಿಕಾರ್ ಪದ್ಮಾವತಿಯವರ ಮೇಲೂ ಪ್ರಭಾವ ಬೀರಿದ್ದರು. ಪದ್ಮಾಶೆಣೈಯವರ ಅತ್ತೆಯವರಾದ ಲಲಿತಾಶೆಣೈ ಕೂಡಾ ಸಾತ್ವಿಕ ಮನೋಭಾವದವರಾಗಿದ್ದು ಸ್ತ್ರೀಪರ ಕಾಳಜಿ ಹೊಂದಿದವರಾಗಿದ್ದರು. ಪದ್ಮಾಶೆಣೈಯವರು ರಾಜ್ಯ ಸರಕಾರದಿಂದ ಪ್ರಶಸ್ತಿ ಪಡೆದ 'ರಸವಿರಸ' ಅಲ್ಲದೆ ಸಂಧಿಕಾಲ, ಕೊನೆಯ ನಿರ್ಧಾರ, ಜಯಶ್ರೀ, ಅನಿಶ್ಚಿತ

ಇತ್ಯಾದಿ ೮ ಕಾದಂಬರಿಗಳನ್ನು, ದೂರದ ಆಸೆ ಮುಂತಾದ ಮೂರು ಸಣ್ಣ ಕಥಾ ಸಂಗ್ರಹಗಳನ್ನೂ, ಎರಡು ನೀಳ್ಗತೆಗಳನ್ನೂ ಹಲವಾರು ಮಕ್ಕಳ ಸಾಹಿತ್ಯ ಕೃತಿಗಳನ್ನು, ಆಧ್ಯಾತ್ಮ ಕೃತಿ ಆನಂದೋಪನಿಷತ್ತು ಶಂಕರಾಚಾರ್ಯರನ್ನು ಕುರಿತ ಜೀವನ ಚರಿತ್ರೆ, ಭಾರತೀಯ ಸ್ತ್ರೀ, ಸಂಸ್ಕೃತಿ ಮತ್ತು ಸಮಾಜ ಮೊದಲಾದ ಕೃತಿಗಳನ್ನು ರಚಿಸಿದ್ದಾರೆ.[೫೮]

## ೨೩. ಸುಮತಿ ಪಾಂಗಾಳ

೧೯೩೩ರ ಅಕ್ಟೋಬರ್ ೧೩ರಂದು ದಕ್ಷಿಣ ಕನ್ನಡದ ಕರಾವಳಿಯ ಪುಟ್ಟ ಹಳ್ಳಿಯಾದ ಹೆಜಮಾಡಿಯಲ್ಲಿ ಇವರ ಜನನವಾಯಿತು. ಈಗ ಕೇರಳ ರಾಜ್ಯಕ್ಕೆ ಸೇರಿರುವ ಅಂದಿನ ದಕ್ಷಿಣ ಕನ್ನಡದ ಭಾಗವೇ ಆಗಿದ್ದ ಕಾಸರಗೋಡಿನಲ್ಲಿ ಅವರ ತಂದೆ ಶ್ರೀ ಪದ್ಮನಾಭರಾಯರು ಹೆಸರಾಂತ ನ್ಯಾಯವಾದಿಗಳಾಗಿದ್ದರು. ಇವರ ತಾಯಿ ಕಾಶೀ ಅಮ್ಮನವರು. ಪ್ರಾರಂಭದಲ್ಲಿ ಕಾಸರಗೋಡಿನ ಬಾಸೆಲ್ ಮಿಷನ್ ಶಾಲೆಯಲ್ಲಿ ಶಿಕ್ಷಣವನ್ನು ಪಡೆದ ಇವರು ಚಿಕ್ಕಂದಿನಿಂದಲೇ ತಂದೆಯನ್ನು ಕಳೆದುಕೊಳ್ಳಬೇಕಾಯಿತು. ಪತಿಯ ಮರಣದ ನಂತರ ಕಾಶೀ ಅಮ್ಮನವರಿಗೆ ಒತ್ತಾಯಪೂರ್ವಕವಾಗಿ ಕೆಂಪು ಸೀರೆ ಉಡಿಸಿ ಕೇಶ ಮುಂಡನ ಮಾಡಲಾಯಿತು. 'ನನ್ನ ತಾಯಿಯ ಭೀಕರ ಚಿತ್ರ ಇವತ್ತಿಗೂ ಆತಂಕವನ್ನುಂಟುಮಾಡುತ್ತಿದೆ' ಎನ್ನುತ್ತಾರೆ ಸುಮತಿಯವರು.

ತಂದೆಯ ಮರಣದ ನಂತರ ಮಂಗಳೂರಿಗೆ ಬಂದ ಕುಟುಂಬದ ಜವಾಬ್ದಾರಿಯನ್ನು ಸೋದರ ಮಾವ ವಹಿಸಿಕೊಂಡರು. ಮಂಗಳೂರಿನ ಮಿಷನ್ ಶಾಲೆಯಲ್ಲಿ ಶಿಕ್ಷಣವನ್ನು ಮುಂದುವರಿಸಿ ನಂತರ ಸರಕಾರಿ ಕಾಲೇಜಿನ ಇಂಗ್ಲಿಷ್ ಪ್ರಾಧ್ಯಾಪಕರಾದ ಶ್ರೀ ಸೇತುಮಾಧವರೊಂದಿಗೆ ವಿವಾಹವಾಯಿತು. ಚಿಕ್ಕಂದಿನಿಂದಲೇ ಮನಸ್ಸಿನಲ್ಲಿ ಬೇರು ಬಿಟ್ಟಿದ್ದ ನಾಟಕದ ಗೀಳು ಮುಂದೆ ಇವರಿಗೆ ಮಂಗಳೂರಿನ 'ಮಹಿಳಾಸಭಾ' ಇದರ ಹಲವಾರು ಚಟುವಟಿಕೆಗಳಲ್ಲಿ ಭಾಗವಹಿಸಲು ಅವಕಾಶ ನೀಡಿತು. ಹೀಗೆ ಹಲವು ಯಶಸ್ವೀ ನಾಟಕಗಳನ್ನು ಪ್ರದರ್ಶಿಸಿ ಇವರು ಸೈ ಎನಿಸಿಕೊಂಡಿರುವರು.[೫೯]

## ೨೪. ಡಾ. ಸಬಿತಾ ಮರಕಿಣಿ

ಮಂಜೇಶ್ವರ ತಾಲೂಕಿನ ಕುಂಬಳೆ ಸಮೀಪದ ನಾರಾಯಣ ಮಂಗಲದ ಹಿಳ್ಳೆಮನೆಯಲ್ಲಿ ಮಹಾಲಿಂಗ ಭಟ್ಟ ಮತ್ತು ಪರಮೇಶ್ವರಿ ಅಮ್ಮ ದಂಪತಿಯ ಮಗಳಾಗಿ ೧೯೩೪ರಲ್ಲಿ ಸಬಿತಾ ಮರಕಿಣಿಯವರು ಜನಿಸಿದರು. ವಿಟ್ಲದಲ್ಲಿ ಹೈಸ್ಕೂಲು ವಿದ್ಯಾಭ್ಯಾಸ ಮುಗಿಸಿ, ಮಂಗಳೂರಿನ ಸಂತ ಆಗ್ನೇಸ್ ಕಾಲೇಜಿನಲ್ಲಿ ಇಂಟರ್ಮೀಡಿಯೇಟ್ ಕಲಿಕೆಗಾಗಿ ಸೇರಿದ ಸಬಿತಾರವರು ಹಿರಿಯ ಸಾಹಿತಿ ಕಡೆಗೋಡ್ಲು ಶಂಕರಭಟ್ಟರ ಅಚ್ಚುಮೆಚ್ಚಿನ ಶಿಷ್ಯೆಯಾಗಿದ್ದರು. ನಂತರ ಮೈಸೂರಿನಲ್ಲಿ ವೈದ್ಯಕೀಯ ಶಿಕ್ಷಣವನ್ನು ಮುಗಿಸಿ ಡಾ. ಸಬಿತಾ ಮರಕಿಣಿಯವರಾಗಿ ಜನಪ್ರಿಯರಾದರು. ಅನುವಾದದ ಕೆಲಸವನ್ನು ಪ್ರಾರಂಭಿಸಿದ ಇವರು ಸುಪ್ರಸಿದ್ಧ ಬರಹಗಾರ ರಸ್ಕಿನ್ ಬಾಂಡ್ ಇವರ ಪ್ರಸಿದ್ಧದ ರಚನೆಗಳನ್ನು ಅನುವಾದಿಸಿ, ಅವರಿಂದ ಅನುಮತಿಯನ್ನು

ಪಡೆದದ್ದು, ಅಂದಿನ ಜನಪ್ರಿಯ ಪತ್ರಿಕೆಗಳಾದ 'ಪ್ರಪಂಚ'ದಲ್ಲಿ ಪ್ರಕಟಗೊಂಡು ಜನಪ್ರಿಯವೆನಿಸಿದ್ದವು. ವೈದ್ಯಕೀಯ ವಿಜ್ಞಾನದ ಕೆಲವು ಲೇಖನಗಳು, ಮಹಿಳೆಯರ ಹಾಗೂ ಮಕ್ಕಳ ಆರೋಗ್ಯದ ಬಗೆಗಿನ ಕೆಲವು ಲೇಖನಗಳನ್ನೂ ಕೃತಿಗಳನ್ನೂ ಬರೆದರು.[೬೦]

### ೨೫. ಇಂದಿರಾ ಹಾಲಂಬಿ

ಉಡುಪಿಯ ಪಡುಮುನ್ನೂರು ಗ್ರಾಮದಲ್ಲಿ ೧೯೩೪ರಲ್ಲಿ ಶ್ರೀನಿವಾಸ ಕಂಗಿನಾಯರು ಮತ್ತು ರಾಜಕ್ಕನವರ ಮಗಳಾಗಿ ಜನಿಸಿದರು. ಕಡಿಯಾಳಿಯ ಪ್ರೌಢ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಣ ಪಡೆದ ಇವರು ನಂತರದಲ್ಲಿ ಟ್ರೈನಿಂಗ್ ಶಾಲೆಯಲ್ಲಿ ಶಿಕ್ಷಕ ತರಬೇತಿಯನ್ನು ಪಡೆದರು. ಅಧ್ಯಾಪನ ವೃತ್ತಿಯಲ್ಲಿ ತೊಡಗಿಸಿಕೊಂಡ ಇವರ ಬಹುತೇಕ ಕತೆಗಳು ವಿಚಾರ ಶ್ರೀಮಂತಿಕೆಯಿಂದ ಮೆರೆದ ಬರಹಗಳಾಗಿವೆ. ಮಾರ್ದನಿ ಮೊಳಗಿದೆ - ೩೦ ಆಯ್ದ ಕತೆಗಳ ಸಂಕಲನದಲ್ಲಿ ಸಂವೇದನಾತ್ಮಕ ಅನುಭೂತಿಗಳು ಧ್ವನಿಸಿ ಬಂದಿದೆ. 'ನೆನೆಪಿನಲ್ಲಿ ಹೊಳೆದ ಬಳ್ಳಿ' ಎಂಬ ಕೃತಿಯು ಇವರ ಆತ್ಮಚರಿತ್ರೆಯ ಪೂರ್ವಬಾಹದಂತಿದ್ದ ಬದುಕಿನ ಸುಂದರ ಚಿತ್ರಣವಾಗಿಯೂ ಗಮನ ಸೆಳೆದಿದೆ. ಕಥಾವೃಂದ, ಹೊಸಬೆಳಕು, ಜನಪದ ಹನ್ನುಚಿ, ಮಾರ್ದನಿಗಳು, ವಜ್ರ ಪರಿಸರ, ಮಾರ್ದನಿ ಮೊಳಗಿದೆ (ಕಥಾ ಸಂಗ್ರಹಗಳು), ಅಚಂಚಲಾ, ಆಶೋತ್ತರ, ನೆನಪಿನಲ್ಲಿ ಹೊಳೆದ ಬಳ್ಳಿ (ಕಾದಂಬರಿಗಳು) ಮಾತ್ರವಲ್ಲದೆ ಕವನ ಸಂಗ್ರಹಗಳು, ಚಿಂತನ ಬರಹಗಳು, ಮಕ್ಕಳ ನಾಟಕಗಳು, ಸಾಮಾಜಿಕ ನಾಟಕಗಳು, ಸಂಪಾದಿತ ಕೃತಿಗಳನ್ನು ಇವರು ರಚಿಸಿರುವರು.[೬೧]

### ೨೬. ಗ್ಲೇಡಿಸ್ ರೇಗೋ

ಮಂಗಳೂರಿನ ಜೋಕಿಂ ಸಿಕ್ವೇರಾ ಮತ್ತು ಟ್ರೀಸಾ ಸಲ್ಡಾನಾ ಇವರ ಸುಪುತ್ರಿಯಾದ ಗ್ಲೇಡ್ಸ್ ರೇಗೋ ಇವರು ೧೯೩೫ರಲ್ಲಿ ಜನಿಸಿದರು. ಅದುರೋ ಗೋಟೋ, ತುಟ್ಟೆಲ್ಲಿಂ ಕಾಳ್ಜಾಂ ಕಾಳ್ಜಾಚೋ ರಾಯ್, ಕಾಳ್ಜಾತ್ಲೋ ಮೋಗ್ ಮುಂತಾದುವು. ಕವನ ಸಂಕಲನ ಸುರ್ಯಾ ಕಿರ್ಲಾಂ, ಜೀವನ ಚರಿತ್ರೆ- ಶ್ರೀ ಎ.ಟಿ ಲೋಬೋ, ಶ್ರೀ ಲುವಿಸ್ ಮಸ್ಕರೇಞಸ್, ಕೊಂಕಣಿ ನೆಮಳಿಂ ಜಳ್ಳಿವಾತ್ ಮೊದಲಾದುವು ಇವರ ಪ್ರಕಟಿತ ಲೇಖನಗಳಾಗಿವೆ.[೬೨]

### ೨೭. ಸಾರಾ ಅಬೂಬಕ್ಕರ್

ವಕೀಲರಾದ ಅಹಮ್ಮದ್ ಪಿ ಮತ್ತು ಜೈನಾಬಿಯವರ ಮಗಳಾಗಿ ೧೯೩೬ ಜೂನ್ ೩೦ರಂದು ಕಾಸರಗೋಡಿನ ಚಂದ್ರಗಿರಿ ನದಿಯ ದಂಡೆಯಲ್ಲಿರುವ, ಚಮನಾಡು ಗ್ರಾಮದಲ್ಲಿ ಸಾರಾರವರು ಜನಿಸಿದರು. ತಂದೆಯವರ ಪ್ರೋತ್ಸಾಹದಿಂದಾಗಿ ಎಸ್.ಎಸ್.ಎಲ್.ಸಿ ವರೆಗೆ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಸಾರಾ ಭಾರತದ ಮುಸ್ಲಿಂ ಮಹಿಳೆಯರ ನಿರಾಶೆಗಳಿಗೆ ಧ್ವನಿಯಾದರು. ಓದುವ ಹವ್ಯಾಸ ಅವರಲ್ಲಿದ್ದುದರಿಂದ

ಮುಂದೆ ಬರವಣಿಗೆಯಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಯಿತು. ಗಡಿನಾಡು ಕಾಸರಗೋಡಿನಲ್ಲಿ ಹುಟ್ಟಿದ ಲೇಖಕಿಯಾದ ಸಾರಾ ಮುಸ್ಲಿಂ ಮಹಿಳೆಯರ ಬದುಕನ್ನು ಕಾದಂಬರಿಯಲ್ಲಿ ಅನಾವರಣಗೊಳಿಸಿದ್ದಾರೆ. ಇವರು ಮಧ್ಯವಯಸ್ಸಿನಲ್ಲಿ ಬರವಣಿಗೆಯಲ್ಲಿ ತೊಡಗಿಸಿಕೊಂಡರು. ಅವರ ಬಾಲ್ಯದ ಮತ್ತು ಯೌವನದ ಜೀವಾನುಭವಗಳು ಮುಸ್ಲಿಂ ಸಮಾಜದ (ಮಾಪಿಳ್ಳೆಗಳ) ಸ್ತ್ರೀಯರ ಬದುಕು ಕೇಂದ್ರವಾಗಿ ಬರಹಗಳಲ್ಲಿ ಕಾಣಿಸಿಕೊಳ್ಳುತ್ತದೆ.

ಸಾರಾರವರು ಹೇಳುವಂತೆ 'ಎಸ್.ಎಸ್.ಎಲ್.ಸಿ ಪರೀಕ್ಷೆಯ ಫಲಿತಾಂಶ ಹೊರ ಬೀಳುವ ಮೊದಲೇ ಮದುವೆಯಾಯಿತು. ಗಂಡ ವಿದ್ಯಾವಂತನಾದರೆ ಅತನಿಗೆ ಧರ್ಮಾಂಧತೆ ಇರಲಾರದು ಮತ್ತು ಘೋಷ ಹಾಕಬೇಕೆಂದು ಪೀಡಿಸಲಾರನೆಂದುಕೊಂಡಿದ್ದೆ. ಆದರೆ ಮದುವೆಯ ಮರುದಿನ ಪ್ರಥಮಬಾರಿ ಗಂಡನ, ಮನೆಗೆ ಹೋಗಬೇಕಾದರೆ ಬುರ್ಕಾ ತೊಡಿಸಿಯೇ ನನ್ನನ್ನು ಕರೆದೊಯ್ದರು! ನಮ್ಮೂರಿನಲ್ಲಿ ಬುರ್ಕಾದ ಹಾವಳಿ ಅಷ್ಟೊಂದು ಇಲ್ಲವಾದರೂ ಮಂಗಳೂರಿನಲ್ಲಿ ಆಗ ಹತ್ತು ವರ್ಷ ಪ್ರಾಯ ದಾಟಿದ ಹೆಣ್ಣು ಮಕ್ಕಳು ಬುರ್ಕಾ ಹಾಕುವುದು ಕಡ್ಡಾಯವಾಗಿತ್ತು. ನನ್ನ ಅತ್ತೆಯ ಮನೆ ಸುಮಾರು ನಲವತ್ತಕ್ಕಿಂತ ಮೇಲ್ಪಟ್ಟು ಜನರಿದ್ದ ಅವಿಭಕ್ತ ಕುಟುಂಬವಾಗಿತ್ತು'.

ಇವರ ಕಾದಂಬರಿಯಾದ 'ಚಂದ್ರಗಿರಿಯ ತೀರದಲ್ಲಿ' ಇದು ಮೊದಲು ಪ್ರಕಟಗೊಂಡು, ನಂತರದಲ್ಲಿ 'ಲಂಕೇಶ' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಖ್ಯಾತಿ ಗಳಿಸಿತು. ಇವರು ರಚಿಸಿದ 'ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು' ಎನ್ನುವ ಆತ್ಮ ವೃತ್ತಾಂತ ವೈಶಿಷ್ಟ್ಯಪೂರ್ಣವಾಗಿದೆ. ಸಾರಾರವರು 'ಸಹನ', 'ವಜ್ರಗಳು', 'ಕದನ ವಿರಾಮ', 'ಸುಳಿಯಲ್ಲಿ ಸಿಕ್ಕವರು' ಮೊದಲಾದ ಕಾದಂಬರಿಗಳನ್ನು, 'ಚಪ್ಪಲಿಗಳು' 'ತಯನಾ' ಮತ್ತು ಇತರ ಕಥೆಗಳಾದ 'ಅರ್ಧ ರಾತ್ರಿಯ ಕನಸುಗಳು' ಎಂಬ ಕಥಾ ಸಂಕಲನವನ್ನೂ ರಚಿಸಿದ್ದಾರೆ. 'ಮನೋಮಿ' 'ಇನ್ನೂ ನಿದ್ರಿಸುವೆ' ಮಲಯಾಳಂ ಭಾಷೆಯಿಂದ ಅನುವಾದಿಸಿದ ಕೃತಿಗಳಿವೆ.

ಚಂದ್ರಗಿರಿಯ ತೀರದ ಸಾರಾ ಅಬೂಬಕ್ಕರ್ ಮೈಕಾಲದ ಬಳಿಯ ನೇತ್ರಾವತಿ ತೀರಕ್ಕೆ ಬಂದು ಸೇರಿದಂದಿನಿಂದ ಮುಸ್ಲಿಂ ಮಹಿಳೆಯರ ಧ್ವನಿಗಳಿಗೆ ಹೊಸ ಅರ್ಥ ಮೂಡಿದೆ.[೬೩] ಮುಸ್ಲಿಂ ಸಮುದಾಯದ ಕನ್ನಡ ಲೇಖಕಿಯರಿಂದ ಕನ್ನಡ ಕಾದಂಬರಿಯೊಂದು ರಚನೆಯಾಗಲು ಮುಕ್ಕಾಲು ಶತಮಾನದವರೆಗೂ ಕಾಯಬೇಕಾಯಿತು. 'ಚಂದ್ರಗಿರಿಯ ತೀರದಲ್ಲಿ' ಕೃತಿಯಲ್ಲಿ ಪ್ರಭುತ್ವದ ಅಧಿಕಾರ ಮತ್ತು ನಿಯಮಾವಳಿಗಳನ್ನು ನಿರ್ದಿಷ್ಟ ಅನುಭವಗಳ ಮೂಲಕ ಮಂಡಿಸಿದ ಕ್ರಮವು ಅನನ್ಯವಾಗಿದೆ.[೬೪] ಹೀಗೆ ಮಗಳು, ಹೆಂಗಸು, ತಾಯಿ ಎಂಬ ಸ್ಥಿರ ಮಾದರಿ ಪಾತ್ರಗಳಲ್ಲಿ ತನ್ನ ಚಲನ ಶೀಲತೆಯು ಕಳೆದು ಹೋಗಿ ತಾನೊಂದು ಜಡವಸ್ತುವಾಗಿ ಹೋಗುವ ಸಾಮಾಜಿಕ ಸಂದರ್ಭದಲ್ಲಿ ಅವಳಿದ್ದು ದೀರ್ಘಾವಧಿಯ ಈ ಅನುಭವದಲ್ಲಿ ತನ್ನತನವೆಂಬುದು ವಿಸ್ಮೃತಿಗೆ ಸರಿದು ಅವಳ ಲೋಕಗ್ರಹಿಕೆಯ ಸ್ವರೂಪವೇ ಕುಬ್ಜವಾಗಿದ್ದರೆ ಆಶ್ಚರವೇನಿಲ್ಲ.[೬೫] ಮುಸ್ಲಿಂ

ಮಹಿಳೆಯರ ವಿಷಯವೂ ಕೂಡಾ ಆಶಾದಾಯಕವಾಗಿಯೇನೂ ಇಲ್ಲ. ಮುಸ್ಲಿಂ ಪುರುಷ ಸಾಹಿತಿಗಳು ಅಲ್ಲಲ್ಲಿ ಅರಳುವ ಪ್ರಯತ್ನ ಮಾಡುತ್ತಿದ್ದರೂ ಮುಸ್ಲಿಂ ಮಹಿಳೆಯರ ಸಾಧನೆ ಇನ್ನೂ ಕೂಡಾ ಹೇಳಿಕೊಳ್ಳುವಂತೇನೂ ಇಲ್ಲ. ಒಂದಿಬ್ಬರು ಹೆಣ್ಣು ಮಕ್ಕಳು ಬರೆಯಲಾರಂಭಿಸಿದ್ದರೂ ಮದುವೆ, ಕೌಟುಂಬಿಕ ಬದುಕು ಹಾಗೂ ಸಾಮಾಜಿಕ ಕಟ್ಟುಪಾಡುಗಳು ಅವರಲ್ಲಿ ಅಡಗಿದ್ದ ಸಾಹಿತ್ಯ ಕೊರತೆಯನ್ನು ಅಲ್ಲೇ ಬತ್ತಿಸಿಬಿಟ್ಟಿದೆ.

ತವರುಮನೆಯಲ್ಲಿ ಚಿಗುರಲಾರಂಭಿಸಿದ್ದ ಒಂದೆರಡು ಚಿಗುರುಗಳು ಗಂಡನಮನೆ ಪ್ರವೇಶಿಸಿದೊಡನೆ ಬಾಡಿ ಉದುರಿ ಹೋಗಿರುವುದು ಹಾಗೂ ತವರಿನಲ್ಲೇ ಇಂತಹ ಮೊಗ್ಗುಗಳನ್ನು ಚಿವುಟಿದ್ದೂ ಇದೆ. ಕೋಮು ಸೌಹಾರ್ದದ ಕೊಂಡಿ ತೀರಾ ದುರ್ಬಲವಾಗಲು ಇಲ್ಲಿನ ಸಾಮಾಜಿಕ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ಮುಸ್ಲಿಂ ಮಹಿಳೆಯರ ಪಾಲ್ಗೊಳ್ಳದಿರುವಿಕೆಯೂ ಒಂದು ಕಾರಣವಾಗಿರಬಹುದು.[೬೬] ತೆರೆಮರೆಯಲ್ಲಿದ್ದು ತಮ್ಮನಿಲುವುಗಳನ್ನು ಲೇಖನಗಳಲ್ಲಿ ವ್ಯಕ್ತಪಡಿಸಿದ ಬರಹಗಾರ್ತಿಯರು ಇದ್ದರೂ ಕೂಡ ಅವರ ಕುರಿತು ಹೆಚ್ಚಿನ ಮಾಹಿತಿ ಲಭ್ಯವಾಗಿರುವುದಿಲ್ಲ. ಉದಾಹರಣೆಗೆ ಉಡುಪಿಯವರಾದ ಜಾನಕಿ ಪಾವಂಜೆಯವರು. ಸಂಸ್ಕೃತ ಶ್ಲೋಕಗಳಿಗೆ ಕನ್ನಡ ಅನುವಾದ ಮಾಡುತ್ತಿದ್ದರು. ಇವರು ರಚಿಸಿದ 'ಸ್ತ್ರೀ ಧರ್ಮ ಪ್ರಕಾಶಿಕಾ'ಎಂಬ ಕೃತಿಯು ೧೯೨೪ರಲ್ಲಿ ಪ್ರಕಟಗೊಂಡಿತು.

ನೆಲ್ಲಿಕಾಯಿ ವೆಂಕಟರಾಯರ ಧರ್ಮಪತ್ನಿಯಾದ ಸುಂದರಮ್ಮ ನೆಲ್ಲಿಕಾಯಿಯವರು ದೇವರ ನಾಮಗಳನ್ನು ರಚಿಸಿರುವರು. 'ಸಾಣೆ ಹಿಡಿಯದ ವಜ್ರ' ಇವರ ರಚನೆಯಾಗಿದೆ. ಮದರಾಸಿನ ಕ್ವೀನ್‌ಮೇರೀಸ್ ಕಾಲೇಜಿನ ಪ್ರಾಧ್ಯಾಪಕಿಯಾದ ಮಂದಾಕಿನಿ ಬಾಯಿ ಪಾವಂಜೆಯವರು 'ಮದ್ರಾಸು ಸಮಾಚಾರ' 'ರಾಷ್ಟ್ರಬಂಧು' ಮೊದಲಾದ ಪತ್ರಿಕೆಗಳಿಗೆ ಲೇಖನಗಳನ್ನು ಬರೆದಿರುವರು. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯವರಾಗಿ, ಮುಂಬಯಿಯಲ್ಲಿ ವಾಸ್ತವ್ಯ ಹೂಡಿದ್ದ ವಕೀಲ ಅಡಿಗೆ ವರದರಾಯರ ಪುತ್ರಿ ಹಾಗೂ ಕೆ.ಎಸ್ ಪೈಗಳ ಧರ್ಮಪತ್ನಿಯಾದ ಗಿರಿಜಾ ಪೈಯವರ ಲೇಖನಗಳು ಮತ್ತು ಕತೆಗಳು 'ಪ್ರಭಾತ' ಪತ್ರಿಕೆಯಲ್ಲಿ ಪ್ರಕಟಗೊಂಡಿದೆ.

ಮಂಜೇಶ್ವರದ ಶ್ರೀಮದನಂತೇಶ್ವರ ದೇವಸ್ಥಾನದ ಹೈಯರ್ ಎಲಿಮೆಂಟರಿ ಶಾಲೆಯಲ್ಲಿ ಅಧ್ಯಾಪಿಕೆಯಾಗಿದ್ದ ಶೀಮತಿ ರಮಾಬಾಯಿ ಮಂಜೇಶ್ವರ ಇವರ ಲೇಖನಗಳು 'ಕಂಠೀರವ' ಪತ್ರಿಕೆಯ ದಸರಾ ಸಂಚಿಕೆಯಲ್ಲಿ ಬಂದಿರುತ್ತದೆ. ನೆಲ್ಲಿಕಾರಿನ ಶ್ರೀ ವರ್ಮ ಜೈನಿಯವರ ಪುತ್ರಿಯಾದ ಇವರ ಕವಿತೆಗಳು 'ವಿವೇಕಾಭ್ಯುದಯ' ಪತ್ರಿಕೆಯಲ್ಲಿ ಪ್ರಕಟವಾಗಿದೆ. ಮಂಗಳೂರಿನ ವಕೀಲ ಅಡಿಗೆ ವರದರಾಯರ ಪುತ್ರಿ ಮತ್ತು ವಕೀಲ ದೇವದಾಸ ನಾಯ್ಕರ ಧರ್ಮ ಪತ್ನಿಯಾದ ಗಿರಿಜಾ ಬಾಯಿಯವರ ಲೇಖನ, ಕತೆಗಳು 'ರಾಷ್ಟ್ರಬಂಧು' ಪತ್ರಿಕೆಯಲ್ಲಿ ಪ್ರಕಟಗೊಂಡಿದೆ. ಮೂಡಬಿದ್ರೆಯ ಸಾಧ್ವೀಮಣಿಯವರ ಲೇಖನಗಳು 'ವಿವೇಕಾಭ್ಯುದಯ'ದಲ್ಲಿ ಪ್ರಕಟಗೊಂಡಿರುತ್ತದೆ. ಶ್ರೀಮತಿ ಸುಶೀಲಾದೇವಿ ಬೋಳಂತಕೋಡಿಯವರು 'ಸರಸ್ವತಿ' ಪತ್ರಿಕೆಯಲ್ಲಿ ಲೇಖನ,

ಕವಿತೆಗಳನ್ನು ರಚಿಸಿರುವರು. ಹೀಗೆ ಬರಹಗಾರ್ತಿಯರಿಗೆ ತಮ್ಮ ಮನಸ್ಸಿನ ತುಮುಲಗಳನ್ನು ಹೊರಹಾಕಲು ಪತ್ರಿಕೆಗಳು ವೇದಿಕೆಯಾದವು.[೬೭]

### ೫.೪ ಆಯ್ದ ಲೇಖಕರ ಬರವಣಿಗೆಗಳಲ್ಲಿ ಸ್ತ್ರೀ ಸಂವೇದನೆಗಳು

ಹತ್ತೊಂಭತ್ತನೆಯ ಶತಮಾನದಲ್ಲಿ ದೇಶದ ಏಳಿಗೆಗೆ ಪೂರಕವಾಗಿ ಭಾಷೆಯ ಅಭಿಮಾನ ಅಭಿವೃದ್ಧಿಗಳ ಕಾರ್ಯವೂ ಏಕಪ್ರಕಾರವಾಗಿ ಸಾಗಿತು. ಬಂಗಾಳವು ಈ ದಿಸೆಯಲ್ಲಿ ಸಮಸ್ತ ಭಾರತಕ್ಕೆ ಮಾರ್ಗದರ್ಶಿಯಾಯಿತು. ಬಂಕಿಂಚಂದ್ರ ಚಟರ್ಜಿ, ರವೀಂದ್ರನಾಥ ಠಾಕೂರ್ ಮೊದಲಾದ ಪ್ರಭಾವೀ ಲೇಖಕರು, ಕವಿಗಳು, ಭಾಷಾ ಪ್ರೇಮ, ಸಾಹಿತ್ಯ ಪ್ರೇಮಗಳನ್ನು ಹೆಚ್ಚಿಸುವುದರೊಂದಿಗೆ ದೇಶಾಭಿಮಾನವನ್ನು ಉದ್ದೀಪಿಸಿದರು. ಸ್ವಾತಂತ್ರ್ಯಪೂರ್ವದ ದಿನಗಳಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಹಿಳೋದ್ಧಾರದ ಕಳಕಳಿಯನ್ನು ಸಾಹಿತ್ಯದಲ್ಲಿ ಅನಾವರಣಗೊಳಿಸಿ ಮುಂಚೂಣಿಯಲ್ಲಿ ನಿಲ್ಲತಕ್ಕವರೆಂದರೆ ಗುಲ್ವಾಡಿ ವೆಂಕಟರಾಯರು (೧೮೪೪-೧೯೧೩). ಇವರು, ವಿಧವಾ ವಿವಾಹವನ್ನು ಎತ್ತಿ ಹಿಡಿಯುವ ಕಾದಂಬರಿಯಾದ 'ಇಂದಿರಾಬಾಯಿ ಅಥವಾ ಸದ್ಧರ್ಮ ವಿಜಯ' ಹಾಗೂ ಮೂಢನಂಬಿಕೆಗಳನ್ನು ಕಟ್ಟಳೆಗಳನ್ನೂ ಅಣಕ ಮಾಡುವ ದೃಷ್ಟಿಯಿಂದ 'ಭಾಗೀರಥಿ ಅಥವಾ ಮೂರ್ಖತ್ವದ ಯಾತನೆಗಳು' ಎಂಬ ಕೃತಿಗಳನ್ನು ಬರೆದರು. ಅಂತೆಯೇ ಸ್ತ್ರೀ ಶಿಕ್ಷಣದ ಮಹತ್ವವನ್ನು ಸಾರುವ 'ಸೀಮಂತಿನಿ' ಎಂಬ ಆಖ್ಯಾಯಿಕೆಯನ್ನು ರಚಿಸಿದರು. ಲಾಡುಪ್ರಿಯಾಚಾರ್ಯ, ವೇಣಮ್ಮ- ನಾಗಮ್ಮ ಸಂವಾದದಂತಹ ಕೃತಿಗಳನ್ನು ಕೂಡಾ ಅದೇ ದೃಷ್ಟಿಯಿಂದ ಬರೆಯಲಾಯಿತು. ಇವರ ಎಲ್ಲ ಬರಹಗಳೂ ಸಮಾಜ ಸುಧಾರಣೆಯ ಪ್ರಧಾನ ಉದ್ದೇಶದಿಂದ ಪ್ರೇರಣೆಯನ್ನು ಪಡೆದವು.

ಅಂದಿನ ಸಮಾಜದ ಬೀಭತ್ಸ ಮುಖಗಳನ್ನು ಒಂದೆಡೆ ಬಿಚ್ಚಿಟ್ಟು ಇನ್ನೊಂದೆಡೆ ಚಿಕಿತ್ಸೆಯ ಸಾಧ್ಯತೆಗಳನ್ನು ಸೂಚಿಸುತ್ತ, ಸದ್ಧರ್ಮ ಯಾವುದು ಎಂಬುವುದನ್ನು ನಮಗೆ ಪರೋಕ್ಷವಾಗಿ ತಿಳಿಸುತ್ತ ಅದರ ವಿಜಯವನ್ನು ಎತ್ತಿಹಿಡಿಯುತ್ತಾರೆ. 'ಇಂದಿರೆ ಎನ್ನುವವಳ ಜನ್ಮಚರಿತ್ರೆ' ಎಂಬಂತೆ ಲೇಖಕರ ಮಾತಿಗನುಗುಣವಾಗಿ ಸಾಂಪ್ರದಾಯಿಕ ಕಥನಕ್ರಮದಲ್ಲಿ ಕಥಾನಾಯಕಿಯಾದ ಇಂದಿರೆಯ ಜನನದಿಂದ ತೊಡಗಿ, ಶ್ರೀಮಂತ ವಿಠಲರಾಯನೊಂದಿಗೆ ನಡೆದ ಆಕೆಯ ಬಾಲ್ಯವಿವಾಹ ನಂತರ ಸ್ತ್ರೀ ವ್ಯಸನಿಯಾಗಿ ಎಳೆಯಪ್ರಾಯದಲ್ಲೇ ರೋಗ ಹತ್ತಿಸಿಕೊಂಡು ಸರಿಯಾದ ಚಿಕಿತ್ಸೆಯಿಲ್ಲದೆ ಮರಣಹೊಂದಿದ ವಿಠಲರಾಯನ ಲೋಲುಪತೆಯ ಮುಖವನ್ನು, ಗುಲಾಬಿ ಜೊತೆಗಿನ ಸಂಬಂಧದ ಮೂಲಕ ಉಲ್ಲೇಖಿಸಿದ್ದಾರೆ. ಅದೇ ರೀತಿಯಲ್ಲಿ ವೇಶ್ಯೆಯರೂ ಕೂಡಾ ವ್ಯವಸ್ಥೆಯ ಬಲಿಪಶುಗಳೇ ಎಂಬುವುದನ್ನು ಚಿತ್ರಿಸಿದ್ದಾರೆ. ಇಂದಿರೆಯ ವೈಧವ್ಯ, ಅದರಿಂದ ಎದುರಾದ ಬವಣೆಗಳು, ಸುಧಾರಕನಾದ ಅಮೃತರಾಯನ ಆಶ್ರಯ ದೊರಕುವಂತಾಗುವುದು, ಮುಂದೆ ಆಕೆ ಸುಶಿಕ್ಷಿತಳಾಗಿ, ವಿದ್ಯಾವಂತನಾಗಿ ಉನ್ನತ ಹುದ್ದೆಯನ್ನು ಅಲಂಕರಿಸಿದ ಭಾಸ್ಕರರಾಯನೊಂದಿಗೆ

ಮರುವಿವಾಹವಾಗುವುದು ಎಂಬಂತೆ ಕಾದಂಬರಿಯ ಕಥೆಯು ಸಾಗುತ್ತದೆ. ಆದೇ ರೀತಿ ವಿದೇಶ ಪ್ರಯಾಣ, ವಿಧವೆಯರ ಕೇಶ ಮುಂಡನ, ಸ್ತ್ರೀ ಶಿಕ್ಷಣ, ವಿಧವಾ ವಿವಾಹ ಮುಂತಾದ ವಿಚಾರಗಳಲ್ಲಿ ಸಂಘರ್ಷವಿಲ್ಲದೆ ಬದಲಾವಣೆ ಸಾಧ್ಯವಿರಲಿಲ್ಲ ಎಂಬುದು ತಿಳಿದುಬರುತ್ತದೆ. ಭೀಮರಾಯ ಮತ್ತು ಅಂಬಾಬಾಯಿ ದಂಪತಿಯ ಮಗಳಾಗಿ ಜನಿಸಿದ ಇಂದಿರಾ ಬಾಲ್ಯವಿವಾಹ ಎಂಬ ವ್ಯವಸ್ಥೆಗೆ ಬಲಿಯಾಗಿ ಕೊನೆಗೆ ಅಮೃತರಾಯ ಎಂಬ ಸಮಾಜೋದ್ಧಾರಕನ ಕೃಪೆಯಿಂದ ತನ್ನ ಉದ್ಧಾರವನ್ನು ತಾನೇ ಕಂಡವಳಾಗಿ ವಿಜಯಿಯಾಗುವ ಮೂಲಕ ಸಮಾಜಕ್ಕೆ ಪ್ರಗತಿಪರವಾದ ಒಂದು ಸಂದೇಶವನ್ನು ಸಾರುತ್ತಾಳೆ. ವೆಂಕಟರಾಯರಿಗಿದ್ದ ಸ್ತ್ರೀಪರವಾದ ಚಿಂತನೆ, ಕಾಳಜಿ ಅವರ ಕಾದಂಬರಿಯಲ್ಲಿ ವ್ಯಕ್ತವಾಗಿದೆ. ಶಿಕ್ಷಣ ಆಕೆಯಲ್ಲಿ ಆತ್ಮವಿಶ್ವಾಸ ಮೂಡಿಸಿದ್ದನ್ನು ವೆಂಕಟರಾಯರು ಕಾದಂಬರಿಯಲ್ಲಿ ಎತ್ತಿ ತೋರಿಸಿದ್ದಾರೆ. ಇಂದಿರೆಯ ಬಾಳಿನ ದುರಂತಕ್ಕೆ ಕಟ್ಟಳೆಯಂತೆ ಕಣ್ಣೀರಿಟ್ಟು, ಆಕೆ ವಿಧವೆಯಾದ ಮೇಲೆ ನಿರ್ಬಂಧಗಳನ್ನು ಹೇರಿ ಹಿಂಸಿಸುವ ಅಂಬಾಬಾಯಿ ಮಾನವೀಯ ಸಂವೇದನೆಗೆ ಎರವಾಗಿ ಬಾಳುತ್ತಾಳೆ. ಭೀಮರಾಯನಿಗೆ ದುರ್ಬೋಧನೆ ಮಾಡಿ ಕೆಟ್ಟದಾರಿಯಲ್ಲಿ ಸಾಗುವಂತೆ ಪ್ರೇರೇಪಿಸಿದ ಆಕೆ ಒಟ್ಟಿನಲ್ಲಿ ಕೆಡುಕಿನ ಪ್ರತೀಕವಾಗುತ್ತಾಳೆ.

'ಇಂದಿರಾಬಾಯಿ' ಕಾದಂಬರಿಯು ಒಳಗೊಂಡಿರುವ ಪ್ರಗತಿಪರ ಆಶಯದಿಂದಾಗಿ ಮೂಲಕೃತಿಯು ಪ್ರಕಟಗೊಂಡ ನಾಲ್ಕೇ ವರ್ಷಗಳಲ್ಲಿ ಕೆನರಾ ಜಿಲ್ಲೆಯ ಆಗಿನ ಅಸಿಸ್ಟೆಂಟ್ ಕಲೆಕ್ಟರ್ ಕೌಚ್ ಮನ್ ರವರು ಇದನ್ನು ಇಂಗ್ಲಿಷ್ ಭಾಷೆಗೆ ೧೯೦೩ರಲ್ಲಿ ಭಾಷಾಂತರ ಮಾಡಿದರು. ಈ ಕೃತಿಯ ಮುನ್ನುಡಿಯಲ್ಲಿ ಸ್ವತಃ ಸಾರಸ್ವತ ಸಮಾಜಕ್ಕೆ ಸೇರಿದವರಾಗಿ ವೆಂಕಟರಾಯರು ತಮ್ಮ ಸಮಾಜದ ಜಾತಿ ಕಟ್ಟಳೆಗಳನ್ನು, ಕಂದಾಚಾರಗಳನ್ನು ವಿಡಂಬನೆ ಮಾಡಿ ಸುಧಾರಣಾ ಪರವಾದ ನಿಲುವು ತಳೆದರು. ಆ ಕಾಲದ ಹಿಂದೂ ಸಮಾಜದ ರೀತಿ ನೀತಿಗಳನ್ನು ತಿಳಿಯಲು ಅಧಿಕೃತ ದಾಖಲೆಯೆಂದೂ ಕಾದಂಬರಿಯನ್ನು ವ್ಯಾಖ್ಯಾನಿಸಲಾಗಿದೆ.[೬೮] ಕನ್ನಡದ ಆದ್ಯ ಕಾದಂಬರಿಯಾದ 'ಇಂದಿರಾಬಾಯಿ' ಯಾವ ದೃಷ್ಟಿಯಿಂದ ವಿಚಾರಿಸಿದರೂ ಆಧುನಿಕವೆಂದು ಕರೆಯಿಸಿಕೊಳ್ಳಲು ಯೋಗ್ಯವಾಗಿದೆ.[೬೯] ಬಾಲ್ಯವಿವಾಹ ಅಸಂಖ್ಯ ಬಾಲವಿತಂತುಗಳನ್ನು ಸೃಷ್ಟಿಸುತ್ತದೆ ಎಂಬುವುದು ಕಾದಂಬರಿಯು ಪ್ರತಿಪಾದಿಸುವ ಇನ್ನೊಂದು ನಿಲುವಾಗಿದೆ. ಮನೆಯಲ್ಲೇ ಎಳೆಹರೆಯದ ತಮ್ಮ ಹತಭಾಗ್ಯ ಹೆಣ್ಣುಮಕ್ಕಳಿಗೆ ವಿರಕ್ತ್ಯವನ್ನು ಪಾಲಿಸಲು ಬೋಧಿಸುತ್ತ ತಾವು ಭೋಗಸುಖದಲ್ಲಿ ಓಲಾಡುವ ಹೆತ್ತವರನ್ನೂ ಕೃತಿಯು ವಿಡಂಬನೆಗೆ ಒಳಮಾಡಿದೆ.

ಕಾದಂಬರಿಯು ಸೂಚಿಸುವ ಕಾಲದಲ್ಲಿ ಸಾರಸ್ವತ ಸಮಾಜ ಕೂಡಾ ಸನಾತನ ಸಂಪ್ರದಾಯ ಮತ್ತು ರೀತಿ ರಿವಾಜುಗಳನ್ನು 'ಕಟ್ಟಳೆ'ಗಳು ಎಂಬ ಕಾರಣಕ್ಕಾಗಿ ಪಾಲಿಸುತಿತ್ತೇ ಹೊರತು, ಪೂರ್ಣ ಶ್ರದ್ಧೆಯಿಂದ ಅಲ್ಲ. ಹಾಗೆಯೇ ಸನಾತನ ಕಟ್ಟಳೆಗಳು ಸಮಾಜದ ಕೆಲವೇ ವರ್ಗಕ್ಕೆ ಮೀಸಲಾದ ಕಟ್ಟಳೆಗಳೇ ಹೊರತು ಅನುಕೂಲವಂತರನ್ನು ಅದು ಬಾಧಿಸುತ್ತಿರಲಿಲ್ಲ ಎಂಬುವುದಕ್ಕೆ ಕಾದಂಬರಿಯೊಳಗೆ ಪುಷ್ಟಿ ದೊರೆಯುತ್ತದೆ. ಕಾದಂಬರಿಯು ಸನಾತನ ಶಿಕ್ಷಣ ಪದ್ಧತಿಯನ್ನು ನಿರಾಕರಿಸುತ್ತದೆ ಹಾಗೂ ಆಂಗ್ಲ ಶಿಕ್ಷಣ ಕ್ರಮವನ್ನು

ಮೌಲ್ಯವೆಂದು ಪ್ರತಿಪಾದಿಸುತ್ತದೆ. ಅಂತೆಯೇ ಪ್ರೌಢ ವಯಸ್ಸಿನ ವಧೂವರರ ಒಪ್ಪಿಗೆಯಿಂದ ನಡೆಯುವ, ಸರಳ ವಿವಾಹವನ್ನು ಮತ್ತು ವಿಧವಾ ಪುನರ್ವಿವಾಹವನ್ನು ಸದ್ಧರ್ಮ ಎಂದು ಪ್ರತಿಪಾದಿಸುವುದು ಕಂಡುಬರುತ್ತದೆ.[೭೦]

ಕನ್ನಡದ ಮೊದಲ ತಲೆಮಾರಿನ ಕಾದಂಬರಿಗಳಾದ ಇಂದಿರಾಬಾಯಿ, ಇಂದಿರೆ, ವಾಗ್ದೇವಿ, ಭಾಗೀರಥಿ ಮುಂತಾದುವುಗಳನ್ನು ಗಮನಿಸಿದರೆ, ಇವು ಗೌಡಸಾರಸ್ವತ ಮತ್ತು ಸಾರಸ್ವತ ಸಮುದಾಯದ ಜೀವನಕ್ರಮವನ್ನು ವಿಮರ್ಶಾತ್ಮಕವಾಗಿ ಅವಲೋಕಿಸುವುದರಲ್ಲಿ ಮತ್ತು ಅವುಗಳಲ್ಲಿ ಆಗಬೇಕಿರುವ ಬದಲಾವಣೆಗಳ ಕುರಿತು ಆಗ್ರಹಪೂರ್ವಕ ಮಂಡನೆಯಲ್ಲಿ ಆಸಕ್ತವಾಗಿವೆ. ಕನ್ನಡದಲ್ಲಿ ಸಾಮಾಜಿಕ ಕಾದಂಬರಿಯನ್ನು ರಚಿಸುವಲ್ಲಿ ಮುಂದಾದ ಗುಳವಾಡಿ, ಅಣ್ಣಾಜಿರಾವ್ ಹಾಗೂ ಬೋಳಾರ ಬಾಬುರಾವ್ - ಈ ಮೂವರೂ ದಕ್ಷಿಣ ಕನ್ನಡದ ಸಾರಸ್ವತ ಸಮಾಜಕ್ಕೆ ಸೇರಿದವರಾದರೂ, ಹಳೆಯ ಪರಂಪರೆ ಹಾಗೂ ಸಂಸ್ಕಾರಗಳನ್ನು ಕಾಲಮಾನಕ್ಕನುಸಾರವಾಗಿ ಒರೆಗೆ ಹಚ್ಚಿನೋಡಿ ಅದರಲ್ಲಿ ಅರ್ಥಹೀನವಾದುದ್ದನ್ನು ಖಂಡಿಸುವ ಇಲ್ಲವೇ ಸುಧಾರಿಸುವ ಮನೋವೃತ್ತಿ ಅವರದಾಗಿತ್ತು.[೭೧] ಪೂರ್ವ ಪಶ್ಚಿಮಗಳನ್ನು ಬೆಸೆಯುವ ಆದರ್ಶ ಮೊದಲ ಕಾದಂಬರಿಕಾರರ ಪ್ರೇರಣೆಗಳಲ್ಲಿ ಒಂದಾಗಿದೆ. ಆದುದರಿಂದಲೇ ಪೂರ್ವ- ಪಶ್ಚಿಮ, ಪರಂಪರೆ-ಆಧುನಿಕತೆ, ವಿಜ್ಞಾನ-ಧರ್ಮ, ಸಂಸ್ಕೃತಿ-ನಾಗರಿಕತೆಗಳನ್ನು ಕುರಿತ ಚರ್ಚೆ ಈ ಕಾದಂಬರಿಗಳಲ್ಲಿ ಎದ್ದು ಕಾಣುತ್ತದೆ.[೭೨] 'ಇಂದಿರಾಬಾಯಿ' ಕಾದಂಬರಿಯ ಸದ್ಧರ್ಮದ ಪರಿಕಲ್ಪನೆಯನ್ನು ಬ್ರಹ್ಮಸಮಾಜದ ತಾತ್ವಿಕತೆಯ ನೆಲೆಯಲ್ಲೇ ರೂಪುಗೊಂಡದ್ದು ಎಂಬುವುದನ್ನು ಮರೆಯುವಂತಿಲ್ಲ. ಕಾದಂಬರಿ ಸದ್ಧರ್ಮವನ್ನು ಕೇವಲ ಸನಾತನ ಜೀವನಕ್ರಮ ಇಲ್ಲವೇ ಪಾಶ್ಚಾತ್ಯ ಜೀವನಕ್ರಮಗಳಲ್ಲಿದೆ ಎಂದು ಪ್ರತಿಪಾದಿಸದೆ, ಇವೆರಡರ ಅರ್ಥಪೂರ್ಣ ಆಯ್ಕೆ, ಅವುಗಳ ಸಮ್ಮಿಲನದಲ್ಲಿ ಇದೆ ಎಂದು ನಂಬುತ್ತದೆ.

ಗುಲ್ವಾಡಿಯವರ ಮತ್ತೊಂದು ಕೃತಿಯಾದ 'ಭಾಗೀರಥಿ ಅಥವಾ ಮೂರ್ಖತ್ವದ ಯಾತನೆಗಳು' ಅವರ ಸಮಾಜ ಸುಧಾರಣೆಯ ಆಶಯವನ್ನು ಅತ್ಯಂತ ವ್ಯಂಗದ ಧಾಟಿಯಲ್ಲಿ ಸೆರೆಹಿಡಿಯುತ್ತದೆ. ಭಾಗೀರಥಿ ಹೇಳುವವಳಾಗಿ, ಲೀಲಾವತಿ ಶೋತೃವಾಗಿ ಕಟ್ಟಳೆ ಹಾಗೂ ಮೌಢ್ಯಕ್ಕೆ ಬಲಿಯಾದ ಭಾಗೀರಥಿಯ ಬದುಕು ಬಿಚ್ಚಿಕೊಳ್ಳುತ್ತದೆ. ಭಾಗೀರಥಿಯು ಇಲ್ಲಿ ಮೂಢನಂಬಿಕೆಗಳ ಮೊತ್ತವಾಗಿ ಕಾಣಿಸಿಕೊಂಡರೆ, ಲೀಲಾವತಿ ಪ್ರಶ್ನಿಸುವ ಮನೋವೃತ್ತಿಯ ಹೊಸ ಜನಾಂಗವನ್ನು ಪ್ರತಿನಿಧಿಸುತ್ತಾಳೆ. ಆಧುನಿಕ ಮನೋಧರ್ಮವನ್ನು ಹಳಿಯುವ ಭಾಗೀರಥಿ ಹಳೆಯ ಸಂಪ್ರದಾಯಗಳನ್ನು ಎತ್ತಿಹಿಡಿಯುತ್ತ ಕಟ್ಟಳೆಗಳನ್ನು ಸವಿವರವಾಗಿ ಪರಿಚಯಿಸುವ ಆಕೆಗೆ ಆಂಗ್ಲ ವಿದ್ಯಾಭ್ಯಾಸ, ಸ್ತ್ರೀ ಶಿಕ್ಷಣ ಮುಂತಾದುವುಗಳು ದುರಾಚಾರಗಳೆಂದೇ ದೃಢವಾದ ನಂಬಿಕೆ. ಆದರೆ ಭಾಗೀರಥಿ ಕಟ್ಟಳೆಗಳನ್ನು ಹೇಳುತ್ತಲೇ ವಿಡಂಬನೆಗೆ, ಪರಿಹಾಸ್ಯಕ್ಕೆ ಒಳಗಾಗುತ್ತಿರುತ್ತಾಳೆ. ಕಂದಾಚಾರಗಳ ಬಗ್ಗೆ ವೆಂಕಟರಾವ್ ರವರು ಇಂತಹ ಒಂದು ಕಥನತಂತ್ರದ ಮೂಲಕ ಮನೋಜ್ಞವಾಗಿ ಅರಿವು ಮೂಡಿಸುತ್ತಾರೆ. ಬೋಳಾರ ಬಾಬುರಾಯರು ಬರೆದ ಇಂದಿರಾ, ವಾಗ್ದೇವಿ (೧೯೦೫), ಶಿವಲೀಲಾಮೃತ

(೧ ೯೦೯), ಭಕ್ತಿ ಮಹಿಮೆ (೧೯೧೦) ಮೊದಲಾದ ಕೃತಿಗಳು ಸಾಮಾಜಿಕ ಜಾಗೃತಿ ಮೂಡಿಸುವಲ್ಲಿ ನಿಟ್ಟಿನಲ್ಲಿ ಗಣನೀಯ ಪಾತ್ರ ವಹಿಸಿತ್ತದೆ. ಸಮಾಜ ಸುಧಾರಣಾ ಮನೋಭಾವವಿದ್ದ ಲೇಖಕರು ತಮ್ಮ ಕೃತಿಗಳ ಮೂಲಕ ಸಮಾಜವನ್ನು ಎಚ್ಚರಿಸುವ ಕಾರ್ಯ ಮಾಡಿರುವುದು ಶ್ಲಾಘನೀಯ.[೨೩] ಸಮಾಜದಲ್ಲಿ ಒಬ್ಬರು ಇನ್ನೊಬ್ಬರನ್ನು ಕೀಳು ಎಂದು ತಿಳಿದು ಅದರಂತೆ ನಡೆದುಕೊಳ್ಳುವುದು ಇನ್ನೊಂದು ಬಗೆಯ ಮನುಷ್ಯ ನಿರ್ಮಿತ ಅನ್ಯಾಯವಾಗಿದೆ. ಹೆಣ್ಣು ದೈಹಿಕವಾಗಿ ಅಬಲೆಯೂ, ಕಾರ್ಯತಃ ಮನೆಯಲ್ಲಿಯೇ ಇರುವವಳೂ ಎಂದ ಮಾತ್ರಕ್ಕೆ ಆಕೆ ಕೀಳು ಎಂದು ತಿಳಿಯಲಾಗದು. 'ಗಂಡು ಹೆಣ್ಣು ನಾಣ್ಯದ ಎರಡು ಬದಿಯಂತೆ ಗಂಡು ನಾಣ್ಯದ ಮುಂದುಗಡೆಯ ಚಿತ್ರ, ಹೆಣ್ಣು ಹಿಂಬದಿ ಟಂಕಿಸಿದ ಬರಹ' ಎಂದು ಒಂದೆಡೆ ರಾಷ್ಟ್ರಕವಿ ಗೋವಿಂದ ಪೈಯವರು ನುಡಿದಿದ್ದಾರೆ.[೨೪]

೧೮೯೦ರಲ್ಲಿನ ಗುಲ್ವಾಡಿಯವರ ಸಾಹಿತ್ಯ ಕೃಷಿಯನ್ನೇ ಶಿವರಾಮ ಕಾರಂತ, ಕುವೆಂಪು, ಅನಂತಮೂರ್ತಿ, ಲಂಕೇಶ್ ಮೊದಲಾದವರು ತಮ್ಮ ಪ್ರಾತಿನಿಧಿಕ ಕೃತಿಗಳಲ್ಲಿ ಮುಂದುವರಿಸಿಕೊಂಡು ಬಂದಿರುತ್ತಾರೆ. ಕಾರಂತರು ದಕ್ಷಿಣ ಕನ್ನಡ ಜಿಲ್ಲೆಯ ಸ್ತ್ರೀಯರ ಜಗತ್ತನ್ನು ಅನಾವರಣಗೊಳಿಸಿದ ಪ್ರಮುಖ ಲೇಖಕರು. ಬ್ರಾಹ್ಮಣ ಸಮುದಾಯದಲ್ಲಿ ಆ ಕಾಲದಲ್ಲಿದ್ದ ಸಂಪ್ರದಾಯಗಳ ಕಟ್ಟುನಿಟ್ಟಿನಲ್ಲಿ ಜೀವಿಸುವುದೇ ಒಂದು ಶಾಪವೆನ್ನುವ ನೋವಿನಲ್ಲೇ ದೀರ್ಘ ಕಾಲ ಬೇರೆಯವರ ಚಾಕರಿ ಮಾಡುತ್ತಲೇ ಬಾಲವಿಧವೆಯರು, ಆರ್ಥಿಕ ಬಡತನದಿಂದಾಗಿ ಮನೆಯ ಮತ್ತು ಗದ್ದೆಯ ಕೆಲಸವನ್ನು ಮಾಡಿ ಶ್ರಮಜೀವನ ನಡೆಸುತ್ತಿದ್ದ ಶ್ರಮಿಕವರ್ಗದ ಸ್ತ್ರೀಯರು ಮೇಲ್ವರ್ಗದವರಿಂದ ಲೈಂಗಿಕ ಶೋಷಣೆಗೊಳಗಾಗುತ್ತಲೇ ಕೌಟುಂಬಿಕ ಜೀವನವನ್ನೇ ಪ್ರೀತಿಸುತ್ತಿದ್ದ ಹೊಲೆಯರ ಸ್ತ್ರೀಯರು, ಮೊಗವೀರ ಸ್ತ್ರೀಯರು, ದೇಹಮಾರಿಕೊಂಡರೂ ದಾಂಪತ್ಯ ಪ್ರೀತಿಯನ್ನು, ಮಕ್ಕಳನ್ನು ಬಯಸುವ ವೇಶ್ಯೆಯರು ಹೀಗೆ ಎಲ್ಲಾ ವರ್ಗಗಳ ಸ್ತ್ರೀಯರ ಜೀವನವೂ ಅವರವರ ಜೀವನದ ಕಷ್ಟ ಸುಖಗಳೊಡನೆ ಅವರ ಕೃತಿಗಳಲ್ಲಿ ಕಂಡುಬರುತ್ತದೆ.[೨೫] ಕಾರಂತರ ಕಾದಂಬರಿಗಳ ಪ್ರಧಾನ ಜಗತ್ತು ಸಹಜವಾಗಿಯೇ ದಕ್ಷಿಣ ಕನ್ನಡದ ಹವ್ಯಕ, ಕೋಟ ಮುಂತಾದ ಬ್ರಾಹ್ಮಣ ಪಂಗಡಗಳ ಜೀವನಕ್ರಮವನ್ನು ಅವಲಂಬಿಸಿದೆ. ಅದರೊಳಗೆ ವ್ಯಕ್ತಿಗಳ ಟೊಳ್ಳು- ಗಟ್ಟಿತನ, ಸಾರ್ಥಕ ಬದುಕು, ಸಾಧ್ಯತೆ ಸಾಧನೆಗಳನ್ನು ಕಾರಂತರ ಕೃತಿಗಳು ವಿಶ್ಲೇಷಿಸುತ್ತವೆ.[೨೬]

ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ಕಾಲಘಟ್ಟದ ನಿಕಟ ಸಂದರ್ಭಗಳಲ್ಲಿ ತಾಯಿಯ ಪಾತ್ರಗಳ ಮೂಲಕ ರೂಪಿಸುವ ಸಂಸ್ಕೃತಿಪರವಾದ ಜೀವನ ಮೌಲ್ಯಗಳ ರಕ್ಷಣೆಯ ಕಾಳಜಿ ಅನನ್ಯವಾದುದು. ಕಾರಂತರ ಹೆಚ್ಚಿನ ಕಾದಂಬರಿಗಳಲ್ಲಿ 'ತಾಯಿ' ಬದುಕಿನ ಎಲ್ಲಾ ಬಗೆಯ ಹೋರಾಟಕ್ಕೆ, ಕಷ್ಟ ಕೋಟಲೆಗಳಿಗೆ ಮುಖಾಮುಖಿಯಾಗುತ್ತಾಳೆ. ಕಾರಂತರ ಧರ್ಮರಾಯನ ಸಂಸಾರ, ಕರುಳಿನ ಕರೆ, ಮರಳಿ ಮಣ್ಣಿಗೆ, ಇನ್ನೊಂದೇ ದಾರಿ, ಕನ್ನಡಿಯಲ್ಲಿ ಕಂಡಾತ ಇವುಗಳು ಉತ್ತಮ ಉದಾಹರಣೆಗಳಾಗಿವೆ. ಭಾರತೀಯ ಪರಂಪರೆಯಲ್ಲಿ ಒಬ್ಬ ಹೆಣ್ಣಿನ ಮನಸ್ಸಿನ ತುಮುಲಗಳನ್ನು ಇನ್ನೊಬ್ಬ ಹೆಣ್ಣು ಅರ್ಥ ಮಾಡಿಕೊಳ್ಳುವಷ್ಟು ಗಂಡು

ಅರ್ಥ ಮಾಡಿಕೊಳ್ಳುವುದಿಲ್ಲ ಎಂಬ ಮಾತಿದೆ. ಆದರೆ ಇದಕ್ಕೆ ಬಹಳಷ್ಟು ಅಪವಾದಗಳಿವೆ ಎಂಬುವುದನ್ನು ಮರೆಯುವಂತಿಲ್ಲ. ಇದಕ್ಕೆ ಸಮನಾಂತರವಾಗಿ 'ಹೆಣ್ಣಿಗೆ ಹೆಣ್ಣೇ ಶತ್ರು' ಎಂಬ ಹೇಳಿಕೆಯೂ ಇದೆ. ಆದರೆ ಇದನ್ನು ಹೇಳಿಕೆಯಾಗಿಯೇ ಪರಿಗಣಿಸಬೇಕಾಗಿದೆ. ನಮ್ಮ ಸುತ್ತ ಮುತ್ತಲು ಕಂಡು ಬರುವಂತ ಹೆಣ್ಣಿನಲ್ಲೂ 'ಗಂಡು ಗುಣ' ಗಳಿವೆ; ಗಂಡಿನಲ್ಲೂ 'ಹೆಣ್ಣು ಗುಣ' ಗಳಿವೆ. ಈ ಹಿನ್ನೆಲೆಯಲ್ಲಿ ಕಾರಂತರು ರಚಿಸಿದ ಮೈಮನಗಳ ಸುಳಿಯಲ್ಲಿ ಎಂಬ ಕಾದಂಬರಿಯಲ್ಲಿ 'ಹಲವು ಹೆಣ್ಣು ಗುಣಗಳ ಗಂಡು ಮನಸ್ಸು'ಗಳನ್ನು ಕಾಣುವುದರೊಂದಿಗೆ ಸ್ತ್ರೀ ಸಂವೇದನೆಗಳ ಹೊಸ ಕಾದಂಬರಿಯನ್ನು ಓದಿದ ಅನುಭವವಾಗುತ್ತದೆ.

ಕಾರಂತರ 'ಚೋಮನದುಡಿ' ಕಾದಂಬರಿಯಲ್ಲಿ ಮೌಲ್ಯಗಳು ಮತ್ತು ಸಾಮಾಜಿಕ ನ್ಯಾಯಕಲ್ಪನೆ ಜೋತುಬಿದ್ದದ್ದು ದುರಂತವೇ ಸರಿ. ಈ ಬಗೆಯ ಅರ್ಥಹೀನ ನ್ಯಾಯ ಪರಿಕಲ್ಪನೆಯೊಂದು ದಲಿತನೊಬ್ಬನ ಬದುಕನ್ನು, ಆಶೋತ್ತರಗಳನ್ನು ಮಣ್ಣುಗೂಡಿಸಿ, ಅವನ ಬದುಕನ್ನು ದುರಂತಗಳ ಸರಪಳಿಯನ್ನಾಗಿಸಿದ ಕತೆಯೇ ಶಿವರಾಮ ಕಾರಂತರ ಚೋಮನ ದುಡಿ ಕಾದಂಬರಿ. ಚೋಮನಿಗೆ ಅವನ ಹೆಬ್ಬಯಕೆಯಾದ ತುಂಡು ಭೂಮಿ ದಕ್ಕದಿರಲು, ಬದುಕಿನುದ್ದಕ್ಕೂ ನೋವನ್ನು ಉಣಲು ಇಲ್ಲಿ ಕಾರಣಗಳು ಹಲವು. ಅವುಗಳಲ್ಲಿ ಮುಖ್ಯವಾದದ್ದು ಅವನ ಜಾತಿ ಮತ್ತು ಅನಕ್ಷರತೆ. ಸಮಾಜ ನಿರ್ಮಿಸಿದ ಜಾತೀಯ ಶ್ರೇಣಿಯಲ್ಲಿ ಅತ್ಯಂತ ಕೆಳಸ್ತರದಲ್ಲಿರುವ ವರ್ಗದ ಪ್ರತಿನಿಧಿ ಆತ. ಒಂದು ಕಾಲಕ್ಕೆ ಸ್ತ್ರೀಯರು ಮತ್ತು ಶೂದ್ರರು ವೇದಾಧ್ಯಯನ (ವಿದ್ಯೆ) ಕ್ಕೆ ಅನರ್ಹರು ಎಂಬ ಮೌಲ್ಯವನ್ನು ಪ್ರತಿಪಾದಿಸಿದ್ದ ಭಾರತೀಯ ಸಮಾಜದಿಂದ ಅಸ್ಪೃಶ್ಯ ವರ್ಗದ ಚೋಮನಂತವರು ವಿದ್ಯೆಯನ್ನು ಅಪೇಕ್ಷಿಸುವಂತಿರಲಿಲ್ಲ. ಹಾಗೆ ಅಪೇಕ್ಷಿಸುವುದು ಉಲ್ಲಂಘನೆಯ ಮಾತಾಗುತ್ತದೆ. ಧಾರ್ಮಿಕ ತತ್ವಗಳ, ವೇದಗಳ ಮೂಲಕ ವಿಫುಲವಾಗಿ ಸಮರ್ಥನೆಗಳನ್ನು ಒದಗಿಸುತ್ತಾ, ಕೆಳವರ್ಗದವರಿಗೆ ಬುದ್ಧಿಶಕ್ತಿ ಇದ್ದೂ ಅದರ ಚಾಲನೆಗೆ ಅವಕಾಶ ಕೊಡದೆ ಅವರನ್ನು ಶೋಷಿಸುತ್ತಾ ಬಂದ ಸಮಾಜ ಮಾನವೀಯವಾದ ನೆಲೆಯಲ್ಲಿ ಚೋಮನಂತವರಿಗೆ ನೀಡಿದ್ದು ಸೊನ್ನೆ.

ಚೋಮನಂಥವರನ್ನು ಸ್ಪರ್ಶಮಾತ್ರದಿಂದಲೂ ದೂರವಿರಿಸಿ ಅವರನ್ನು ಅಸ್ಪೃಶ್ಯರೆಂದು ಕರೆದರೂ ಅವರದೇ ಕುಟುಂಬದಿಂದ ಬಂದ ಹೆಣ್ಣು, ಚೋಮನ ಮಗಳು ಬೆಳ್ಳಿಯನ್ನು ಲೈಂಗಿಕವಾಗಿ ಬಳಸಿಕೊಳ್ಳುವ ಮಂದಿ (ಮನ್ವೇಲ) ಮೇಲ್ನೋಟಕ್ಕೆ ಮೌಲ್ಯವನ್ನು ಅನುಸರಿಸುವಂತೆ ನಟಿಸುತ್ತಲೇ ರಹಸ್ಯವಾಗಿ ಮೌಲ್ಯವೊಂದನ್ನು ಅಲ್ಲಗಳೆಯುತ್ತಾರೆ.[22] ಕಾರಂತರ ಸರಸಮ್ಮನ ಸಮಾಧಿ, ಮೈಮನಗಳ ಸುಳಿಯಲ್ಲಿ ಹಾಗೂ ಉಳಿದ ಅವರ ಅನೇಕ ಕಾದಂಬರಿಗಳಲ್ಲಿ ಲಿಂಗತಾರತಮ್ಯದಿಂದ ಬದುಕಲ್ಲಿ ಕಹಿಯನ್ನೇ ಉಂಡ ಹೆಣ್ಣುಜೀವಗಳು ಗಟ್ಟಿಯಾಗುತ್ತಾ, ಪಕ್ವವಾಗುತ್ತಾ, ಸಮಾಜಮುಖಿಯಾಗತ್ತಾ ಹೋಗಿರುವುದನ್ನು ಕಾಣುತ್ತೇವೆ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಶಿವರಾಮ ಕಾರಂತ, ಕುವೆಂಪು ಮೊದಲಾದ ಸಾಹಿತಿಗಳು ಲಿಂಗರಾಜಕಾರಣದ ಸೂಕ್ಷ್ಮಗಳನ್ನು ಅದರ ಮೂಲ ಬೇರುಗಳ ಆಳದಿಂದ ಗ್ರಹಿಸಿ ಮಹಿಳಾಲೋಕದ ಒಳಜಗತ್ತನ್ನು ವಿಭಿನ್ನ ಮತ್ತು ವಿಶಿಷ್ಟವಾಗಿ ತೆರೆದಿಡುವ ಪ್ರಯತ್ನವನ್ನು ಮಾಡಿದ್ದಾರೆ. ಶಿವರಾಮ ಕಾರಂತರು

ಲಿಂಗತಾರತಮ್ಯವನ್ನು ಲೈಂಗಿಕ ಅಗತ್ಯಗಳ ಪೂರೈಕೆಯ ಹಿನ್ನೆಲೆಯಲ್ಲಿ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಿದ್ದಾರೆ. ಹೀಗೆ ಕಾರಂತರು ತಮ್ಮ ಕಾದಂಬರಿಗಳ ಮೂಲಕ ಏಕಕಾಲದಲ್ಲಿಯೇ ಆಧುನಿಕತೆಯ ವಕ್ತಾರರಾಗಿ ಮತ್ತು ಆಧುನಿಕತೆಯ ವಿಮರ್ಶಾತ್ಮಕ, ವೈಚಾರಿಕ ತತ್ವಗಳನ್ನು ಪ್ರತಿರೋಧಿಸುವವರಾಗಿ ಕಂಡುಬರುತ್ತಾರೆ.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಇನ್ನೊರ್ವ ಸಾಹಿತಿಯಾದ ಯು.ಆರ್. ಅನಂತಮೂರ್ತಿಯವರು ಸುಮಾರು ಐದು ದಶಕಗಳಿಂದ ಸಾಹಿತ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಇವರ ಕಥೆಗಳಲ್ಲಿ ಸ್ತ್ರೀ ಪಾತ್ರಗಳು ದೊಡ್ಡ ಸಂಖ್ಯೆಯಲ್ಲಿಲ್ಲದಿದ್ದರೂ, ವಿಪುಲವಾಗಿ ಬರುತ್ತದೆ. ಕಥೆಗಾರರು ಅವುಗಳನ್ನು ಅಂದಿನ ಸಮಾಜದ ಸಂಬಂಧಗಳಲ್ಲಿ ನಿಕಟವಾಗಿರಿಸಿ, ಅಂದಿನ ವ್ಯವಸ್ಥೆಯನ್ನು ಎಳೆಎಳೆಯಾಗಿ ಶೋಧಿಸುವರು. ಪುರುಷಪ್ರಧಾನ ಸಮಾಜದ ವಿವಿಧ ಹಂತಗಳನ್ನು ವಿಭಿನ್ನ ದೃಷ್ಟಿಕೋನಗಳಲ್ಲಿ ಓದುಗರ ಮುಂದಿಡುತ್ತಾರೆ. ಅನಂತಮೂರ್ತಿಯವರ ಕಥೆಗಳಲ್ಲಿ ಸ್ತ್ರೀ ಪಾತ್ರಗಳು ಏಕರೂಪವಾಗಿರದೇ ವಿವಿಧ ಗುಣ ರೂಪಗಳನ್ನು ಹೊಂದಿರುವುದು ಕಂಡುಬರುತ್ತದೆ. ಪರಂಪರಾಗತ ಮೌಲ್ಯಗಳನ್ನು ನಂಬಿ, ಬತ್ತಿದ ದೇಹದ ಬ್ರಾಹ್ಮಣ ಸ್ತ್ರೀಯರು, ಸಧೃಡಕಾಯರಾದ ಬ್ರಾಹ್ಮಣ ಸ್ತ್ರೀಯರು, ವ್ಯವಹಾರಿಕ ಲೋಕದಿಂದ ದೂರವೇ ಉಳಿಯುವುದಲ್ಲದೇ ಕಾಮ - ಪ್ರೇಮ ಸಂಬಂಧಿಯಾದ ನೀತಿ ಅನೀತಿಗಳನ್ನು ವ್ಯಾಖ್ಯಾನಿಸುವುದಕ್ಕೆ ಪೋಷಕ ದ್ರವ್ಯವಾಗಿ ಬರುತ್ತಾರೆ. ಇವರ ಕಥೆಗಳಲ್ಲಿ ಬರುವ ಅವಿವಾಹಿತೆಯರ ಪಾತ್ರಗಳು ವಿಭಿನ್ನವಾಗಿವೆ. ಕೆಲವೊಂದು ಪಾತ್ರಗಳು ಮನೆಯ ಸಂಪ್ರದಾಯದ ಒತ್ತಡಕ್ಕೆ ಸಿಲುಕಿಯೋ, ಆರ್ಥಿಕ ಪರಿಸ್ಥಿತಿಯಿಂದಲೋ ವೈವಾಹಿಕ ಜೀವನಕ್ಕೆ ಕಾಲಿಡಲು ಸಾಧ್ಯವಾಗದೇ ಜಡ್ಡಾಗಿ ಬದುಕುವಂತಿದ್ದರೆ, ಇನ್ನು ಕೆಲವು ಗಂಡಿನ ಪ್ರತಿರೋಧಕ್ಕೆ ವಿರುದ್ಧವಾಗಿ ತಮ್ಮನ್ನು ಒಡ್ಡಿಕೊಂಡು ತಮ್ಮದೇ ಆದ ಧೋರಣೆಯಲ್ಲಿ ಬದುಕು ಸಾಗಿಸುವ ಪಾತ್ರಗಳು ಇಲ್ಲಿ ಕಂಡುಬರುತ್ತವೆ. 'ಪ್ರಶ್ನೆ'ಯ ಶಾರದೆ, 'ಮೌನಿ'ಯ ಭಾಗೀರಥಿ, ಇವರು ಸಂಪ್ರದಾಯಗಳ ಅಡಿಯಲ್ಲಿ ಕಟ್ಟಿ ಬಿದ್ದವರು. 'ಖೋಜರಾಜ'ದ ಆರುಂಧತಿ, 'ರೂತ್ ಮತ್ತು ರಸುಲ್' ನ ರೂತ್, 'ಕಾಮರೂಪಿ'ಯ ಗೀತಾ, 'ಬೇಟೆ ಬಳೆ ಮತ್ತು ಓತಿಕೇತ' ಕಥೆಯಲ್ಲಿನ 'ಜ್ಯೋತಿ' ಎಲ್ಲವನ್ನೂ ಎದುರಿಸುವ ಧೀಮಂತ ಪಾತ್ರಗಳಾಗಿವೆ.

ಅನಂತಮೂರ್ತಿಯವರ ಕಥೆಗಳಲ್ಲಿ ವಿವಾಹಿತರ ಸಂಖ್ಯೆ ಅಧಿಕವಾಗಿ ಕಂಡುಬರುತ್ತದೆ. ವಿವಾಹಿತರಲ್ಲಿನ ಕೆಲವರು ಸಂಸಾರದ ಸುಖದಿಂದ ವಂಚಿತರಾದರೆ ಇನ್ನು ಕೆಲವರು ಗಂಡನೊಂದಿಗೆ ಇದ್ದು ಸಂಸಾರದಲ್ಲಿ ಅತೃಪ್ತಿ ಇದ್ದವರಾಗಿದ್ದಾರೆ. 'ಪ್ರಸ್ತದ' ಸೀತಕ್ಕ, 'ಮೌನಿ'ಯ ಗೌರಮ್ಮ, 'ಆಕ್ರಮಣ'ದ ಶೀಲ, 'ಅಪೂರ್ವ'ದ ಶೈಲಾ, 'ಸೂರ್ಯನ ಕುದುರೆ'ಯ ರುಕ್ಕು, 'ಅಕ್ಕಯ್ಯ' ಕಥೆಯ ಅಕ್ಕಯ್ಯ, 'ಬೇಟೆ, ಬಳೆ ಮತು ಓತಿಕೇತ'ದ ಹಸೀನ. ಅನಂತಮೂರ್ತಿಯವರ ಕಥೆಗಳಲ್ಲಿ ಬಹಳಷ್ಟು ಪುರುಷ ಪಾತ್ರಗಳು ವಿವಾಹೇತರ ಸಂಬಂಧದಲ್ಲಿ ಹುಡುಕಾಟವನ್ನು ತೃಪ್ತಿ ಹೊಂದುವುದನ್ನು ಕಾಣಬಹುದು. ಹಾಗೆಯೇ ಇವರ ಕಥೆಗಳಲ್ಲಿ ಕೆಲವು ಸ್ತ್ರೀ ಪಾತ್ರಗಳು ವಿವಾಹೇತರ ಸಂಬಂಧವನ್ನು ಅರಸುತ್ತಾ ಹೋಗಿರುವುದು ಕಂಡು ಬರುತ್ತದೆ.

ಅನಂತಮೂರ್ತಿಯವರ ಕಥೆಗಳಲ್ಲಿ ಹೆಚ್ಚಾಗಿ ಪ್ರತಿಶತ ೨೫% ರಷ್ಟು ವಿಧವೆಯರ ಪಾತ್ರವನ್ನು ಕಾಣಬಹುದು. ಅಂತವರಲ್ಲಿ 'ಪ್ರಕೃತಿಯ' ಲಕ್ಷ್ಮೀ, 'ಘಟಶ್ರಾದ್ಧ'ದ ಯಮುನಕ್ಕ, 'ಮೌನಿ'ಯ ಸೀತಕ್ಕ, 'ಪ್ರಸ್ತ'ದ ವೆಂಕಮ್ಮ, 'ಆಕಾಶ ಮತ್ತು ಬೆಕ್ಕು' ಕಥೆಯಲ್ಲಿನ ರುಕ್ಮಿಣಿ, 'ಜರತ್ಕಾರು'ವಿನ ತಾಯಿ, 'ಪ್ರಶ್ನೆ'ಯ ಪಾರ್ವತಿ. ಇವರಲ್ಲಿ ಎಲ್ಲರೂ ಸಂಪ್ರದಾಯವನ್ನೇ ನಂಬಿ ಬದುಕಿದವರೇ ಆದರೂ, ಕೆಲವು ಕ್ಷಣಗಳಲ್ಲಿ ತಮ್ಮ ದೈಹಿಕ ಕಾಮನೆಗಳನ್ನು ಪೂರೈಸಿಕೊಳ್ಳಲು ಒಳದಾರಿಯನ್ನು ಕಂಡುಕೊಂಡರೆ, ಇನ್ನು ಕೆಲವರು ಅತೃಪ್ತಿಯ ಅಸಮಧಾನದ ಜೀವನವನ್ನು ಹೊಂದಿ ವಯಸ್ಸಾದ ಮೇಲೆ ಪಿರಿಪಿರಿ ಮಾಡುವ ಮುದುಕಿಯರಾಗಿದ್ದಾರೆ.

ಅನಂತಮೂರ್ತಿಯವರ ಒಟ್ಟಾರೆ ಕಥೆಗಳಲ್ಲಿ ಸ್ತ್ರೀ ನೆಲೆಯನ್ನು ಗುರುತಿಸುತ್ತಾ ಹೋದಂತೆ ಬ್ರಾಹ್ಮಣ ಪರಿಸರದ ಮಹಿಳೆಯರು, ಆಧುನಿಕ ಮನೋಭಾವದ ಮಹಿಳೆಯರು ಕಂಡು ಬರುತ್ತಾರೆ. ವಿವಾಹಿತರು, ವಿವಾಹೇತರರು, ವಿಧವೆಯರು, ಶೂದ್ರ ಸ್ತ್ರೀಯರು ಇವರೆಲ್ಲ ಒಂದಲ್ಲ ಒಂದು ಕಾರಣದಿಂದ ಪರಾಂಪರಾಗತ ಮೌಲ್ಯಗಳಿಗೆ ಕಟ್ಟುಬಿದ್ದು ತಮ್ಮ ವೈಯಕ್ತಿಕ ಬದುಕಿನಲ್ಲಿ ನೆಮ್ಮದಿಯನ್ನು ಕಾಣದೆ ಪುರುಷರ ನೆಲೆಯಲ್ಲಿ ಉಸಿರಾಡುವ ಪಾತ್ರಗಳಾಗಿ ಕಂಡು ಬರುತ್ತಾರೆ.[೭೮] ಹೊಸಶಿಕ್ಷಣ ವ್ಯವಸ್ಥೆಯ ಪರಿಣಾಮವಾಗಿ ಚಿಂತನಾಕ್ರಮ ವಿಸ್ತರಿಸಿತು. ನಾಲ್ಕುಗೋಡೆಗಳ ಮಧ್ಯೆ ಬಂಧಿತವಾಗಿದ್ದ ಮಹಿಳೆಗೆ ಬದಲಾವಣೆಯ ಗಾಳಿ ಬೀಸ ತೊಡಗಿತು. ಪಾಶ್ಚಾತ್ಯ ಶಿಕ್ಷಣಕ್ರಮದ ಪ್ರಯೋಜನ ಪಡೆದ ಮಹಿಳೆಯರು ವಿದೇಶಿ ದಾಸ್ಯದಿಂದ ದೇಶವನ್ನು ಬಿಡುಗಡೆಗೊಳಿಸಲು ನಡೆಸಿದ ಹೋರಾಟಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡರು. ಇನ್ನಿತರರೂ ಅವರನ್ನು ಅನುಕರಿಸಿದರು.

# ಸಂದರ್ಭ ಸೂಚಿ

೧. ಶ್ರೀವಳ್ಳಿ, ಟಿ.ಎಸ್: ೨೦೦೦, ಸರಸ್ವತಿ ಬಾಯಿ ರಾಜಾವಾಡೆ, ಶಿವರಾಮ ಕಾರಂತ ಅಧ್ಯಯನ ಕೇಂದ್ರ, ಪುತ್ತೂರು, ಪುಟಗಳು ೧-೩.

೨. ನಿರಂತರ - ಬಿ. ವಿ. ಕಕ್ಕಿಲ್ಲಾಯ ಸಂಭಾವನಾ ಗ್ರಂಥ: ೨೦೦೯, ಎಂ ಎಸ್. ಕೃಷ್ಣನ್ ಸ್ಮರಣ ಸಂಸ್ಥೆ ಬೆಂಗಳೂರು, ಪುಟ ೩೧೯.

೩. ಬಿ. ಸುರೇಂದ್ರ ರಾವ್ : ೨೦೧೦, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಪುಟಗಳು ೨೦೩-೨೦೪, ೨೨೦.

೪. ಜೆರಾಲ್ಡಿನ್ ಫೋಬ್ಸ್ (ಮೂಲ) ಎಚ್. ಎಸ್ ಶ್ರೀಮತಿ (ಅನು): ೨೦೦೧, ಆಧುನಿಕ ಭಾರತದಲ್ಲಿ ಮಹಿಳೆ, ಪುಟಗಳು ೪೯-೫೦.

೫. ಶ್ರೀವಳ್ಳಿ ಟಿ.ಎಸ್: ಪೂರ್ವೋಕ್ತ, ಪುಟ ೪.

೬. ಸುಮಿತ್ರಾಬಾಯಿ.ಎನ್: ೧೯೯೫, ವಿಚಯ, ಇಳಾ ಪ್ರಕಾಶನ, ಬೆಂಗಳೂರು, ಪುಟ ೧-೨.

೭. ಕವಿತಾ ರೈ: ೨೦೦೫, ಮಹಿಳೆ: ಅಸ್ತಿತ್ವದ ಸಂಕಥನ, ಪಗತಿ ಗ್ರಾಫಿಕ್ಸ್, ಬೆಂಗಳೂರು, ಪುಟ ೯.

೮. ಸಾರಾ ಅಬೂಬಕ್ಕರ್: ೨೦೦೭, ಸಾಹಿತ್ಯ ಸಂಸ್ಕೃತಿ ಮತ್ತು ಮಹಿಳೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟಗಳು ೯- ೧೦.

೯. ಮಿರಿಯ್ಂ ಶ್ನೀರ್, ಸಂ. ಫೆಮಿನಿಸಂ: ೧೯೭೨, ದಿ ಹಿಸ್ಟೋರಿಕಲ್ ರೈಟಿಂಗ್, ನ್ಯೂವರ್ಕ್, ವಿಂಟೇಜ್, ಪುಟ xvi.

೧೦. ನಿರಂತರ : ಪೂರ್ವೋಕ್ತ, ಪುಟ ೩೧೭.

೧೧. ಉಷಾ ಎಂ: ೨೦೦೭, ಆಧುನಿಕ ಮಹಿಳಾ ಸಾಹಿತ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭, ಪುಟ ೩೩.

೧೨. ಶ್ರೀವಳ್ಳಿ ಟಿ.ಎಸ್: ಪೂರ್ವೋಕ್ತ, ಪುಟ ೧೬.

೧೩. ಸಾರಾ ಅಬೂಬಕ್ಕರ್: ಪೂರ್ವೋಕ್ತ, ಪುಟ೨೬.

೧೪. ಶ್ರೀವಳ್ಳಿ ಟಿ.ಎಸ್: ಪೂರ್ವೋಕ್ತ, ಪುಟಗಳು ೫-೬.

೧೫. ವಿಜಯಲಕ್ಷ್ಮಿ ಕೆ.ಎಂ: ೨೦೦೮, ಹೊಸಗನ್ನಡದ ೭೫ ಲೇಖಕಿಯರು, ಕೆ.ಎಂ ವಿಜಯಲಕ್ಷ್ಮಿ, ಸುಮುಖ ಪ್ರಕಾಶನ, ಬೆಂಗಳೂರು, ಪುಟಗಳು ೧೨ ೧೫.

೧೬. ವಿಜಯಾ ದಬ್ಬೆ: ೧೯೯೭, ಹಿತ್ತಲಿಣಿಯ ಹೆಜ್ಜೆಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪುಟಗಳು ೫-೬.

೧೭. ನಿರಂತರ: ಪೂರ್ವೋಕ್ತ, ಪುಟ ೨೯೧.

೧೮. ಎಂ. ಉಷಾ: ಪೂರ್ವೋಕ್ತ, ಪುಟ ೩೩.

೧೯. ನಿರಂತರ : ಪೂರ್ವೋಕ್ತ, ಪುಟ ೩೧೯.

೨೦. ವಿಜಯಲಕ್ಷ್ಮಿ ಕೆ.ಎಂ: ಪೂರ್ವೋಕ್ತ, ಪುಟ ೧೪.

೨೧. ಸ್ವದೇಶಾಭಿಮಾನಿ, ಅಕ್ಟೋಬರ್ ೩೧, ೧೯೩೯.

೨೨. ಸ್ವದೇಶಾಭಿಮಾನಿ, ಮೇ ೩೧, ೧೯೩೦.

೨೩. ನವಯುಗ, ಫೆಬ್ರವರಿ ೩೧, ೧೯೩೦.

೨೪. ಸ್ವದೇಶಾಭಿಮಾನಿ, ಎಪ್ರಿಲ್ ೮, ೧೯೩೨.

೨೫. ಸ್ವದೇಶಾಭಿಮಾನಿ, ಎಪ್ರಿಲ್ ೧೮, ೧೯೪೦.

೨೬. ನವಯುಗ, ಫೆಬ್ರವರಿ ೯, ೧೯೩೯.

೨೭. ಸ್ವದೇಶಾಭಿಮಾನಿ, ಡಿಸೆಂಬರ್ ೮, ೧೯೩೮.

೨೮. ಸ್ವದೇಶಾಭಿಮಾನಿ, ಫೆಬ್ರವರಿ ೨೨, ೧೯೪೦.

೨೯. ಸ್ವದೇಶಾಭಿಮಾನಿ, ಡಿಸೆಂಬರ್ ೨೯, ೧೯೩೮.

೩೦. ಸ್ವದೇಶಾಭಿಮಾನಿ, ಜೂನ್ ೮, ೧೯೩೯.

೩೧. ಸ್ವದೇಶಾಭಿಮಾನಿ, ಮಾರ್ಚ್ ೨, ೧೯೩೯.

೩೨. ರಾಷ್ಟ್ರ ಬಂಧು, ಮಾರ್ಚ್ ೧೮, ೧೯೩೫.

೩೩. ನವಯುಗ, ಡಿಸೆಂಬರ್ ೨೬, ೧೯೪೦.

೩೪. ನವಯುಗ, ಫೆಬ್ರವರಿ ೧೫, ೧೯೪೦.

೩೫. ಶಿವರಾಮ ಪಡಿಕ್ಕಲ್: ೨೦೦೧, ನಾಡುನುಡಿಯ ರೂಪಕ - ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ, ಪುಟ ೭೬.

೩೬. ಸಾರಾ ಅಬೂಬಕ್ಕರ್: ಪೂರ್ವೋಕ್ತ, ಪುಟಗಳು ೧೪, ೧೫.

೩೭. ಎಚ್. ಎಸ್ ಶ್ರೀಮತಿ: ೨೦೦೬, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಸಂಪಾದಕರು, ಪ್ರಸಾರಾಂಗ, ಹಂಪಿ, ಪುಟಗಳು ೨೫೪ - ೨೫೫.

೩೮. ಮನೋರಮಾ ಭಟ್. ಎಂ : ೧೯೯೬, ದಕ್ಷಿಣ ಕನ್ನಡದ ಮೊದಲ ಲೇಖಕಿಯರು, ಕರಾವಳಿ ಲೇಖಕಿಯರ- ವಾಚಕಿಯರ ಸಂಘ, ದ.ಕ ಮತ್ತು ಕಾಸರಗೋಡು, "ಸೌಗಂಧಿಕಾ" ಉರ್ವಸ್ಟೋರ್, ಮಂಗಳೂರು, ಪುಟಗಳು ೮-೧೧.

೩೯. ಕಮಲಾ ಹಂಪನಾ: ೨೦೦೩, ಬೊಗಸೆ (ಮಹಿಳೆ ಸುತ್ತ- ಮುತ್ತ), ಫೋಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ಪುಟ ೨೨೯.

೪೦. ಮನೋರಮಾ ಭಟ್. ಎಂ. ಪೂರ್ವೋಕ್ತ, ಪುಟಗಳು ೧೨-೧೪.

೪೧. ಬಿ. ಸುರೇಂದ್ರ ರಾವ್, ಕೆ. ಚಿನ್ನಪ್ಪ ಗೌಡ: ೨೦೧೮, ಸತಿಕಮಲೆ (ಅಪ್ರಕಟಿತ),ಪುಟ ೯-೨೦

೪೨. ಎಚ್. ಎಸ್ ಶ್ರೀಮತಿ: ಪೂರ್ವೋಕ್ತ, ಪುಟ ೨೫೮.

೪೩. ಬಿ.ಎ ವಿವೇಕ ರೈ: ಮಂಗಳೂರು ದರ್ಶನ, ಸಂಪುಟ೩, ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ಪುಟ ೪೦೧.

೪೪. ಮನೋರಮಾ ಭಟ್. ಎಂ: ಪೂರ್ವೋಕ್ತ, ಪುಟಗಳು ೪೦-೪೨.

೪೫. ಅದೇ, ಪುಟಗಳು ೨೮-೨೯.

೪೬. ಅದೇ, ಪುಟಗಳು ೪೮-೫೦.

೪೭. ಶ್ರೀವಳ್ಳಿ ಟಿ.ಎಸ್: ಪೂರ್ವೋಕ್ತ, ಪುಟಗಳು ೩೮-೪೦.

೪೮. ಶ್ರೀವಳ್ಳಿ ಟಿ.ಎಸ್: ಗಿರಿಬಾಲೆ - ಚಿಂತನಾ ಲಹರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೯, ಪುಟ ೨.

೪೯. ಎಚ್. ಎಸ್ ಶ್ರೀಮತಿ: ಪೂರ್ವೋಕ್ತ, ಪುಟ ೧೩.

೫೦. ಮನೋರಮಾ ಭಟ್. ಎಂ: ಪೂರ್ವೋಕ್ತ, ಪುಟಗಳು ೬೨-೬೬.

೫೧. ಸಬೀಹಾ: ೨೦೦೯, ಚಂದ್ರಗಿರಿ, ಸಿರಿ ಪ್ರಕಾಶನ, ಬೆಂಗಳೂರು, ಪುಟ ೪೪೪.

೫೨. ಮಂಗಳೂರು ದರ್ಶನ: ಪೂರ್ವೋಕ್ತ, ಸಂಪುಟ ೩, ಪುಟ ೪೨೬.

೫೩. ರೋಹಿಣಿ ಬಿ. ಎಂ, ಲಲಿತಾ ಆರ್. ರೈ: ೨೦೦೭, ಸ್ವಾಗತ ಸಮಿತಿ, ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಉಡುಪಿ, ಪುಟಗಳು ೨-೨೩.

೫೪. ಸಬೀಹಾ: ಚಂದ್ರಗಿರಿ, ಪೂರ್ವೋಕ್ತ, ಪುಟ ೪೪೪.

೫೫. ಮಂಗಳೂರು ದರ್ಶನ: ಪೂರ್ವೋಕ್ತ, ಸಂಪುಟ ೩, ಪುಟಗಳು ೩೫೧,೩೫೯.

೫೬. ಜಿ. ರಾಮಕೃಷ್ಣ: ಹೊಸತು, ಸಂಪುಟ ೭, ಸಂಚಿಕೆ ೭, ಫೆಬ್ರವರಿ -೨೦೦೬, ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪುಟ ೩೨.

೫೭. ರಾಧಾಕೃಷ್ಣ ಉಳಿಯತಡ್ಕ: ೨೦೧೫, ಲಕ್ಷ್ಮಿ ಕುಂಜತ್ತೂರು, ಕನ್ನಡ ಸಂಘ ಕಾಂತಾವರ (ರಿ), ಕಾರ್ಕಳ, ಪುಟಗಳು ೧-೯.

೫೮. ಶ್ರೀಮತಿ ಪದ್ಮಾಶೆಣೈ ಇವರ ಸಂದರ್ಶನ, ಜುಲೈ ೯, ೨೦೧೫.

೫೯. ಸುಮತಿ ಪಾಂಗಾಳ ಇವರ ಸಂದರ್ಶನ, ಮಾರ್ಚ್ ೬, ೨೦೧೬.

೬೦. ಹರಿಕೃಷ್ಣ ಭರಣ್ಯ ೨೦೧೭, ಡಾ.ಸಬಿತಾ ಮರಕಿಣಿ, ಕನ್ನಡ ಸಂಘ ಕಾಂತಾವರ (ರಿ), ಕಾರ್ಕಳ, ಪುಟಗಳು ೧- ೧೫.

೬೧. ವಿದ್ಯಾ ಗಣೇಶ್: ೨೦೧೭, ಇಂದಿರಾ ಹಾಲಂಬಿ, ಕನ್ನಡ ಸಂಘ ಕಾಂತಾವರ (ರಿ), ಕಾರ್ಕಳ, ಪುಟಗಳು ೧-೧೩,೩೫.

೬೨. ಸಬೀಹಾ: ಚಂದ್ರಗಿರಿ, ಪೂರ್ವೋಕ್ತ, ೪೪೭.

೬೩. ಅದೇ, ಪುಟ ೧೭.

೬೪. ಸಾರಾ ಅಬೂಬಕ್ಕರ್: ಪೂರ್ವೋಕ್ತ, ಪುಟ ೧೨.

೬೫. ಎಚ್. ಎಸ್ ಶ್ರೀಮತಿ : ಪೂರ್ವೋಕ್ತ, ಪುಟ ೧೪.

೬೬. ಸಾರಾ ಅಬೂಬಕ್ಕರ್: ಪೂರ್ವೋಕ್ತ, ಪುಟ ೯.

೬೭. ಸೇಡಿಯಾಪು ಕೃಷ್ಣ ಭಟ್ಟ, ಪಿ. ಕೆ ನಾರಾಯಣ, ಕಯ್ಯಾರ ಕಿಂಞ್ಞಣ್ಣ ರೈ, ಕೆ. ಶ್ರೀನಿವಾಸ ಶರ್ಮ(ಸಂ): ೧೯೪೭, ತೆಂಕನಾಡು, ಸ್ವಾಗತ ಸಮಿತಿ, ೩೧ನೇ ಕನ್ನಡ ಸಾಹಿತ್ಯ ಸಮ್ಮೇಳನ, ಕಾಸರಗೋಡು, ದ. ಕ, ಪುಟಗಳು ೧೩೬-೧೫೮.

೬೮. ಮಂಗಳೂರು ದರ್ಶನ: ಪೂರ್ವೋಕ್ತ, ಸಂಪುಟ ೩, ಪುಟಗಳು ೨೫೮, ೨೬೦-೨೬೧.

೬೯. ಹೊಸಗನ್ನಡದ ಅರುಣೋದಯ: ಪೂರ್ವೋಕ್ತ, ಪುಟ ೨೮೮.

೭೦. ಸಬಿಹ ಭೂಮಿಗೌಡ : ೨೦೧೧, ಸಾಹಿತ್ಯದ ಸಂಘರ್ಷದ ನೆಲೆಗಳು, ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು, ಪುಟಗಳು ೨೭-೨೯.

೭೧. ಶ್ರೀನಿವಾಸ ಹಾವನೂರ : ಹೊಸಗನ್ನಡದ ಅರುಣೋದಯ: ಪೂರ್ವೋಕ್ತ, ಪುಟ ೨೮೭.

೭೨. ಶಿವರಾಮ ಪಡಿಕ್ಕಲ್: ಪೂರ್ವೋಕ್ತ, ಪುಟ ೩೭.

೭೩. ಸುದರ್ಶನ: ೧೯೭೭, ಡಾ.ತೋನ್ಸೆ ಮಾಧವ ಅನಂತ ಪೈ ಅಭಿನಂದನಾ ಗ್ರಂಥ, ಸಂಪಾದಕ ಅಡ್ಯನಡ್ಕ ಕೃಷ್ಣಭಟ್, ವಿಜಯ ಕಾಲೇಜು ಟ್ರಸ್ಟ್, ಮುಲ್ಕಿ ದಕ್ಷಿಣ ಕನ್ನಡ, ಪುಟಗಳು ೪೨೪ - ೪೩೬.

೭೪. ಶ್ರೀನಿವಾಸ ಹಾವನೂರ: ೧೯೮೩, ಗೋವಿಂದ ಪೈ ಸಮಗ್ರ ವಾಙ್ಮಯ ಸಮೀಕ್ಷೆ, ರಾಷ್ಟ್ರಕವಿ ಗೋವಿಂದ ಪೈ ಶತಮಾನೋತ್ಸವ ಕೇಂದ್ರ ಸಮಿತಿ, ಉಡುಪಿ, ಪುಟ ೮೪.

೭೫. ಉಷಾ ಪಿ. ರೈ: ಪೂರ್ವೋಕ್ತ, ಪುಟಗಳು ೬೮ - ೬೯.

೭೬. ಸಬಿಹ ಭೂಮಿಗೌಡ : ಪೂರ್ವೋಕ್ತ, ಪುಟ ೬೫.

೭೭. ಶೈಲಾ ಯು: ೨೦೧೦, ಶಿವರಾಮ ಕಾರಂತ ವ್ಯಕ್ತಿ ಅಭಿವ್ಯಕ್ತಿ, ಶ್ರೀ ಬೆನಕ ಪ್ರಕಾಶನ, ಪಜೀರ್, ಪುಟಗಳು ೬೧ - ೬೩.

೭೮. ಮೋ. ಗೀತಾಂಜಲಿ ಕರಡಗಿ: ೨೦೧೦, ಯು.ಆರ್. ಅನಂತಮೂರ್ತಿಯವರ ಕಥೆಗಳು : ಒಂದು ಅಧ್ಯಯನ, ಜ್ಯೋತಿ ಪ್ರಕಾಶನ, ಮೈಸೂರು, ಪುಟಗಳು ೯೧-೯೯ ಮತ್ತು ೭೨-೮೭.

# ಅಧ್ಯಾಯ: ಆರು

## ಸ್ವಾತಂತ್ರ್ಯ ಹೋರಾಟ ಮತ್ತು ಮಹಿಳೆ

೬.೧ ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರ್ತಿಯರು

೬..೨ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ರಾಷ್ಟ್ರೀಯ ಹೋರಾಟ ಮತ್ತು ಮಹಿಳೆ

# ಅಧ್ಯಾಯ : ಆರು

## ಸ್ವಾತಂತ್ರ್ಯ ಹೋರಾಟ ಮತ್ತು ಮಹಿಳೆ

ಹತ್ತೊಂಭತ್ತನೆಯ ಶತಮಾನದಲ್ಲಿ ಆಧುನಿಕ ಪಾಶ್ಚಿಮಾತ್ಯ ವಿದ್ಯಾಭ್ಯಾಸ ಮತ್ತು ಆಲೋಚನೆಗಳ ಫಲವಾಗಿ, ಹೆಚ್ಚು ಜನ ಭಾರತೀಯರಲ್ಲಿ ಆಧುನಿಕ ವೈಚಾರಿಕ, ಜಾತ್ಯಾತೀತ, ಪ್ರಜಾಪ್ರಭುತ್ವವಾದಿ ಮತ್ತು ರಾಷ್ಟ್ರೀಯ ರಾಜಕೀಯ ದೃಷ್ಟಿಕೋನ ಅಂತರ್ಗತವಾಗಿತು.[೧] ಯುರೋಪಿನ ದೇಶಗಳ ರಾಷ್ಟ್ರೀಯ ಚಳುವಳಿಗಳ ಬಗ್ಗೆ ಅಧ್ಯಯನ ಮಾಡಿದ ಶಿಕ್ಷಿತರು ಅದನ್ನು ಮೆಚ್ಚಿ ಅನುಕರಿಸಲೂ ಸಹ ಆರಂಭಿಸಿದರು. ರೂಸೋ, ಪೇಯ್ನ್, ಜಾನ್ ಸ್ಟುವರ್ಟ್ ಮತ್ತು ಇತರ ಪಾಶ್ಚಿಮಾತ್ಯ ಚಿಂತಕರು ಅವರ ರಾಜಕೀಯ ಮಾರ್ಗದರ್ಶಿಗಳಾದರೆ, ಮ್ಯಾಜಿನಿ, ಗ್ಯಾರಿಬಾಲ್ಡಿ ಮತ್ತು ಐರಿಷ್ ರಾಷ್ಟ್ರೀಯ ನಾಯಕರು ಅವರ ರಾಜಕೀಯ ವೀರರಾದರು. ವಿದ್ಯಾವಂತ ಭಾರತೀಯರೇ ಮೊದಲು ವಿದೇಶಿ ದಾಸ್ಯದಿಂದ ತೇಜೋವಧೆಗೊಳಗಾಗಿ ತಮ್ಮ ಆಲೋಚನೆಯಲ್ಲಿ ಆಧುನಿಕರಾಗುವ ಮೂಲಕ ವಿದೇಶೀ ಆಳ್ವಿಕೆಯ ದುಷ್ಪರಿಣಾಮಗಳನ್ನು ಅಧ್ಯಯನ ಮಾಡುವ ಸಾಮರ್ಥ್ಯವನ್ನು ಗಳಿಸಿದರು.

ವಿದೇಶಿ ಆಡಳಿತದ ಸ್ಪರ್ಧಿಯಾಗಿ ಹುಟ್ಟಿಕೊಂಡ ಭಾರತದ ರಾಷ್ಟ್ರೀಯತೆಯು ಭಾರತೀಯರಲ್ಲಿ ರಾಷ್ಟ್ರೀಯ ಮನೋಭಾವದ ಬೆಳವಣಿಗೆಗೆ ಸಹಾಯ ಮಾಡಿತು. ರಾಷ್ಟ್ರೀಯ ಚಳವಳಿಯ ಬೆಳವಣಿಗೆಗೆ ಬ್ರಿಟಿಷ್ ಆಡಳಿತದ ಪ್ರತ್ಯಕ್ಷ ಮತ್ತು ಪರೋಕ್ಷ ಸನ್ನಿವೇಶಗಳೇ ವಿವಿಧ ಅವಕಾಶಗಳನ್ನು ಒದಗಿಸಿದವು. ೧೮೭೦ರ ಹೊತ್ತಿಗೆ ಭಾರತದ ರಾಜಕೀಯ ಸಂದರ್ಭದಲ್ಲಿ ಭಾರತದ ರಾಷ್ಟ್ರೀಯತೆಯು ಚಾಲನೆ ಪಡೆದು ಒಂದು ಪ್ರಬಲ ಶಕ್ತಿಯಾಗಿ ರೂಪುಗೊಂಡಿತು.

೧೮೮೫ರ ಡಿಸೆಂಬರ್ ತಿಂಗಳಿನಲ್ಲಿ ಸ್ಥಾಪಿತವಾದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯು ಅಖಿಲ ಭಾರತ ಮಟ್ಟದಲ್ಲಿ ರಾಷ್ಟ್ರೀಯ ಚಳವಳಿಯ ಮೊದಲ ಸಂಘಟಿತ ಅಭಿವ್ಯಕ್ತಿಯಾಯಿತು. ಹ್ಯೂಮ್ ಕಾಂಗ್ರೆಸ್ ಸ್ಥಾಪನೆಯನ್ನು ಪ್ರೋತ್ಸಾಹಿಸುವುದರಲ್ಲಿ ಆತನಿಗೆ ಇದ್ದ ಮುಖ್ಯ ಉದ್ದೇಶವೆಂದರೆ ವಿದ್ಯಾವಂತ ಭಾರತೀಯರಲ್ಲಿ ಹೆಚ್ಚುತ್ತಿದ್ದ ಅತೃಪ್ತಿಯನ್ನು ಹೊರಹಾಕಲು ಬೇಕಾದ ಒಂದು 'ಸುರಕ್ಷಾ ಕವಾಟ' ವನ್ನು ನಿರ್ಮಾಣ ಮಾಡುವುದೇ ಆಗಿತ್ತು. ಆದರೆ ಇದು ಭಾರತದ ಸ್ವಾತಂತ್ರ್ಯ ಚಳವಳಿಗೆ ಸಣ್ಣ ಪ್ರಮಾಣದಲ್ಲಾದರೂ, ವ್ಯವಸ್ಥಿತವಾದ ಹೋರಾಟಕ್ಕೆ ಚಾಲನೆ ನೀಡಿತು. ವಸಾಹತುಶಾಹಿ ಆಡಳಿತದ ವಿರುದ್ಧ ಹೋರಾಟದ ಸಂದರ್ಭದಲ್ಲಿ ರಾಷ್ಟ್ರೀಯವಾದಿಗಳು ತಮ್ಮ ಸಾಂಪ್ರದಾಯಿಕ, ಪರಂಪರಾಗತ ರಾಷ್ಟ್ರೀಯ ಸಂಸ್ಕೃತಿಯ

ಅನನ್ಯತೆಯನ್ನು ಕಾಪಾಡಿಕೊಳ್ಳಲು ಸನ್ನದ್ಧರಾದರು. ಆಧ್ಯಾತ್ಮಿಕ ಕ್ಷೇತ್ರದ ರಕ್ಷಕಿಯಾಗಿ ಸ್ತ್ರೀಯನ್ನು ಗುರುತಿಸಿಕೊಂಡು ಆಕೆಯನ್ನು ಗೃಹದೇವತೆಯಾಗಿ ಚಿತ್ರಿಸುತ್ತಾ, ಆ ಕ್ಷೇತ್ರದ ಪೂಜಾರಿಯಾಗಿಸಲು ಸಾಂಪ್ರದಾಯಿಕ ಮನೋಧರ್ಮದ ಆಧುನಿಕರು ಹೆಣಗಿದರು.[೨] ಸ್ವಾತಂತ್ರ್ಯ ಆಂದೋಲನದಲ್ಲಿ ಸ್ತ್ರೀಯಾಗಿ ತೊಡಗಿಸಿಕೊಂಡು, ಸ್ವಂತ ಕಷ್ಟ ಸುಖಗಳ ಪರಿವೆಯಿಲ್ಲದೆ ಆಹೋರಾತ್ರಿ ದುಡಿದು ತಮ್ಮ ಬದುಕನ್ನು ಸಾರ್ಥಕಗೊಳಿಸಿ, ಕಾಲಚಕ್ರದಲ್ಲಿ ಮರೆಯಾದ ಮಹಿಳೆಯರು ನೂರಾರು ಮಂದಿ. ಆದರೆ ಇವರಲ್ಲಿ ಪ್ರಧಾನವಾಹಿನಿಯಲ್ಲಿ ಗುರುತಿಸಿಕೊಂಡು ಜನಮನದಲ್ಲಿ ಉಳಿದವರು ಬೆರಳೆಣಿಕೆಯಷ್ಟು ಮಂದಿ ಮಾತ್ರ.[೩]

ಹತ್ತೊಂಭತ್ತನೆಯ ಶತಮಾನ ಹಲವಾರು ಮಹತ್ವದ ಸಾಧನೆ ಸಿದ್ಧಿಗಳ ಸ್ಮರಣೀಯ ಕಾಲವಾಗಿದೆ. ನೂರಾರು ವರ್ಷಗಳ ದಾಸ್ಯ ಪಂಜರದಲ್ಲಿ ನರಳುತ್ತಿದ್ದ ರಾಷ್ಟ್ರ ಸಿಂಹ ಕೆರಳಿ ಗರ್ಜಿಸತೊಡಗಿತು. ಹೊರಗಿನ ನಿರ್ಬಂಧದಿಂದ ಬಿಡುಗಡೆಯಾಗಬೇಕೆಂಬ ಪ್ರಬಲಾಕಾಂಕ್ಷೆಯೊಂದಿಗೆ ಒಳಗಿನ ಆತ್ಮಶಕ್ತಿಯೂ ಉದ್ದೀಪನಗೊಂಡಿತು. ಇಂತಹ ಅನುಪಮ ಸಾಹಸದ ಅಸದೃಶ ತ್ಯಾಗದ, ನಿರಂತರ ಪ್ರಯತ್ನದ ಉತ್ತಮಫಲಸಿದ್ಧಿಯೆಂದರೆ ಭಾರತ ದೇಶ ಪಡೆದ ಸ್ವಾತಂತ್ರ್ಯದ ಅಮೃತ.[೪] ಹೊಸವಿಚಾರಗಳನ್ನು ತನ್ನದಾಗಿ ಮಾಡಿಕೊಂಡಿದ್ದ ಇಲ್ಲಿಯ ಒಂದು ವರ್ಗ ವಸಾಹತುಶಾಹಿಯನ್ನು ವಿರೋಧಿಸಲು ಆರಂಭಿಸಿತು. ಅದು ತನ್ನೊಂದಿಗೆ ಇತರ ವರ್ಗಗಳನ್ನು ತೆಕ್ಕೆಗೆ ತೆಗೆದುಕೊಂಡಿತು. ಅವುಗಳ ಸಹಾಯದಿಂದ ರಾಷ್ಟ್ರೀಯತೆಯ ಚಳವಳಿ ಆರಂಭಿಸಿತು. ಈ ಹೋರಾಟವು ಭಾರತ ಎಂಬ ರಾಷ್ಟ್ರ ಒಂದನ್ನು ಪರಿಭಾವಿಸಿಕೊಂಡು ಅದಕ್ಕೊಂದು ಚರಿತ್ರೆಯನ್ನು ಕಲ್ಪಿಸಿ ಅದನ್ನು ರೂಪಿಸಲು ಯತ್ನಿಸಿತು. ಆಡಳಿತ ದೃಷ್ಟಿಯಿಂದ ಬ್ರಿಟಿಷ್ ವಸಾಹತುಶಾಹಿ ಅದಕ್ಕೊಂದು ರೂಪವನ್ನು ನೀಡಿತ್ತು. ರೈಲು, ಅಂಚೆ, ಶಿಕ್ಷಣ ಇತ್ಯಾದಿಗಳು ಭಾರತವನ್ನು ಒಂದು ರಾಷ್ಟ್ರವಾಗಿ ಪರಿಭಾವಿಸಲು ಪ್ರೇರಕವಾಗಿದ್ದವು.[೫]

ಭಾರತದಲ್ಲಿ ಮಿಷನರಿಗಳ ಮತಪ್ರಸಾರ, ಬ್ರಿಟಿಷರ ಆಡಳಿತ ಪದ್ಧತಿ, ಇಂಗ್ಲಿಷ್ ವಿದ್ಯಾಭ್ಯಾಸ ಇವುಗಳ ಫಲವಾಗಿ ಹುಟ್ಟಿಕೊಂಡ ದೇಶೀಯ ವಿದ್ಯಾವಂತ ವರ್ಗದ ಅಂತರಂಗದಲ್ಲಿ ರಾಷ್ಟ್ರೀಯತೆಯ ಮನೋಭಾವ ಮೊಳಕೆಯೊಡೆದು ೧೯ನೇ ಶತಮಾನದ ಉತ್ತರಾರ್ಧದಲ್ಲಿ ಎದ್ದು ತೋರಲಾರಂಭಿಸಿತು. ಭಾರತದ ಅನೇಕ ಸತ್ವಶಾಲಿ ಪರಂಪರೆಗಳನ್ನು 'ಇಂಗ್ಲಿಷ್ ವಿದ್ಯಾವಂತ ವರ್ಗ' ಎನ್ನುವ ಒಂದು 'ಮೊನೋಲಿಥಿಕ್' ಅಚ್ಚಿನಲ್ಲಿ ಸಮಗ್ರತೆಗೆ ತಂದುಕೊಳ್ಳುವುದು ಬ್ರಿಟಿಷ್ ಆಡಳಿತದ ಉದ್ದೇಶವೂ ಆಗಿತ್ತು. ಆದರೆ ಪಾಶ್ಚಿಮಾತ್ಯ ವಿದ್ಯಾಭ್ಯಾಸ ಪಡೆದ ಮತ್ತು ಪಾಶ್ಚಿಮಾತ್ಯ ವೈಚಾರಿಕತೆಯನ್ನು ಒಪ್ಪಿಕೊಂಡ ಇಂಗ್ಲಿಷ್ ವಿದ್ಯಾವಂತ ವರ್ಗದಲ್ಲಿ ರಾಷ್ಟ್ರೀಯತೆಯ ಜಾಗೃತಿಯಾದುದು ಒಂದು ವೈರುಧ್ಯ.[೬] ಬ್ರಿಟಿಷರ ಆಗಮನ ತದನಂತರದ ಸ್ವಾತಂತ್ರ್ಯ ಚಳವಳಿಯ ಸುತ್ತ ನಡೆದ ನೂರಾರು ಸಣ್ಣ ಪುಟ್ಟ ಚಲನೆಗಳು ಈ ನೆಲದ ಬದುಕನ್ನು ಚಿಂತನಾ ವಿಧಾನವನ್ನು ಬದಲಿಸಿತು, ವಿಸ್ತಾರಗೊಳಿಸಿತು. ರಾಜಕೀಯ ಆಕ್ರಮಣದೊಂದಿಗೆ ನಡೆಯುವ ಸಾಂಸ್ಕೃತಿಕ ಸಂಕರವು ದಮನಿತರಿಗೆ ಅಲ್ಪ ಪ್ರಮಾಣದ ಬೆಳಕಿನ ಸೆಳಕುಗಳನ್ನು ಒದಗಿಸಿತು. ಇದರಿಂದ ಮಹಿಳಾ ಚರಿತ್ರೆಯಲ್ಲಿ ಸಣ್ಣ

ಚಲನೆಯುಂಟಾಯಿತು. ಬಾಲ್ಯವಿವಾಹ, ಸತಿಪದ್ದತಿ, ಕೇಶಮುಂಡನ, ವಿಧವಾಪದ್ದತಿಗಳ ನಿಷೇಧದ ಪ್ರಯತ್ನ ಪ್ರಾರಂಭವಾಯಿತು.[೭] ಲಾರ್ಡ್‌ಕರ್ಜನ್ ಬಂಗಾಳದ ವಿಭಜನೆ ಮಾಡಲು ನಿರ್ಧರಿಸಿದಾಗ ಮಹಿಳೆಯರ ಬೃಹತ್ ಗುಂಪು ಪ್ರತಿಭಟಿಸುವುದರ ಮೂಲಕ ರಾಜಕೀಯದಲ್ಲಿ ಕಾಣಿಸಿಕೊಂಡವು. ಇದು ಅಲ್ಲಿಯವರೆಗೆ ರಾಜಕೀಯದಲ್ಲಿ ತೊಡಗಿಸಿಕೊಳ್ಳದ ಸಮುದಾಯವನ್ನು ಇದು ತಲುಪುವಂತಾಯಿತು.[೮] ೧೮೮೯ರಲ್ಲಿ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಸಭೆ ನಡೆದಾಗ ಹತ್ತು ಮಂದಿ ಮಹಿಳೆಯರು ಹಾಜರಿದ್ದು, ಇವರಲ್ಲಿ ಬಂಗಾಳಿ ಬರಹಗಾರ್ತಿಯಾದ ಸ್ವರ್ಣ ಕುಮಾರಿ ದೇವಿ, ಬಂಗಾಳದ ಪ್ರಥಮ ವೈದ್ಯೆಯವರಾದ ಕದಂಬಿನಿ ಗಂಗೂಲಿ, ಪಂಡಿತ ರಮಾಬಾಯಿ, ಸಮಾಜ ಸುಧಾರಕಿ ಮತ್ತು ಸಂಸ್ಕೃತ ವಿದ್ವಾಂಸರು ಸೇರಿದ್ದರು. ಮರುವರ್ಷ ಕಲ್ಕತ್ತಾದಲ್ಲಿ ಸಭೆ ಸೇರಿದಾಗ ಸ್ವರ್ಣಕುಮಾರಿ ದೇವಿ ಮತ್ತು ಕದಂಬಿನಿ ಗಂಗೂಲಿಯವರು ಪ್ರತಿನಿಧಿಗಳಾಗಿ ಆಗಮಿಸಿದ್ದರು.[೯]

ರಾಷ್ಟ್ರೀಯ ಹೋರಾಟದ ಸಂದರ್ಭದಲ್ಲಿ ಮಹಿಳೆಯರು ವಿದೇಶಿ ಬಟ್ಟೆಗಳನ್ನು, ಮದ್ಯವನ್ನು ಮಾರುತ್ತಿದ್ದ ಅಂಗಡಿಗಳ ಎದುರು ಪ್ರತಿಭಟನೆ ಮಾಡಿ, ಖಾದಿಯ ಪ್ರಚಾರ ಕೈಗೊಂಡು ಅಸಹಕಾರ ಚಳವಳಿಗಳಲ್ಲಿ ಭಾಗವಹಿಸಿ ಜೈಲುಗಳಿಗೆ ಹೋದರು. ಸಾರ್ವಜನಿಕ ಪ್ರಚಾರದ ಸಂದರ್ಭದಲ್ಲಿ ಲಾಠಿಯ ಹೊಡೆತವನ್ನು ತಿಂದು, ಆಶ್ರುವಾಯು ಮತ್ತು ಗುಂಡಿನ ರುಚಿ ನೋಡಿದರು. ಕ್ರಾಂತಿಕಾರಿ ಬಂಡಾಯ ಪ್ರತಿಭಟನೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡರು ಮತ್ತು ಚುನಾವಣೆಗಳಲ್ಲಿ ಶಾಸಕರಿಗೆ ಮತ ಹಾಕಿ ನಂತರದಲ್ಲಿ ತಾವೇ ಅಭ್ಯರ್ಥಿಗಳಾಗಿ ಸ್ಪರ್ಧಿಸಿದರು.[೧೦] ರಾಷ್ಟ್ರೀಯ ಚಳವಳಿಯಲ್ಲಿ ಮಹಿಳೆ ಮೆರೆದ ನಾಯಕತ್ವ ಮತ್ತು ಸಾಹಸ ಮುಂದೆ ಭವಿಷ್ಯದಲ್ಲಿ ಶಾಶ್ವತ ಗೌರವ ದೊರಕಲು ಸಾಧ್ಯವಾಯಿತು. ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಮೂವರು ಮಹಿಳೆಯರು ರಾಷ್ಟ್ರೀಯ ನಾಯಕಿಯರಾಗಿ ಹೊರಹೊಮ್ಮಿ ಭವಿಷ್ಯದ ಪೀಳಿಗೆಗೆ ದಾರಿದೀಪವಾದರು. ಇವರಲ್ಲಿ ಮದಾಂ ರುಸ್ತುಂ ಕಾಮ ಭಿಕಾಜಿ ಮತ್ತು ಸರೋಜಿನಿ ನಾಯ್ಡು ಸ್ವದೇಶಿಯರಾಗಿದ್ದು, ಅನಿಬೆಸೆಂಟ್ ಐರಿಷ್ ಮೂಲದವರಾಗಿದ್ದರು. ಮದಾಂ ಕಾಮಾರವರು ಪಾರ್ಸಿ ಜನಾಂಗಕ್ಕೆ ಸೇರಿದ್ದು ವಿದ್ಯಾರ್ಥಿ ದೆಸೆಯಿಂದಲೇ ಓದಿನಲ್ಲಿ ಮುಂದಿದ್ದರು. ವಿವಾಹದ ನಂತರವೂ ದೇಶಾಭಿಮಾನದಲ್ಲಿ ಕಾರ್ಯಮಗ್ನಳಾದರು. ಸವಾರ್ಕರ್ ನಡೆಸುತ್ತಿದ್ದ ಕ್ರಾಂತಿಕಾರಿ ಚಟುವಟಿಕೆಗಳಲ್ಲೂ ಅವಳು ಸಕ್ರಿಯ ಪಾತ್ರ ವಹಿಸಿದ್ದರು.[೧೧] ರಷ್ಯಾದ ಮಾದರಿಯಲ್ಲಿ ಬ್ರಿಟಿಷ್ ಆಳ್ವಿಕೆಯನ್ನು ಉರುಳಿಸಬೇಕೆಂದು ಕರೆ ನೀಡಿದರು.

ರಾಷ್ಟ್ರೀಯ ಹೋರಾಟದಲ್ಲಿ ಮಹಿಳೆಯರ ಭಾಗವಹಿಸುವಿಕೆಯ ಬಗ್ಗೆ ಭಾರತೀಯ ರಾಷ್ಟ್ರೀಯ ಕಾಂಗ್ರೆಸಿನ ನಾಯಕರುಗಳಲ್ಲಿ ಸಮಾನವಾದ ನಿರ್ಧಾರವಿರಲಿಲ್ಲ. ಧರಸನ ಸತ್ಯಾಗ್ರಹವನ್ನು ಸರೋಜಿನಿ ನಾಯ್ಡುರವರ ನೇತೃತ್ವದಲ್ಲಿ ನಡೆಸಲು ಕೇಳಿಕೊಂಡಾಗ ಗಾಂಧೀಜಿಯವರ ಕೆಲವು ಸಹೋದ್ಯೋಗಿಗಳು ಸಹಮತ ಸೂಚಿಸದೆ, ಪರಿಸ್ಥಿತಿಯನ್ನು ಗಂಭೀರವೆಂದು ಪರಿಗಣಿಸಿದರು. ಆಗ ಸರೋಜಿನಿ ನಾಯ್ಡುರವರು

‘ರಾಷ್ಟ್ರೀಯ ಹೋರಾಟದಲ್ಲಿ ಮಹಿಳೆಯರೂ ಕೂಡ ತಮ್ಮ ಪುರುಷ ಸಹವರ್ತಿಗಳ ನೋವು ಮತ್ತು ತ್ಯಾಗಗಳನ್ನು ಸಮಾನವಾಗಿ ಹಂಚಿಕೊಂಡು ಹೋರಾಡುವ ಕಾಲ ಬಂದಿದೆ’ ಎಂದು ಘೋಷಿಸಿದರು. ಸಾರ್ವಜನಿಕ ಪ್ರಾತ್ಯಕ್ಷಿಕೆಗಳಲ್ಲಿ ಮಹಿಳೆಯರು ಭಾಗವಹಿಸುವಾಗ ಪುರುಷರ ಸಹಾಯಯಾಚಿಸದೆ ತಾವೇ ಚಟುವಟಿಕೆಗಳ ರೂಪುರೇಷೆಯನ್ನು ತಯಾರಿಸಬೇಕೆಂದು ಗಾಂಧೀಜಿಯವರು ಮಹಿಳೆಯರಿಗೆ ತಿಳಿಸಿದರು.[೧೨] ಆನಿಬೆಸೆಂಟ್ ಮತ್ತು ಸರೋಜಿನಿ ನಾಯ್ಡು ಭಾರತದಲ್ಲಿ ಮೊದಲ ಮಹಿಳಾ ಚಳವಳಿಗಳ ಪ್ರಮುಖ ವಕ್ತಾರರಾಗಿದ್ದಾರೆ. ಆನಿಬೆಸೆಂಟರು ತನ್ನ ನಿಯತಕಾಲಿಕೆಯಾದ ‘ನ್ಯೂ ಇಂಡಿಯಾ’ ಮತ್ತು ‘ಕಾಮನ್ ವೀಲ್’ ನಲ್ಲಿ ಮಹಿಳೆಯರ ಕುರಿತಂತೆ ಲೇಖನಗಳನ್ನು ಬರೆದು ರಾಷ್ಟ್ರೀಯ ಚಟುವಟಿಕೆಗಳಲ್ಲಿ ಭಾಗವಹಿಸಲು ಪ್ರೋತ್ಸಾಹಿಸಿದರು.[೧೩] ‘ನ್ಯೂ ಇಂಡಿಯಾ’ ಸಂಪಾದಕಿಯಾದ ಆನಿಬೆಸೆಂಟ್ ಬ್ರಿಟಿಷ್ ವಿರೋಧಿ ಮತ್ತು ಮಿಷನರಿ ವಿರೋಧಿ ಭಾಷಣ ಮತ್ತು ಲೇಖನಗಳನ್ನು ಪ್ರದರ್ಶಿಸುತ್ತಿದ್ದು ಮೊದಲನೇ ಜಾಗತಿಕ ಯುದ್ಧದ ನಂತರ ಸ್ವಯಂ ಆಡಳಿತದ ಸಮರ್ಥನೆಯನ್ನು ತನ್ನ ಲೇಖನಗಳಲ್ಲಿ ನೀಡಿದರು.[೧೪]

ಸ್ವಯಂ ಆಡಳಿತಕ್ಕಾಗಿ ಹೋಮ್ ರೂಲ್ ಲೀಗ್ ಸ್ಥಾಪಿಸುವುದರೊಂದಿಗೆ ಭಾರತ ಮತ್ತು ಇಂಗ್ಲೆಂಡಿನಲ್ಲಿ ಬ್ರಿಟಿಷ್ ವಿರೋಧಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡರು. ಅವರು ತಮ್ಮ ಲೇಖನಗಳಲ್ಲಿ ಬ್ರಿಟಿಷ್ ಆಡಳಿತ ಮತ್ತು ದೇಶೀಯ ರಾಜರುಗಳ ಆಳ್ವಿಕೆಯ ವ್ಯತ್ಯಾಸಗಳ ಕುರಿತು ಬರೆಯುತ್ತಾ ಬ್ರಿಟಿಷ್ ಆಳ್ವಿಕೆಯ ನ್ಯೂನ್ಯತೆಗಳ ಕುರಿತು ಹೆಚ್ಚಿನ ಗಮನಹರಿಸಿದರು. ಆನಿಬೆಸೆಂಟರ ಲೇಖನಗಳು ಮತ್ತು ಭಾಷಣಗಳು ಬ್ರಿಟಿಷರ ನಿದ್ದೆಗೆಡಿಸಿದ್ದವು.[೧೫] ಬ್ರಿಟಿಷರು ಭಾರತದ ವಿವಿಧ ಪತ್ರಿಕೆಗಳ ಅವಲೋಕನ ನಡೆಸಿರುವುದು ಅವರ ಗುಪ್ತ ವರದಿಗಳಲ್ಲಿ ಕಂಡು ಬರುತ್ತದೆ. ೧೯೧೭ರ ಜೂನ್ ೨೧ರಂದು ಮದರಾಸಿನ ಯಂಗ್ ಮೆನ್ಸ್ ಅಸೋಸಿಯೇಷನ್ ಹಾಲಿನಲ್ಲಿ ನಡೆದ ಸಭೆಯಲ್ಲಿ ಡಾ. ನಂಜುಂಡ ರಾವ್ ಸಲಹೆಯ ಮೇರೆಗೆ ಬೆಸೆಂಟ್ ಫಂಡ್ ಇದಕ್ಕಾಗಿ ಹಣ ಒಗ್ಗೂಡಿಸಲಾಯಿತು.

ಮದ್ರಾಸ್ ಪ್ರೆಸಿಡೆನ್ಸಿಯ ಚಿತ್ತೂರಿನಲ್ಲಿ ನಡೆದ ಜಿಲ್ಲಾ ಸಭೆಯಲ್ಲಿ ಆನಿಬೆಸೆಂಟರು ‘ಒತ್ತಾಯಪೂರ್ವಕವಾಗಿ ನನ್ನ ಬಾಯಿ ಮುಚ್ಚಿಸುವವರೆಗೆ ನಾನು ನನ್ನ ಭಾಷಾ ವೈಖರಿಯನ್ನು ಬದಲಾಯಿಸುವುದಿಲ್ಲ’ ಎಂದಾಗ[೧೬] ಅಮೇರಿಕದ ಮಿಷನರಿ ಜಿಲ್ಲಾ ನ್ಯಾಯಾಧೀಶರಿಗೆ ಪತ್ರ ಬರೆದು ‘ಬೆಸೆಂಟರು ರಾಷ್ಟ್ರದಲ್ಲಿ ಶಾಂತಿ ಕದಡುವ ಕಾರ್ಯದಲ್ಲಿ ತೊಡಗಿರುತ್ತಾರೆ’ ಎಂದು ಆಪಾದಿಸಿದನು.[೧೭] ಬೆಸೆಂಟರ ನಿಯತಕಾಲಿಕ ಪತ್ರಿಕೆಯಾದ ‘ನ್ಯೂ ಇಂಡಿಯಾ’ದಲ್ಲಿ ಬಂದ ಪ್ರಚೋದನಕಾರಿ ಬರಹಗಳಿಂದ ಆ ಪತ್ರಿಕೆಯನ್ನು ಸರಕಾರದ ಹತೋಟಿಗೆ ತೆಗೆದುಕೊಳ್ಳಬೇಕೆಂದು ಮನಗಂಡು ೧೯೧೬ರಲ್ಲಿ ಭಾರತೀಯ ಪತ್ರಿಕಾ ಕಾಯಿದೆ ಅನ್ವಯ ಭದ್ರತಾ ಮೊತ್ತವನ್ನಿರಿಸಲು ಪ್ರೆಸಿಡೆನ್ಸಿಯ ಮುಖ್ಯ ನ್ಯಾಯಾಧೀಶರ ಮೂಲಕ ಆಕೆಯನ್ನು ಸಮೀಪಿಸಿ ನಂತರದಲ್ಲಿ ಪತ್ರಿಕೆ ಪ್ರಕಟಗೊಳ್ಳಲು ಅವಕಾಶ ನೀಡಲು ತೀರ್ಮಾನಿಸಲಾಯಿತು.[೧೮] ೧೯೧೭ರಲ್ಲಿ

ರಾಜಕೀಯ ಚಟುವಟಿಕೆಗಳಲ್ಲಿ ತೊಡಗುವಿಕೆಯನ್ನು ತಡೆಯಲು ಬೆಸೆಂಟರನ್ನು ಬ್ರಿಟಿಷರು ಬಂಧಿಸಿದರು.[೧೯] ಅವರ ಲೇಖನಗಳು ಮತ್ತು ದೇಶಾಭಿಮಾನದ ಭಾಷಣಗಳು ಬ್ರಿಟಿಷರಿಗೆ ದೊಡ್ಡ ಸವಾಲಾಗಿತ್ತು. ಸ್ವದೇಶಿ ಆಳ್ವಿಕೆಯ ಸಹವರ್ತಿಯಾಗಿ ಬೆಸೆಂಟರು ಹೋಮ್ ರೂಲ್ ಚಳವಳಿಯ ಮೂಲಕ ವಿದೇಶಿ ಆಳ್ವಿಕೆಯನ್ನು ವಿರೋಧಿಸಿದಾಗ ಭಾರತೀಯ ಪತ್ರಿಕೆಗಳು ಆನಿಬೆಸೆಂಟರ ಹೇಳಿಕೆಗಳಿಗೆ ಹೆಚ್ಚಿನ ಮಹತ್ವ ನೀಡಿತು. ಬ್ರಿಟಿಷರ ವರದಿಗಳಲ್ಲಿ ಆನಿಬೆಸೆಂಟರ ಭಾಷಣಗಳ ಕುರಿತು ಟೀಕೆ ಟಿಪ್ಪಣಿಗಳು ಕಂಡು ಬರುತ್ತದೆ. ಆದರೆ, ಯಾವುದೇ ಟೀಕೆಗಳಿಗೆ ಹೆದರದ ಬೆಸೆಂಟರ ಮಾತುಗಳು ನಿಜಕ್ಕೂ ಪ್ರಚೋದನಕಾರಿಯಾಗಿದ್ದು, ಪಾಶ್ಚಾತ್ಯ ಪದ್ಧತಿಯಿಂದಲೇ ಲಿಂಗವೆಂಬ ಅಡ್ಡಿ ತೊಡಕಾಗಿದೆ ಎಂದು ವಾದಿಸಿದರು.

ಮಹಿಳೆಯರಿಗೆ ಮತದಾನದ ಹಕ್ಕು ನೀಡುವುದನ್ನು ವಿರೋಧಿಸುವವರ ಕುರಿತು 'ಹಿಂದೂ ಸಂಪ್ರದಾಯದಂತೆ ಸಾರ್ವಜನಿಕವಾಗಿ ಮಹಿಳೆಯರಿಗೆ ನೀಡುವ ಗೌರವಯುತ ಭಾವನೆಗೆ ಚ್ಯುತಿ ತರುವಂತಿದೆ' ಎಂದರು. ಮಹಿಳೆಯರಿಗೆ ಮತದಾನಹಕ್ಕು ನೀಡುವ ಕುರಿತಾಗಿ ಸರೋಜಿನಿ ನಾಯ್ಡುರವರ ನೇತೃತ್ವದಲ್ಲಿ, ಮಾರ್ಗರೆಟ್ ಕಜಿನ್ಸ್, ಆನಿಬೆಸೆಂಟ್, ದೊರೊತಿ ಜಿನರಾಜದಾಸ, ಉಮಾನೆಹರು, ರಮಾಬಾಯಿ ರಾನಡೆ ಮತ್ತು ಅಬಲ ಬೋಸರು ಭಾರತದ ರಾಜ್ಯ ಕಾರ್ಯದರ್ಶಿಯಾದ ಎಡ್ವಿನ್ ಮೋಂಟಗೋನನ್ನು ಭೇಟಿ ಮಾಡಿದರು. ಮದ್ರಾಸ್ ಪ್ರೆಸಿಡೆನ್ಸಿ ಮೊತ್ತ ಮೊದಲು ಲಿಂಗಾಧಾರಿತ ಅಸಮಾನತೆ ರದ್ದುಪಡಿಸಿ ಡಾ. ಮುತ್ತುಲಕ್ಷ್ಮಿ ರೆಡ್ಡಿಯವರನ್ನು ಶಾಸಕಾಂಗ ಸಭೆಯ ಸದಸ್ಯರನ್ನಾಗಿ ನೇಮಿಸಿತು.[೨೦] ಮದ್ರಾಸ್ ಪ್ರೆಸಿಡೆನ್ಸಿಯ ಪ್ರಥಮ ಮಹಿಳಾ ವೈದ್ಯೆ ಡಾ. ಮುತ್ತು ಲಕ್ಷ್ಮಿ ರೆಡ್ಡಿಯವರು ಬ್ರಹ್ಮಸಮಾಜದಿಂದ ಪ್ರಭಾವಿತರಾಗಿ ಸ್ತ್ರೀಯರು ಮತ್ತು ಮಕ್ಕಳ ಪುರೋಗಮನಕ್ಕೆ ವಿಶೇಷ ಹೋರಾಟ ಆರಂಭಿಸಿದರು.

೧೯೨೬ರಲ್ಲಿ ಮದ್ರಾಸ್ ವಿಧಾನ ಪರಿಷತ್ತಿಗೆ ಸ್ಪರ್ಧಿಸಿ ಚುನಾವಣೆಯಲ್ಲಿ ಗೆದ್ದ ಪ್ರಥಮ ಮಹಿಳೆಯಾಗಿ ಪರಿಷತ್ತಿನ ಉಪಾಧ್ಯಕ್ಷಿಣಿಯಾಗಿಯೂ ಆಯ್ಕೆಗೊಂಡಳು. ಬಾಲ್ಯವಿವಾಹವನ್ನು ವಿರೋಧಿಸಿ, ಬಾಲಕಿಯರ ವಿವಾಹವು ೧೬ ವರ್ಷಕ್ಕೆ ಮೊದಲು ಆಗಬಾರದೆಂಬ ನಿರ್ಣಯವನ್ನು ೧೯೨೮ರಲ್ಲಿ ವಿಧಾನ ಪರಿಷತ್ತಿನಲ್ಲಿ ಅಂಗೀಕರಿಸಲು ಬಹಳ ಶ್ರಮವಹಿಸಿ ಯಶಸ್ಸು ಕಂಡಳು. ಗಾಂಧೀಜಿಯವರ ಕಾನೂನುಭಂಗದ ಕರೆಗೆ ಓಗೊಟ್ಟು ೧೯೩೦ರಲ್ಲಿ ಶಾಸಕಿಯ ಸ್ಥಾನಕ್ಕೆ ರಾಜಿನಾಮೆ ನೀಡಿದ ಆಕೆ ಅದೇ ವರ್ಷ ಲಾಹೋರಿನಲ್ಲಿ ನಡೆದ ಆಲ್ ಇಂಡಿಯಾ ವಿಮೆನ್ಸ್ ಕಾನ್ಫರೆನ್ಸ್ ಇದರ ಅಧ್ಯಕ್ಷೆಯಾದಳು. ಮಹಿಳೆಯರಿಗೆ ಮತಾಧಿಕಾರ ನೀಡಬೇಕೆಂದು ವಾದಿಸಲು ಲಂಡನ್ನಿನ ದುಂಡುಮೇಜಿನ ಮೂರನೆಯ ಪರಿಷತ್ತಿಗೆ ಹೋದ ಮಹಿಳಾ ನಿಯೋಗದಲ್ಲಿ ಈಕೆಯೂ ಇದ್ದಳು. ತಮಿಳುನಾಡು, ಆಂಧ್ರ ಪ್ರದೇಶಗಳಲ್ಲಿ ಮಹಿಳೆಯರ ಅಭಿವೃದ್ಧಿಗೆ, ಹಿಂದುಳಿದ ವರ್ಗಗಳ ಮಹಿಳೆಯರ ಸೇವೆಗಳಿಗೆ ಮುತ್ತುಲಕ್ಷ್ಮಿಯವರು ಮಾಡಿದ ಕಾರ್ಯ ಅಪಾರ.[೨೧] ಮುನ್ಸಿಪಲ್ ಇಲಾಖೆಯ ಅಧಿಸೂಚನೆಯಲ್ಲಿ ಕಂಡುಬಂದಂತೆ ಸ್ತ್ರೀ ಎಂಬ ಕಾರಣಕ್ಕಾಗಿ ಮಹಿಳೆಯರನ್ನು ಮತದಾನದ ಪ್ರಕ್ರಿಯೆಯಿಂದ ಹೊರಗಿಡಲಾಗಿತ್ತು.[೨೨] ೧೯೧೯ರ ವೇಳೆಗೆ ವಿವಿಧ ರಾಜಕೀಯ ಪಕ್ಷಗಳೂ ಮಹಿಳಾ ಮತದಾನದ ಕುರಿತಂತೆ

ಬೆಂಬಲ ಸೂಚಿಸಿದವು ಅವರಲ್ಲಿ ತಿಲಕರು, ಆನಿಬೆಸೆಂಟರು, ವಿ.ಜೆ ಪಟೇಲರು, ಯು.ಪಿ. ಮಾಧವರಾವ್, ಮಹಮ್ಮದ್‌ಅಲಿ ಜಿನ್ನಾ ಮತ್ತು ಯಾಕುಬ್ ಹಸನ್ ಮುಖ್ಯವಾಗಿದ್ದಾರೆ. ಅದೇ ರೀತಿ ವಿದ್ಯಾವಂತರ ಸಂಘಟನೆಗಳೂ ಕೂಡಾ ಮಹಿಳೆಯರಿಗೆ ಮತದಾನದ ಹಕ್ಕು ನೀಡಲು ಪ್ರೋತ್ಸಾಹಿಸಿದವು.[೨೩]

## ೬.೧ ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರ್ತಿಯರು

ಪರಕೀಯರ ಆಳ್ವಿಕೆಗೆ ಕಾರಣಾಂತರಗಳಿಂದ ಒಳಪಟ್ಟ ಭಾರತ, ಸ್ವಾತಂತ್ರ್ಯ ಪಡೆಯಲು ದೀರ್ಘಕಾಲ ಹೋರಾಟ ನಡೆಸಬೇಕಾಯಿತು. ವಿವಿಧ ವರ್ಗಗಳ ಜನಸಮುದಾಯ ಉತ್ಸಾಹದಿಂದ ಪಾಲ್ಗೊಂಡು ರಾಷ್ಟ್ರೀಯ ಭಾವನೆಯಿಂದ ಐಕ್ಯವನ್ನು ಕಾಣುವಂತೆ ಸ್ವಾತಂತ್ರ್ಯ ಹೋರಾಟವು ಅವಕಾಶ ಒದಗಿಸಿತು. ಗಾಂಧೀಜಿಯವರ ಪ್ರಭಾವದಿಂದ ರಾಷ್ಟ್ರೀಯ ಕನಸನ್ನು ಕಟ್ಟಿಕೊಳ್ಳಲು, ಸ್ವಾತಂತ್ರ್ಯ ಚಳವಳಿಯಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಯಿತು. ಕರ್ನಾಟಕದ ಸ್ವಾತಂತ್ರ್ಯ ಚಳವಳಿಯಲ್ಲಿ ನೇರವಾಗಿ ರಾಜಕೀಯ ಹೋರಾಟದಲ್ಲಿ ಭಾಗಿಗಳಾದ ಮಹಿಳೆಯರ ಸಂಖ್ಯೆ ಕಡಿಮೆ ಎನಿಸಿದರೂ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಇಲ್ಲಿನ ಮಹಿಳೆಯರದೇ ಪ್ರಧಾನ ಪಾತ್ರವಾಗಿತ್ತು. ಮಹಾತ್ಮರ ಆದೇಶದ ಮೋಡಿಗೆ ಮಣಿದು ಕರ್ನಾಟಕದಲ್ಲಿ ಸ್ತ್ರೀಯರೂ ಖಾದಿ ಪ್ರಚಾರ, ಪಾನ ನಿಷೇಧ, ಹಿಂದಿ ಪ್ರಚಾರ, ಪಿಕೆಟಿಂಗ್, ಹರಿಜನರೋದ್ಧಾರ, ಸ್ತ್ರೀ ಜಾಗೃತಿ ಕಾರ್ಯಗಳಲ್ಲಿ ಮಹಿಳೆಯರು ಸ್ಪಷ್ಟವಾದ ಭೂಮಿಕೆಯನ್ನು ನಿರ್ವಹಿಸಿದ್ದರು. ಹೀಗೆ ಸ್ವಾತಂತ್ರ್ಯ ಹೋರಾಟದಲ್ಲಿ ಪುರುಷ ಸತ್ಯಾಗ್ರಹಿಗಳಿಗೆ ಸರಿಸಮಾನರಾಗಿ ದುಡಿದ ಕರ್ನಾಟಕದ ಆಯ್ದ ಸ್ವಾತಂತ್ರ್ಯ ಹೋರಾಟಗಾರ್ತಿಯರ ಅವಲೋಕನವನ್ನು ಮಾಡಲಾಗಿದೆ.

ಭಾರತದ ಸ್ವಾತಂತ್ರ್ಯ ಸಮರದಲ್ಲಿ ಮಹಿಳೆಯರು ಭಾಗವಹಿಸುವುದು ಅತ್ಯವಶ್ಯಕವೆಂದು ತಿಳಿದಿದ್ದ ಗಾಂಧೀಜಿಯವರು ಜಾತಿ-ಭೇದ ಮತ್ತು ಸ್ತ್ರೀ ಗುಲಾಮಗಿರಿ ಭಾರತದ ಅಧಃಪತನದ ಮುಖ್ಯ ಎರಡು ಕಾರಣಗಳು ಎಂದು ನಂಬಿದ್ದರು. ಇವೆರಡರ ವಿರುದ್ಧ ಹೋರಾಡಲು ತಮ್ಮ ಅನುಯಾಯಿಗಳಿಗೆ ಕರೆಕೊಟ್ಟರಲ್ಲದೆ, ಮಹಿಳೆಯರ ಶಿಕ್ಷಣ, ಬಾಲ್ಯವಿವಾಹ ವಿರೋಧ, ವಿಧವೆಯರ ಪುನರ್ವಿವಾಹ, ವರದಕ್ಷಿಣೆ ಮತ್ತು ಕುಟುಂಬ ಯೋಜನೆ ಮುಂತಾದವುಗಳನ್ನು ತಮ್ಮ ಕಾರ್ಯಕ್ರಮಗಳಲ್ಲಿ ಸೇರಿಸಿಕೊಂಡರು. ಗಾಂಧೀಜಿಯವರು ಪ್ರಾರಂಭಿಸಿದ ಆಂದೋಲದ ಪರಿಣಾಮವಾಗಿ ದೇಶದ ಎಲ್ಲೆಡೆಗಳಲ್ಲಿಯೂ ಮಹಿಳೆಯರ ಸಭೆಗಳು ನಡೆಯಲಾರಂಭಿಸಿದವು. ಗಾಂಧೀಜಿಯವರಿಂದ ಪ್ರಭಾವಿತರಾದ ಕಮಲಾದೇವಿ ಚಟ್ಟೋಪಾಧ್ಯಾಯರು ದೇಶವ್ಯಾಪಿ ನಡೆದ ಹಲವಾರು ರಾಷ್ಟ್ರೀಯ ಚಳವಳಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ಸಿನ ಮಹಾಅಧಿವೇಶನದ ಸಂದರ್ಭ ಉಮಾಬಾಯಿ ಕುಂದಾಪುರ ಸ್ವತಃ ಮಂಗಳೂರಿಗೆ ಬಂದು ಕಮಾಲಾದೇವಿಯವರನ್ನು ಕೇಳಿಕೊಂಡಾಗ, ದೇಶಸೇವೆ ಮಾಡಬೇಕೆಂಬ ಕನಸು ಕಾಣುತ್ತಿದ್ದ ಕಮಲ ಪ್ರಥಮವಾಗಿ ಸಾರ್ವಜನಿಕ ರಂಗ

ಪ್ರವೇಶಿಸಿದರು ಮಾತ್ರವಲ್ಲದೆ, ಭಾರತವು ಸ್ವಾತಂತ್ರ್ಯ ಪಡೆಯುವವರೆಗೆ ಸೇವಾದಳದ ಸದಸ್ಯೆಯಾಗಿದ್ದರು. ೧೯೨೬ರಲ್ಲಿ ಮದ್ರಾಸ್ ರಾಜ್ಯವು ಮಹಿಳೆಯರಿಗೆ ಮತದಾನದ ಮತ್ತು ಚುನಾವಣೆಗಳಿಗೆ ಸ್ಪರ್ಧಿಸುವ ಹಕ್ಕನ್ನು ದಯಪಾಲಿಸಿತು. ಮಹಿಳೆಯರ ಪ್ರತಿನಿಧಿಯಾಗಿ ಸ್ಪರ್ಧಿಸಲು ಕಮಲಾದೇವಿಯವರನ್ನು ಏಕಮೇವ ಯೋಗ್ಯ ಹುರಿಯಾಳು ಎಂದು ಮಹಿಳೆಯರ ಪ್ರಾತಿನಿಧಿಕ ಸಭೆಯಲ್ಲಿ ನಿರ್ಧರಿಸಲಾಯಿತು. ಚುನಾವಣೆಯಲ್ಲಿ ಗೆಲ್ಲಲು ಸಾಧ್ಯವಾಗದಿದ್ದರೂ ಅವರ ಧೈರ್ಯ, ಸಂಘಟನಾ ಶಕ್ತಿ ಹೆಚ್ಚಿತು. ೧೯೨೭ರ ಪ್ರಾರಂಭದಲ್ಲಿ ಪುಣೆಯಲ್ಲಿ ನಡೆದ ಅಖಿಲ ಭಾರತ ಮಹಿಳಾ ಪರಿಷತ್ತಿನ ಅಧಿವೇಶನದಲ್ಲಿ ಕಮಲಾದೇವಿಯವರು ಸ್ವಯಂಸೇವಕಿಯಾಗಿ ದೇಶದ ಎಲ್ಲಾ ಕಡೆಯಿಂದ ಬರುತ್ತಿದ್ದ ಪ್ರತಿನಿಧಿಗಳ ವ್ಯವಸ್ಥೆಗಾಗಿ ಟೊಂಕ ಕಟ್ಟಿ ನಿಂತಿದ್ದರು. ಮಾರ್ಗರೆಟ್ ಕಜಿನ್ಸ್ ಮುಖ್ಯ ಕಾರ್ಯದರ್ಶಿನಿಯಾಗಿದ್ದರು. ಕಾರ್ಯಕಲಾಪದ ಕೊನೆಯ ದಿನ ಕಜಿನ್ಸ್ ಕಮಲಾದೇವಿಯವರನ್ನು ಕರೆದು ಕಾರ್ಯನಿರ್ವಾಹಕ ಸಮಿತಿಯು ಮುಂದಿನ ವರ್ಷ ನಿಮ್ಮನ್ನು ಮುಖ್ಯ ಕಾರ್ಯದರ್ಶಿಯನ್ನಾಗಿ ನಿಯಮಿಸಲು ನಿರ್ಧರಿಸಿದೆ ಎಂದಾಗ, ಮೊದಲು ಮನಸ್ಸು ಒಲ್ಲದಿದ್ದರೂ ನಂತರ ಸರೋಜಿನಿ ನಾಯ್ಡುರವರ ಮಧ್ಯಸ್ಥಿಕೆಯಿಂದ ಒಪ್ಪಿಕೊಂಡರು.

ಮಹಿಳಾ ಪರಿಷತ್ತು ಮಹಿಳೆಯರ ಕಲ್ಯಾಣಕ್ಕಾಗಿ ಹಲವಾರು ಕಾಯ್ದೆಗಳ ರಚನೆ ಮಾಡುವುದರಲ್ಲಿ ಯಶಸ್ವಿಯಾಗಿತ್ತು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ೧. ಬಾಲ್ಯವಿವಾಹ ಕಾಯ್ದೆ ಅಥವಾ ಶಾರದಾ ಆಕ್ಟ್ ೨. ಸ್ತ್ರೀ ಪುರುಷ ಸಂಬಂಧಗಳ ಸಮಸ್ಯೆಗಳಲ್ಲಿ ಸ್ತ್ರೀಯ ವಯಸ್ಸಿನ ಸೀಮೆಯ ನಿರ್ಧಾರ ೩. ಸ್ತ್ರೀಯ ಆದಾಯ, ಪತಿ ಮತ್ತು ತಂದೆಯ ಆಸ್ತಿಯಲ್ಲಿ ಆಕೆಯ ಅಧಿಕಾರವನ್ನು ಸಂರಕ್ಷಿಸುವುದು. ಈ ವಿಷಯವನ್ನು ಅಭ್ಯಸಿಸಲು ಸರ್. ಬಿ. ಎನ್ ರಾವ್ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಲಾಯಿತು. ಇದು ಮುಂದೆ ಹಿಂದೂ ಕೋಡ್ ಬಿಲ್ ಜಾರಿಗೆ ತರಲು ತಳಪಾಯವನ್ನು ಹಾಕಿಕೊಟ್ಟಿತು. ಕಮಲಾದೇವಿಯವರು ಕಾರ್ಯದರ್ಶಿಯಾಗಿ ಹಾಕಿಕೊಂಡ ಮೊದಲನೆಯ ಕಾರ್ಯಕ್ರಮವೆಂದರೆ ದೇಶದಾದ್ಯಂತ ಪರ್ಯಟನೆ ಕೈಗೊಂಡು ಹೋದಲೆಲ್ಲ ಜನಜಾಗೃತಿ ಮೂಡಿಸುವುದು. ಇವರ ಭಾಷಣವನ್ನು ಕೇಳಲು ಜನರು ಕಿಕ್ಕಿರಿದು ಬರುತ್ತಿದ್ದುದರಿಂದ ಎಲ್ಲಾ ಕಡೆಯಿಂದಲೂ ಒಳ್ಳೆಯ ಸಹಕಾರ ದೊರೆಯಿತು.

೧೯೨೬ರಲ್ಲಿ ಲೆಜಿಸ್ಲೇಟಿವ್ ಕೌನ್ಸಿಲ್ ಚುನಾವಣೆಗೆ ಸ್ಪರ್ಧಿಸಿದ ಭಾರತದ ಪ್ರಥಮ ಮಹಿಳೆಯಾಗಿದ್ದು ಕಾರ್ಮಿಕ ಪ್ರಶ್ನೆಯನ್ನು ಮಹಿಳಾ ಪರಿಷತ್ತಿನ ಗಣನೆಗೆ ತೆಗೆದುಕೊಂಡು ಮಂಗಳೂರಿನಲ್ಲಿ ಕಾರ್ಮಿಕ ಸಂಘಗಳನ್ನು ಸ್ಥಾಪಿಸಿದರು. ಕಮಲಾದೇವಿಯವರ ಮಹಿಳಾ ಕಾರ್ಮಿಕರ ವಿಷಯದಲ್ಲಿ ವಿಶೇಷವಾದ ಆಸ್ಥೆಯುಳ್ಳವರಾಗಿದ್ದು ಇವರು ಮಹಿಳಾ ಕಾರ್ಮಿಕರಿಗೆ ಪ್ರಸೂತಿಯ ಕಾಲದಲ್ಲಿ ಮೂರು ತಿಂಗಳುಗಳ ವಿಶೇಷ ರಜೆಯನ್ನು ನೀಡಬೇಕು ಎಂಬ ಸೂಚನೆಯನ್ನು ಗಿರಣಿ ಮಾಲಿಕರ ಮುಂದಿಟ್ಟರು. ಮಾಲೀಕರು ಸಿಟ್ಟಿಗೆದ್ದು ತಾವು ಗಿರಣಿಗಳನ್ನು ಮುಚ್ಚಿಬಿಡುವುದಾಗಿ ಬೆದರಿಕೆ ಹಾಕಿದಾಗ ಇಂತಹ ಟೊಳ್ಳು ಬೆದರಿಕೆಗಳಿಗೆ ಅಂಜದ ಕಮಲಾದೇವಿಯವರು ಈ ವಿಷಯವನ್ನು ಮಹಿಳಾ ಪರಿಷತ್ತಿನ ಮುಂದೆ ಇಡುವುದಾಗಿ ಮತ್ತು ಮುಂದೆ

ಸರಕಾರದ ದೃಷ್ಟಿಗೆ ತರುವುದಾಗಿ ನಿರ್ಭೀತಿಯಿಂದ ಹೇಳಿದರು. ಮಾಲಿಕರು ಹೆದರಿ ಒತ್ತಾಯಪೂರ್ವಕವಾಗಿ ಕಮಲಾರವರ ಕರಾರುಗಳಿಗೆ ಒಪ್ಪಬೇಕಾಯಿತು. ಅಖಿಲ ಭಾರತ ಮಹಿಳಾ ಪರಿಷತ್ತಿನ ಕಾರ್ಯದರ್ಶಿಯಾಗಿ ಅವರು ಮೊದಲನೆಯದಾಗಿ, ಪರಿಷತ್ತಿನ ಅಂಗವಾಗಿ ಗೃಹಿಣಿಗೆ ಬೇಕಾಗುವ ಅಡುಗೆ ಮನೆಯ ಚಿಕ್ಕ ಚಿಕ್ಕ ಯಾಂತ್ರೀಕರಣ ಸಾಮಾನುಗಳ ಪ್ರದರ್ಶನವನ್ನು ಏರ್ಪಡಿಸಿ ಅವುಗಳ ಪರಿಚಯವನ್ನು ಮಹಿಳೆಯರಿಗೆ ಮಾಡಿಕೊಟ್ಟರು. ಆ ಮೂಲಕ ಮುಂಜಾನೆಯಿಂದ ಸಂಜೆಯ ತನಕ ಮಹಿಳೆಯರು ತಮ್ಮ ಸಮಯವನ್ನು ಅಡುಗೆ ಮನೆಯಲ್ಲಿ ಕಳೆಯುವ ಬದಲು ಬಿಡುವಿನ ವೇಳೆ ಸಿಕ್ಕರೆ ವಿವಿಧ ಇನ್ನಿತರ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದರಿಂದ ಬೌದ್ಧಿಕ ಶಕ್ತಿ ಬೆಳೆಯಲು ಸಾಧ್ಯ ಎಂಬುವುದು ಅವರ ಅಭಿಪ್ರಾಯವಾಗಿತ್ತು. ಕಮಲಾದೇವಿಯವರ ಸೂಚನೆ ಮೇರೆಗೆ ಮಹಿಳಾ ಪರಿಷತ್ತು ಮಹಿಳೆಯರಿಗಾಗಿ ಗೃಹ ಕಾಲೇಜನ್ನು ತೆಗೆಯಬೇಕೆಂದು ಯೋಚಿಸಿ ಎಲ್ಲಾ ತಯಾರಿಯನ್ನು ಮಾಡಿತು.

ಇದೇ ವೇಳೆಯಲ್ಲಿ ಲೇಡಿ ಅಯರ್ಲಿನ್ ಗೃಹವಿಜ್ಞಾನ ಕಾಲೇಜು ಅಸ್ತಿತ್ವಕ್ಕೆ ಬಂದಿತು. ಮುಂದೆ ಮಹಿಳಾ ಪರಿಷತ್ತು ಎಲ್ಲ ಪ್ರಾಂತೀಯ ಸರಕಾರಗಳಿಗೂ ಚಿಕ್ಕ ಚಿಕ್ಕ ಗೃಹ ಕಸುಬುಗಳನ್ನು ಕಲಿಸುವುದಕ್ಕಾಗಿ ಮಹಿಳಾ ಪೋಲಿಟೆಕ್ನಿಕ್ ಕಾಲೇಜುಗಳನ್ನು ತೆರೆಯಬೇಕೆಂದು ಸೂಚಿಸಿತು.[೨೪] ಇವರ ಮುಖಂಡತ್ವದಲ್ಲಿ ಎಸ್.ಎನ್.ಹೊಳ್ಳ, ಕೆ.ಕೆ. ಶೆಟ್ಟಿಯೊಂದಿಗೆ ಬೀಡಿ ಮಜ್ದೂರರ, ಗೇರುಬೀಜ ಕಾರ್ಮಿಕರ ಚಳುವಳಿ ೧೯೩೭ರಿಂದಲೇ ಬೆಳೆದು ಬಂತು.[೨೫] ಮಂಗಳೂರಿನಲ್ಲಿ ಆ ದಿನಗಳಲ್ಲಿ ಇದ್ದ ಗೋಡಂಬಿ ಕೈಗಾರಿಕೋದ್ಯಮದಲ್ಲಿ ಸುಮಾರು ೧೦ಸಾವಿರ ಮಂದಿ ಕೆಲಸ ಮಾಡುತ್ತಿದ್ದು, ಹಂಚಿನ ಕಾರ್ಮಿಕರ ಸಂಘಟನೆಯ ಸಮಯದಲ್ಲೇ ಶೇ ೯೫ರಷ್ಟು ಮಹಿಳಾ ಕಾರ್ಮಿಕರನ್ನು ಒಳಗೊಂಡ ಈ ಕೈಗಾರಿಕೆಯಲ್ಲೂ ಸಂಘಟನೆ ಆರಂಭವಾಯಿತು.

ಗೋಡಂಬಿ ಉದ್ದಿಮೆಯಲ್ಲಿ ಮೂರು ಹಂತದ ಕೆಲಸ ನಡೆಯುತ್ತಿತ್ತು. ಮೊದಲು ಗೇರು ಬೀಜದ ಹೊರಗಿನ ಭಾಗವನ್ನು ತೆಗೆಯುವುದು, ಅದರಿಂದ ತೆಗೆದ ತಿರುಳಿನ ಸಿಪ್ಪೆಯನ್ನು ತೆಗೆಯುವುದು, ನಂತರ ಗ್ರೇಡಿಂಗ್ ಪರಿಷ್ಕರಿಸಿ ತಿರುಳನ್ನು ವಿಂಗಡಿಸುವುದು. ಈ ಮೂರು ಹಂತಗಳ ಕೆಲಸಗಳಲ್ಲಿನ ವಿವಿಧ ಸಮಸ್ಯೆಗಳನ್ನು ಬಗೆಹರಿಸುವುದು ಕಾರ್ಮಿಕ ಸಂಘಟನೆಯ ಆರಂಭದ ಕೆಲಸವಾಗಿತ್ತು. ಆರಂಭದ ದಿನಗಳಲ್ಲಿ ಗೋಡಂಬಿ ಬೀಜದ ಹೊರಭಾಗವನ್ನು ಕಲ್ಲಿನಲ್ಲಿ ಗುದ್ದಿ ನಂತರದಲ್ಲಿ ವಿಂಗಡಿಸಬೇಕಾಗಿತ್ತು. ಇದರಿಂದ ಕಾರ್ಮಿಕರ ಕೈಬೆರಳುಗಳು ನೋವಾಗಿ ಉಗುರಿನಲ್ಲಿ ಕೀವು ಬರುತ್ತಿತ್ತು. ಇದನ್ನು ಪ್ರತಿಭಟಿಸಲು ನಡೆಸಿದ ಹೋರಾಟ ಪ್ರಥಮ ಹೋರಾಟವಾಗಿದೆ. ತಿರುಳಿನ ಸಿಪ್ಪೆ ತೆಗೆಯಲು ತಗಡಿನ ತುಂಡು ಕೊಡಬೇಕೆಂದು ಕಾರ್ಮಿಕರು ದೃಢವಾಗಿ ಒತ್ತಾಯಿಸಿದಾಗ ಮಾಲಕರು ಅವರ ಬೇಡಿಕೆಯನ್ನು ಈಡೇರಿಸುವಂತಾಯಿತು. ಜಿಲ್ಲೆಯಲ್ಲಿ ೧೯೩೩ರಿಂದಲೇ ಆರಂಭವಾಗಿದ್ದ ನೇಯ್ಗೆ, ಪ್ರೆಸ್, ಬೀಡಿ, ಹಂಚು, ಗೋಡಂಬಿ ಕಾರ್ಮಿಕ ಸಂಘಟನೆಗಳು ನಡೆಸಿದ ಧೀರೋದಾತ್ತ ಹೋರಾಟಗಳು ಅಂದಿನ ದಿನಗಳಲ್ಲಿ ದೊಡ್ಡ ಆಕರ್ಷಣೆಯಾಗಿತ್ತು. ಕಾರ್ಮಿಕ ಸಂಘಟನೆಗಳನ್ನು ಕಟ್ಟುವುದರಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯರ ಪಾತ್ರ ಮಹತ್ವವಾಗಿದೆ.[೨೬]

ವಸಾಹತು ಕಾಲಘಟ್ಟದಲ್ಲಿ ಪ್ರಾರಂಭವಾದ ಬೀಡಿ ಉದ್ಯಮದ ಕುರಿತಂತೆ ಸೆಂಟರ್ ಆಫ್ ಇಂಡಿಯನ್ ಟ್ರೇಡ್ ಯೂನಿಯನ್ ಇದರ ಜಿಲ್ಲಾ ಅಧ್ಯಕ್ಷರಾದ ಶ್ರೀ ಬಾಲಕೃಷ್ಣ ಶೆಟ್ಟಿಯವರನ್ನು ಭೇಟಿಯಾದಾಗ ಅವರು ನೀಡಿರುವ ಮಾಹಿತಿಯಂತೆ 'ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹತ್ತೊಂಭತ್ತನೆಯ ಶತಮಾನದ ಆರಂಭದಿಂದಲೇ ಬೀಡಿ ಉದ್ಯಮ ಪ್ರಾರಂಭವಾಯಿತು. ೧೯೧೧ರಲ್ಲಿ ಪಿ.ವಿ.ಎಸ್ ವರ್ಕ್ಸ್ ಹಾಗೂ ೧೯೩೦ರಲ್ಲಿ ಭಾರತ್ ಬೀಡೀಸ್ ಮತ್ತು ಗಣೇಶ್ ಬೀಡೀಸ್ ಅಸ್ತಿತ್ವಕ್ಕೆ ಬಂದವು. ಕೃಷಿ ಆಧಾರಿತ ಸಮಾಜದಲ್ಲಿ ವರ್ಷ ಪೂರ್ತಿ ಕೆಲಸವಿಲ್ಲದ ಕಾಲದಲ್ಲಿ ಪುರುಷರು ಬೀಡಿಯ ಫ್ಯಾಕ್ಟರಿಗಳಲ್ಲಿ ಸೇರ್ಪಡೆಗೊಂಡರು. ಜಿಲ್ಲೆಯ ಬೀಡಿಗೆ ಬೇಡಿಕೆ ಹೆಚ್ಚಾಗಿದ್ದುದರಿಂದ ಮನೆಮನೆಗಳಿಗೆ ಬೀಡಿಯನ್ನು ಕೊಂಡೊಯ್ಯಲಾಯಿತು. ದೇಶಕ್ಕೆ ಸ್ವಾತಂತ್ರ್ಯ ಲಭಿಸಿದ ನಂತರ ಮಹಿಳೆಯರೂ ಬೀಡಿ ಉದ್ಯಮದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡರು'.[೨] ಬೀಡಿ ಉದ್ಯಮವು ಗ್ರಾಮೀಣ ಪ್ರದೇಶದ ದುಡಿಯುವ ವರ್ಗದ ಜನರಲ್ಲಿ ಆತ್ಮವಿಶ್ವಾಸ ಮತ್ತು ಬದುಕಿನ ಬಗ್ಗೆ ಆಶಾದಾಯಕ ಭಾವನೆ ಮೂಡುವಂತೆ ಮಾಡಿತು.

ಅವಿಭಜಿತ ದಕ್ಷಿಣ ಕನ್ನಡದ ಮಹಿಳಾ ಸ್ವಾತಂತ್ರ್ಯ ಹೋರಾಟಗಾರ್ತಿಯರಲ್ಲಿ ಮುಂಚೂಣಿಯಲ್ಲಿದ್ದ ಉಮಾಬಾಯಿ ಸಂಜೀವರಾವ್ ಇವರು ಕರ್ನಾಟಕದಾದ್ಯಂತ ಸಂಚರಿಸಿ ಸ್ವಯಂಸೇವಿಕೆಯರನ್ನು ಒಗ್ಗೂಡಿಸಿದರು. ಕುಂದಾಪುರದ ಶ್ರೀಮಂತ ಕುಟುಂಬಕ್ಕೆ ವಿವಾಹವಾದ ಇವರಿಗೆ ಪತಿಯವರ ಜಮೀನು ಹುಬ್ಬಳ್ಳಿಯಲ್ಲೂ ಸಾಕಷ್ಟಿತ್ತು. ಉಮಾಬಾಯಿಯವರ ಮಾವ ಶ್ರೀ ಆನಂದರಾವ್ ಕುಂದಾಪುರ ಇವರು ರಾಷ್ಟ್ರೀಯವಾದಿಯಾಗಿದ್ದು, ತರುಣಿಯಾದ ಉಮಾಬಾಯಿಯವರನ್ನು ಸಾಮಾಜಿಕ ಮತ್ತು ಸಾರ್ವಜನಿಕ ಚಟುವಟಿಕೆಗಳಲ್ಲಿ ತೊಡಗಲು ಪ್ರೇರೇಪಿಸಿದರು. ಹೀಗೆ ವಿವಾಹವಾದ ನಂತರ ಇವರು ತಮ್ಮ ಜೀವನವನ್ನು ದೇಶಸೇವೆಗೆ ಮುಡಿಪಾಗಿಟ್ಟರು. ಮನೆಯಲ್ಲಿಯೇ ಕಲಿತು ೧೯೧೯ರಲ್ಲಿ ತಮ್ಮ ಇಪ್ಪತ್ತೇಳನೇ ವಯಸ್ಸಿಗೆ ತಮ್ಮ ಮಾವನವರ ಪ್ರೋತ್ಸಾಹದಿಂದ ಮೆಟ್ರಿಕ್ಯುಲೇಷನ್ ಪರೀಕ್ಷೆ ಬರೆದರು. ಮುಂದೆ ಮಾವನ ಪ್ರೋತ್ಸಾಹವಿದ್ದರೂ ರಾಷ್ಟ್ರಸೇವೆಗೆ ಗಮನ ಹರಿಸಿದುದರಿಂದ ಓದು ಮುಂದುವರಿಸಲಾಗಲಿಲ್ಲ. ಆದರೆ ವ್ಯವಸ್ಥಾನುಸಾರವಲ್ಲದ ಕಲಿಕೆಯನ್ನು ಆಕೆ ಮುಂದುವರಿಸಿ ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಯನ್ನು ಕಲಿತರು. ಆ ಕಾಲಘಟ್ಟದಲ್ಲಿ ವಿದ್ಯಾಭ್ಯಾಸ ಪಡೆದ ಬೆರಳೆಣಿಕೆಯ ಮಹಿಳೆಯರಾದ ಶ್ರೀಮತಿ ಸುಶೀಲ ನಾಯಕ್ (ಎಂ.ಎ), ಕೃಷ್ಣೀಬಾಯಿ ನವರಂಗ್ (ಪ್ರಥಮ ಮಹಿಳಾ ವೈದ್ಯೆ) ಮತ್ತು ತಾರಾಬಾಯಿ ಮೊದಕ ಮೊದಲಾದರವರ ಪರಿಚಯವಾಯಿತು. ಹೆಣ್ಮಕ್ಕಳ ಮತ್ತು ಸ್ತ್ರೀ ಶಿಕ್ಷಣಕ್ಕೆ ಒತ್ತು ನೀಡಿದ ಇವರು ರಾಷ್ಟ್ರೀಯ ಚಳವಳಿಯಲ್ಲಿ ಅರ್ಥಪೂರಿತವಾದ ಭಾಗವಹಿಸುವಿಕೆಗೆ ಶಿಕ್ಷಣವು ಪೂರ್ವ ತಯಾರಿ ಇದ್ದಂತೆ ಎಂದು ನಂಬಿದ್ದರು.

ಪಂಜಾಬಿನ ಜಲಿಯಾನವಾಲಾ ದುರಂತ ಉಮಾಬಾಯಿಯವರ ಮೇಲೆ ಪ್ರಬಲವಾದ ಪ್ರಭಾವ ಬೀರಿತು. ಭಾರತದಾದ್ಯಂತ ಈ ದುರಂತವನ್ನು ತೀವ್ರವಾಗಿ ಖಂಡಿಸಲಾಯಿತು. ಅದೇ ಸಂದರ್ಭ ಮೆಟ್ರಿಕ್ಯುಲೇಷನ್ ಪರೀಕ್ಷೆಯ ವಿದ್ಯಾರ್ಥಿನಿಯಾದ ಉಮಾಬಾಯಿಯವರು ಎಪ್ರಿಲ್ ತಿಂಗಳಿನ ೯ನೇ

ತಾರೀಖಿನಂದು, ೧೯೧೯ರಂದು ಸಂಚಾರಿವ್ಯವಸ್ಥೆ ಕಡಿತಗೊಳಿಸಲಾದುದರಿಂದ ಪರೀಕ್ಷಾಕೇಂದ್ರಕ್ಕೆ ಕಾಲ್ನಡಿಗೆಯಲ್ಲಿಯೇ ತೆರಳಿ, ಪರೀಕ್ಷೆ ಮುಗಿದ ಬಳಿಕ ಸಕ್ರಿಯವಾಗಿ ರಾಷ್ಟ್ರೀಯ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ನಿರ್ಧರಿಸಿದರು. ಆ ಸಮಯದಲ್ಲಿ ಬೊಂಬಾಯಿಯು ರಾಜಕೀಯ ಚಟುವಟಿಕೆಗಳ ಕೇಂದ್ರವಾಗಿದ್ದರಿಂದ ಪ್ರಮುಖ ನಾಯಕರ ಭಾಷಣವನ್ನು ಕೇಳುವ ಅವಕಾಶ ಅವರಿಗೆ ಲಭಿಸಿತು. ಸಾರಸ್ವತ ಮಹಿಳಾ ಸಮಾಜವನ್ನು ಆಕೆ ಸ್ಥಾಪಿಸುವುದರೊಂದಿಗೆ ಬೊಂಬಾಯಿಯಲ್ಲಿ ನಡೆಸಲಾಗುತ್ತಿದ್ದ ಎಲ್ಲಾ ಸಭೆಗಳಲ್ಲಿ ಭಾಗವಹಿಸಿ ತನಗೆ ದೊರೆತ ಮಾಹಿತಿಯನ್ನು ಸಾರಸ್ವತ ಮಹಿಳಾಸಭೆಯ ಸದಸ್ಯರೊಡನೆ ಹಂಚಿಕೊಳ್ಳುತ್ತಿದ್ದರು. ಮಹಾತ್ಮರ ಪ್ರಭಾವಕ್ಕೊಳಗಾದ ಮಿಲಿಯ ಜನರಲ್ಲಿ ಉಮಾಬಾಯಿಯವರೂ ಒಬ್ಬರಾಗಿದ್ದರು.

ಅಹಮದಾಬಾದಿನ ಕಾಂಗ್ರೆಸ್ ಅಧಿವೇಶನಕ್ಕೆ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಸಕ್ರಿಯ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿ ಸದಸ್ಯರನ್ನು ಸೇರಿಸಬೇಕೆಂದು ಹೇಳಿದಾಗ ಉಮಾಬಾಯಿಯವರು ಲಕ್ಷಕ್ಕಿಂತಲೂ ಹೆಚ್ಚಿನ ಸದಸ್ಯರನ್ನು ಸೇರಿಸಿದರು. ಪ್ರಾರಂಭದಲ್ಲಿ ಸಮಸ್ಯೆ ಕಂಡು ಬಂದರೂ ಕ್ರಮೇಣ ಕಷ್ಟವೆನಿಸಲಿಲ್ಲ. ಈ ಎಲ್ಲಾ ಅನುಭವಗಳು ಮುಂದೆ ಅವರಿಗೆ ಹುಬ್ಬಳ್ಳಿಗೆ ಬಂದಾಗ ಸಹಕಾರಿಯಾದವು. ಹುಬ್ಬಳ್ಳಿಯಲ್ಲಿ ಡಾ. ಎನ್. ಎಸ್ ಹರ್ಡೀಕರ್ ಇವರು ಉಮಾಬಾಯಿಯವರಲ್ಲಿ ಒಬ್ಬ ಉತ್ತಮ ಸ್ವಯಂಸೇವಿಕೆಯ ಗುಣವನ್ನು ಮನಗಂಡರು. ರಾಷ್ಟ್ರೀಯ ಜಾಗೃತಿಯನ್ನು ಮೂಢಿಸುವ ನಿಟ್ಟಿನಲ್ಲಿ ಭಗಿನಿ ಸಮಾಜವು ಸ್ಥಾಪಿಸಿದ ತಿಲಕ ಬಾಲಿಕಶಾಲೆಗಳ ಜವಾಬ್ದಾರಿಯನ್ನು ಉಮಾಬಾಯಿಯವರಿಗೆ ನೀಡಲಾಯಿತು.[೨೮] ಸುಮಾರು ಒಂದು ದಶಕಕ್ಕೂ ಹೆಚ್ಚು ಕಾಲ ಇವರು ಅಖಿಲ ಭಾರತ ಮಹಿಳಾ ಮಂಡಲದಲ್ಲಿ ಕರ್ನಾಟಕದ ಪ್ರತಿನಿಧಿಯಾಗಿದ್ದರು. ಕರ್ನಾಟಕ ಪ್ರಾಂತೀಯ ಭಗಿನಿ ಮಂಡಲದ ಗೌರವ ಕಾರ್ಯದರ್ಶಿ ಹಾಗೂ ಅಧ್ಯಕ್ಷೆಯಾಗಿ, ಕರ್ನಾಟಕದಾದ್ಯಂತ ಮಹಿಳಾ ಮಂಡಳಿಗಳನ್ನು ಸಂಘಟಿಸಿ, ಮಹಿಳೆಯರಲ್ಲಿ ಜಾಗೃತಿ ಮೂಢಿಸಿದರು.

ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರರಾದ ಕಾರ್ನಾಡ್ ಸದಾಶಿವ ರಾವ್, ವಿ. ಬಿ. ಪುರಾಣಿಕ್ ಮತ್ತು ಡಾ. ಎನ್. ಎಸ್ ಹರ್ಡೀಕರ್ ಜೊತೆ ಸೇರಿ ಹಲವು ರಾಷ್ಟ್ರೀಯ ಸಭೆಗಳಲ್ಲಿ ಭಾಗವಹಿಸಿದರು. ಕರ್ನಾಟಕದಲ್ಲಿ ೧೯೨೪ರಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಮಹಿಳಾ ಸ್ವಯಂಸೇವಕರ ಮುಂದಾಳುವಾಗಿದ್ದು, ಹಿಂದೂಸ್ಥಾನ್ ಸೇವಾದಳದ ಮಹಿಳಾ ವಿಭಾಗವನ್ನು ಆಯೋಜಿಸಿದರು. ೧೯೩೦ರಲ್ಲಿ ನಡೆದ ಉಪ್ಪಿನ ಸತ್ಯಾಗ್ರಹದಲ್ಲಿ ಸಕ್ರಿಯವಾಗಿ ಭಾಗವಹಿಸಿ ನಂತರ, ೨೬-೧-೧೯೩೨ರಲ್ಲಿ ಜೈಲು ಶಿಕ್ಷೆಗೆ ಗುರಿಯಾದರು. ೧೯೩೩ರ ಜನವರಿ ೨೬ರಂದು ಬ್ರಿಟಿಷರಿಂದ ಬಂಧಿಸಲ್ಪಟ್ಟು ಹುಬ್ಬಳ್ಳಿ ಜೈಲಿನಲ್ಲಿ ಎರಡು ದಿನಗಳ ಕಾರಾಗ್ರಹ ಶಿಕ್ಷೆ ಅನುಭವಿಸಿದರು. ಬಿಡುಗಡೆಯ ನಂತರ ಸಮಾಜ ಸೇವೆಯನ್ನು ಮುಂದುವರಿಸಿದ ಇವರು ವಯಸ್ಕರ ಶಿಕ್ಷಣ ಸಂಬಂಧಿ ಕಾಯಕದೆಡೆ ಗಮನ ಹರಿಸಿದರು. ಯರವಡ ಮತ್ತು ಹಿಂದಲಗ ಬಂದಿಖಾನೆಗಳಿಂದ ಬಿಡುಗಡೆಗೊಳಿಸಲ್ಪಟ್ಟ ಮಹಿಳಾ ಕೈದಿಗಳಿಗೆ ಆಶ್ರಯ ನೀಡಿದರು. ೧೯೩೪ರಲ್ಲಿ ಬಿಹಾರದ ಭೂಕಂಪ ಸಂತ್ರಸ್ಥರ ನೆರವಿಗಾಗಿ ಧಾವಿಸಿದರು. ೧೯೩೬ರಿಂದ ಬೊಂಬಾಯಿ ಪ್ರಾಂತ್ಯ ಪ್ರೌಢ ಶಿಕ್ಷಣ

ಬೋರ್ಡಿನ ಏಕೈಕ ಮಹಿಳಾ ಸದಸ್ಯೆಯಾಗಿದ್ದರಿಂದ ಗಾಂಧೀಜಿ ಕ್ವಿಟ್ ಇಂಡಿಯಾ ಚಳವಳಿಯಿಂದ ವಿನಾಯಿತಿ ನೀಡಿದರು. ಗಾಂಧೀಜಿಯವರಿಂದ ನೇಮಿಸಲ್ಪಟ್ಟ ಕಸ್ತೂರ್ಬಾ ಗಾಂಧಿ ಸ್ಮಾರಕ ಟ್ರಸ್ಟ್ ಸದಸ್ಯೆಯಾಗಿ ಹದಿನೆಂಟು ವರ್ಷಗಳ ಕಾಲ ಕರ್ನಾಟಕವನ್ನು ಪ್ರತಿನಿಧಿಸಿರುತ್ತಾರೆ. ಟ್ರಸ್ಟ್ ವತಿಯಿಂದ ನಿಧಿ ಸಂಗ್ರಹಿಸಿ ಗ್ರಾಮಸೇವಿಕೆಯರಿಗೆ ಮಂಗಳೂರು, ಬಳ್ಳಾರಿ, ಬಿಜಾಪುರ, ಕೊಡಗು, ಬೆಳಗಾಂ, ಧಾರವಾಡ ಮತ್ತು ಕಾರವಾರ ತರಬೇತಿ ಕೇಂದ್ರಗಳನ್ನು ನಿರ್ವಹಿಸಿದರು. ಮೈಸೂರು ಮತ್ತು ಬೊಂಬಾಯಿ ರಾಜ್ಯಗಳ ಸಮಾಜ ಕಲ್ಯಾಣ ಬೋರ್ಡಿನ ಸದಸ್ಯೆಯಾಗಿ ಕಾರ್ಯ ನಿರ್ವಹಿಸಿದರು.[೨೯]

ಧಾರವಾಡ ಜಿಲ್ಲೆಯ ಹಾವೇರಿ ತಾಲೂಕಿನ ದುಂಡ್ಸಿಯಲ್ಲಿ ೧೯೦೩ರಲ್ಲಿ ಜನಿಸಿದ ಬಳ್ಳಾರಿ ಸಿದ್ದಮ್ಮನವರು ಹೆಚ್ಚಿನ ವಿದ್ಯಾಭ್ಯಾಸ ದೊರಕದಿದ್ದರೂ ಓದುವ ಹವ್ಯಾಸ ಬೆಳೆಸಿಕೊಂಡರು. ತಂದೆಯವರ ಪ್ರಭಾವ ಹಾಗೂ ವಿವಾಹದ ನಂತರ ಅವರ ಪತಿ ಬಳ್ಳಾರಿ ಮುರಿಗೆಪ್ಪನವರ ಪ್ರೋತ್ಸಾಹದಿಂದ ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಸಿಕೊಂಡರು. ಮಲ್ಲಪ್ಪ ಧನಶೆಟ್ಟಿ ಮತ್ತವರ ಸ್ನೇಹಿತರಿಗೆ ಬ್ರಿಟಿಷರು ವಿಧಿಸಿದ ಮರಣದಂಡನೆ ಶಿಕ್ಷೆಯಿಂದ ನೊಂದ ಬಳ್ಳಾರಿ ಸಿದ್ದಮ್ಮ ಬ್ರಿಟಿಷರ ವಿರುದ್ಧ ಸೆಣಸಾಡಲು ಅಣಿಯಾದರು. ಅಲ್ಲಿಯವರೆಗೆ ನಾಲ್ಕು ಗೋಡೆಗಳಾಚೆ ಬಂದಿರದ ಸಿದ್ದಮ್ಮ ದಾವಣಗೆರೆ, ಚಿತ್ರದುರ್ಗ ಮೊದಲಾದ ಪ್ರದೇಶಗಳಲ್ಲಿ ಪುರುಷರು ಮತ್ತು ಮಹಿಳೆಯರನ್ನುದ್ದೇಶಿಸಿ ಭಾಷಣ ಮಾಡತೊಡಗಿ ಉತ್ತಮ ಸಂಘಟಕಿ ಎನಿಸಿಕೊಂಡರು. ೧೯೩೮ರಲ್ಲಿ ಟಿ. ಸಿದ್ದಲಿಂಗಯ್ಯರವರ ನೇತೃತ್ವದಲ್ಲಿ ನಡೆದ ಶಿವಪುರ ಕಾಂಗ್ರೆಸ್ ಅಧಿವೇಶನದಲ್ಲಿ ಸಿದ್ಧಮ್ಮ ವಹಿಸಿದ ಪಾತ್ರ ಅವಳ ಪ್ರಮುಖ ರಾಜಕೀಯ ಚಟುವಟಿಕೆಯಾಗಿದೆ. ಧ್ವಜ ಹಾರಿಸುವ ವಿಷಯದಲ್ಲಿ ದ್ವಂದ್ವ ಅಭಿಪ್ರಾಯಗಳು ಬಂದಾಗ ಸಿದ್ದಮ್ಮ 'ಧ್ವಜ ಹಾರಿಸಿಯೇ ಸಿದ್ಧ', ಪುರುಷ ನಾಯಕರಲ್ಲಿ ಇದರ ಕುರಿತು ಭಿನ್ನಾಭಿಪ್ರಾಯವಿದ್ದರೆ ನಾವು ಮಹಿಳೆಯರೇ ಈ ಕಾರ್ಯ ಮಾಡುವೆವು" ಎಂಬುವುದಾಗಿ ಘೋಷಿಸಿದರು.

ಈಕೆಯ ಬಯಕೆಯಂತೆ ಧ್ವಜ ಹಾರಿಸಲ್ಪಟ್ಟಾಗ ಬ್ರಿಟಿಷರಿಂದ ಬಂಧಿಸಲ್ಪಟ್ಟು ಮೈಸೂರು ಸಂಸ್ಥಾನದಲ್ಲಿ ಬಂಧನಕ್ಕೊಳಗಾದ ಪ್ರಥಮ ಮಹಿಳೆ ಎಂಬ ಹೆಗ್ಗಳಿಕೆಗೆ ಈಕೆ ಪಾತ್ರರಾಗಿದ್ದಾರೆ. ಬಿಡುಗಡೆಯ ನಂತರ ಗ್ರಾಮೀಣ ಪ್ರದೇಶಗಳಲ್ಲಿ ತಮ್ಮ ಚಟುವಟಿಕೆಗಳನ್ನು ಮುಂದುವರೆಸಿದರು. ಗಾಂಧೀಜಿಯವರ ಅನುಯಾಯಿಯಾದ ಈಕೆ ಖಾದಿ ಪ್ರಚಾರ ಕಾರ್ಯದಲ್ಲಿ ತೊಡಗಿದರು. ಕ್ವಿಟ್ ಇಂಡಿಯ ಚಳವಳಿಯಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡು ಭೂಗತ ಕಾರ್ಯಕರ್ತರಿಗೆ ಸಹಾಯ ಮಾಡಿ ಬ್ರಿಟಿಷರ ಕೆಂಗಣ್ಣಿಗೆ ಗುರಿಯಾದಳು.[೩೦] ಅದೇ ರೀತಿ ದಾವಣಗೆರೆಯಲ್ಲಿ ಪ್ರಪ್ರಥಮ ಮಹಿಳಾ ಸಮಾಜವನ್ನು ಸ್ಥಾಪಿಸಿದರು.[೩೧] ಹರಿಜನರೋದ್ಧಾರದಲ್ಲಿ ತಮ್ಮ ಪತಿ ವೀರಣ್ಣನವರ ಜೊತೆ ಸೇರುವುದರ ಮೂಲಕ ನಾಗಮ್ಮ ಪಾಟೀಲ್ ಸ್ವಾತಂತ್ರ್ಯ ಚಳವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಸಮಾಜ ಸೇವೆಯ ಕನಸು ಕಾಣುತ್ತಿದ್ದ ನಾಗಮ್ಮನವರು ಸಾಬರಮತಿಗೆ ಭೇಟಿಕೊಟ್ಟ ಸಂದರ್ಭ ಅಲ್ಲಿ ಮಹಿಳೆಯಿಂದ ನಡೆಸಲ್ಪಡುತ್ತಿದ್ದ ಹರಿಜನ

ಕನ್ಯಾಶಾಲೆಯನ್ನು ನೋಡಿ ಪ್ರಭಾವಿತರಾದರು. ಗಾಂಧೀಜಿಯವರು ಹರಿಜನ ಹೆಣ್ಮಕ್ಕಳಿಗಾಗಿ ಆಶ್ರಮವನ್ನು ತೆರೆಯಲು ನಾಗಮ್ಮನವರಲ್ಲಿ ಕೇಳಿಕೊಂಡಾಗ, ಹಿಂತಿರುಗಿ ಬಂದ ಈಕೆ ಆಶ್ರಮವನ್ನು ತೆರೆದಳು. ದಾವಣಗೆರೆ, ಬಳ್ಳಾರಿ, ಬೆಳಗಾಂ ಪ್ರದೇಶಗಳಿಗೆ ತೆರಳಿ ಮಕ್ಕಳ ಹೆತ್ತವರನ್ನು ಒತ್ತಾಯಿಸಿ ಆಶ್ರಮಕ್ಕೆ ಕಳುಹಿಸುವಂತೆ ವಿನಂತಿಸಿದರು. ಆರಂಭದಲ್ಲಿ ಇಪ್ಪತ್ತು ವಿದ್ಯಾರ್ಥಿನಿಯರನ್ನು ಹೊಂದಿದ್ದ ಶಾಲೆಯಲ್ಲಿ ಶುಚಿತ್ವ, ಸಹಬಾಳ್ವೆಯ ಕುರಿತು ವಿದ್ಯಾರ್ಥಿನಿಯರಿಗೆ ತಿಳಿಸಿಕೊಡಲಾಯಿತು.

ಸಮಾಜ ಸೇವೆಯ ಈ ಅನುಭವ ಆಕೆಗೆ ರಾಜಕೀಯ ರಂಗ ಪ್ರವೇಶಿಸಲು ಸಹಕಾರಿಯಾಯಿತು. ಶಾಸಕಾಂಗ ಸಭೆಗೆ ಸ್ಪರ್ಧಿಸಿದ ನಾಗಮ್ಮ ಕರ್ನಾಟಕದಲ್ಲಿಯೇ ಶಾಸಕಾಂಗ ಸಭೆಯ ಪ್ರಥಮ ಚುನಾಯಿತ ಸದಸ್ಯೆಯೆಂಬ ಹೆಗ್ಗಳಿಕೆಗೆ ಪಾತ್ರರಾದರು. ಸಮಾಜಸೇವಾ ಕ್ಷೇತ್ರದಿಂದ ರಾಜಕೀಯರಂಗ ಪ್ರವೇಶಿಸಿದರು. ರಾಷ್ಟ್ರೀಯ ಕಾಂಗ್ರೆಸ್ ಸಂಪೂರ್ಣ ಸ್ವಾತಂತ್ರ್ಯದ ಬೇಡಿಕೆಯಿತ್ತಾಗ, ಅದನ್ನು ತಿರಸ್ಕರಿಸಿದರ ವಿರುದ್ಧ ಭಾಷಣಗಳ ಮೂಲಕ ವಾಗ್ದಾಳಿ ನಡೆಸಿ ಬಂಧನಕ್ಕೊಳಗಾದರು. ಪೊಲೀಸರು ಇನ್ನೂರು ರೂಪಾಯಿ ಜುಲ್ಮಾನೆ ಹೇರಿ ಪಾವತಿಸದಿದ್ದರೆ ಮೂರು ತಿಂಗಳ ಸೆರೆವಾಸ ಅನುಭವಿಸಬೇಕು ಎಂದಾಗ ನಾಗಮ್ಮ ಜುಲ್ಮಾನೆ ಪಾವತಿಸದೆ ಜೈಲು ಸೇರಿದರು. ಅಲ್ಲಿಯೂ ತಮ್ಮ ಜೊತೆಗಿದ್ದ ಸಹಖೈದಿಗಳಿಗೆ ಓದಲು, ಬರೆಯಲು ಕಲಿಸಿದರು. ಜೈಲಿನಿಂದ ಬಿಡುಗಡೆಯಾದ ನಂತರ ಗಾಂಧೀಜಿಯವರ ಕರೆಗೆ ಓಗೊಟ್ಟು ೧೯೪೨ರ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸಿದರು. ಪುನಃ ಬಂಧನಕ್ಕೊಳಗಾದಾಗ ತಮ್ಮ ನಾಲ್ಕು ವರ್ಷ ಪ್ರಾಯದ ಮಗಳನ್ನೂ ತಮ್ಮ ಜೊತೆ ಜೈಲಿಗೆ ಕರಸಿಕೊಳ್ಳಬೇಕಾಯಿತು. ಯೆರವಡ ಜೈಲಿನಲ್ಲಿ ಹತ್ತು ತಿಂಗಳ ಸೆರೆವಾಸವನ್ನು ಅನುಭವಿಸಿದರು. ನಾಗಮ್ಮನವರಿಂದ ಪ್ರಭಾವಿತರಾದ ಆಶ್ರಮದ ಹರಿಜನ ಹೆಣ್ಮಕ್ಕಳು ಮೆರವಣಿಗೆ ನಡೆಸಿದರು. ಅದಕ್ಕಾಗಿ ಅವರನ್ನು ಬಂಧಿಸಲಾಯಿತು.[೨೨]

ಸಿದ್ದಾಪುರದವರಾದ ದುರ್ಗಮ್ಮ ಯಾನೆ ರಮಾಬಾಯಿ ಪ್ರಭುವವರು ಸ್ವಾತಂತ್ರ್ಯ ಚಳವಳಿಯ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡರು. ೧೯೩೦ರಲ್ಲಿ ಹೊನ್ನಾವರ ತಾಲೂಕಿನ ಹಳದಿಪುರದಲ್ಲಿ ಉಪ್ಪಿನ ಸತ್ಯಾಗ್ರಹ ನಡೆದಾಗ ಅದರಲ್ಲಿ ಭಾಗವಹಿಸಿದ್ದರು. ವಿವಾಹದ ನಂತರ ಅತ್ತೆಯವರಿಗೆ ಅಷ್ಟೊಂದು ಸಮ್ಮತಿ ಇಲ್ಲದಿದ್ದರೂ ಉಪವಾಸ ಸತ್ಯಾಗ್ರಹ ಕೈಗೊಂಡು ಜೈಲು ಶಿಕ್ಷೆ ಅನುಭವಿಸಿದರು. ೧೯೪೨ರಲ್ಲಿ ತಮ್ಮ ಪತಿಯ ಜೊತೆ ಹುದಲಿಯಲ್ಲಿ ಖಾದಿ ಉತ್ಪಾದನೆ ತರಬೇತಿ ಪಡೆದು, ನಂತರ ಪ್ರಭಾತಫೇರಿಗಳಿಗೆ ಹೋಗಲಾರಂಭಿಸಿ ಪುನಃ ಬಂಧನಕ್ಕೊಳಗಾದರು.[೨೩] ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಿದ ದೇವಯಾನಿ ಯಾನೆ ಲಕ್ಷ್ಮೀ ಹರಿ ಪೈ, ಮಂಜೈನ, ಇವರು ಸಿದ್ದಾಪುರ ತಾಲೂಕಿನ ಬಿಳಗಿಯಲ್ಲಿ ಮಗುವಿನ ಸಮೇತ ಜೈಲು ಸೇರಿದ ಧೀರ ಮಹಿಳೆ. ೧೯೩೦ರಲ್ಲಿ ತಾರಖ್‌ಂಡದಲ್ಲಿ ಜಂಗಲ್ ಸತ್ಯಾಗ್ರಹ ನಡೆದು ಇವರ ಪತಿ ಹರಿ ಸುಬ್ರಾಯ ಪೈಯವರಿಗೆ ದಂಡ ಸಮೇತ ಒಂದು ತಿಂಗಳ ಜೈಲು ಶಿಕ್ಷೆಯಾಯಿತು. ದಂಡಕ್ಕಾಗಿ ಮನೆಯ ಸಾಮಾಗ್ರಿ ಜಪ್ತಿಮಾಡಿ ಪಾತ್ರೆಗಳನ್ನು ಅತೀ ಕಡಿಮೆ ಬೆಲೆಗೆ ಲೀಲಾವು (ಏಲಂ) ಮಾಡಿದಾಗ ಲಕ್ಷ್ಮಿಯವರು ಚಳವಳಿಗೆ ಸೇರಿ ಊರ ಮಹಿಳೆಯರನ್ನೂ,

ಮಕ್ಕಳನ್ನೂ ಸೇರಿಸಿ ಪ್ರಭಾತಫೇರಿ ಹಾಗೂ ಮನೆಯಂಗಳದಲ್ಲಿ ಧ್ವಜವಂದನೆ ಮಾಡಿಸಿದರು. ಪೊಲೀಸರು ಧ್ವಜವನ್ನು ಕಸಿದು ಒಯ್ದಾಗ, ಗೋಡೆಯ ಮೇಲೆ ಚಿತ್ರಿಸಿದ ಧ್ವಜಕ್ಕೆ ವಂದನೆ ಮಾಡಿ ಬಂಧನಕ್ಕೊಳಗಾದರು. ಕಾರವಾರ ಮತ್ತು ಬೆಳಗಾವಿ ಹಿಂಡಲಗಿ ಜೈಲಿನಲ್ಲಿ ಬಂಧಿಸಲ್ಪಟ್ಟ ಇವರು ಮಗುವಿನ ಸಹಿತ ಗರ್ಭಿಣಿಯಾಗಿದ್ದ ಕಾರಣ ಆರೋಗ್ಯ ಕೆಟ್ಟಿತು. ಜೈಲಿನ ಆಹಾರ ಹಾಗೂ ಕಠಿಣ ಕೆಲಸಗಳಿಂದಾಗಿ ಗರ್ಭಪಾತವಾದಾಗ ಕಮಲಾದೇವಿ ಚಟ್ಟೋಪಾಧ್ಯಾಯರು ಮಗುವಿನ ಆರೈಕೆ ಮಾಡಿದಾಗ ಸೀತಾಬಾಯಿ ಬೆಡಸಗಾಂವಕರ ಕೂಡಾ ಸಹಕರಿಸಿದರು. ಬಿಡುಗಡೆಯ ನಂತರ ಪುನಃ ಊರಿನಲ್ಲಿ ಪ್ರಭಾತಫೇರಿ, ಧ್ವಜವಂದನೆ ತಪ್ಪದೆ ನಡೆಸಿದರು.

ಮೂಲತಃ ಹೊನ್ನವರದವರಾದ ಕೃಷ್ಣಬಾಯಿ ಪಂಜಿಕರ್, ಸ್ವಾತಂತ್ರ್ಯ ಚಳವಳಿಯಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು. ಕೃಷ್ಣಾಬಾಯಿಯವರಿಗೆ ಹನ್ನೊಂದನೆಯ ವಯಸ್ಸಿಗೆ ಶ್ರೀ ಗಾಯಕ್‌ವಾಡಿಯವರೊಂದಿಗೆ ವಿವಾಹವಾಯಿತು. ಆದರೆ ವಿವಾಹದ ಬಳಿಕ ಕೇವಲ ಆರು ತಿಂಗಳಿನಲ್ಲಿಯೇ ಪತಿಯನ್ನು ಕಳೆದುಕೊಂಡರು. ಆಗ ಕೃಷ್ಣಬಾಯಿಯವರನ್ನು ವಕೀಲರಾದ ಅವರ ಅಣ್ಣ ಧಾರವಾಡಕ್ಕೆ ಕರೆತಂದರು. ಅಲ್ಲಿಯೇ ಶಿಕ್ಷಣ ಮುಂದುವರಿಸಿದ ಈಕೆ ಶಿಕ್ಷಕಿ ತರಬೇತಿ ಕಾಲೇಜಿನ ವಿದ್ಯಾರ್ಥಿನಿಯಾದರು. ಮುಂದೆ ಇಲ್ಲಿಯೇ ಶ್ರೀ ಪಂಜಿಕರ್ ರವರನ್ನು ೧೯೨೮ರಲ್ಲಿ ವಿವಾಹವಾದರು. ವಿದುರರಾಗಿದ್ದ ಪಂಜೀಕರ್ ರವರಿಗೆ ಈ ಮೊದಲೇ ಮೊದಲ ಪತ್ನಿಯಿಂದ ಮೂವರು ಮಕ್ಕಳಿದ್ದರು. ಪಂಜಿಕರ್ ನೆರವಿನಿಂದ ಕೃಷ್ಣಬಾಯಿ ಧಾರವಾಡದ ಸಾರಸ್ವತಪುರದಲ್ಲಿ ಪ್ರಾಥಮಿಕ ಶಾಲೆಯನ್ನು ತೆರೆದರು. ಮಹಿಳೆಯರ ಏಳಿಗೆಗಾಗಿ ಮಹಿಳಾ ಸಭೆಯನ್ನು ಸ್ಥಾಪಿಸಿದರು. ರಾಷ್ಟ್ರೀಯ ಚಳವಳಿಯ ಕಾವು ದೇಶವ್ಯಾಪಿ ಹರಡಿದಾಗ ಕೃಷ್ಣಾಬಾಯಿಯವರೂ ತಮ್ಮನ್ನು ಅದರಲ್ಲಿ ತೊಡಗಿಸಿಕೊಂಡು ವಿದೇಶಿ ವಸ್ತ್ರದಂಗಡಿಗಳ ಪಿಕೆಟಿಂಗ್ ನಡೆಸಿದರು. ಉಪ್ಪಿನ ಸತ್ಯಾಗ್ರಹದ ನಿಮಿತ್ತ ಹಳ್ಳಿಹಳ್ಳಿಯಲ್ಲಿಯೂ ಭಾಷಣವಿತ್ತ ಈಕೆ ತನ್ನ ಪ್ರಚೋದಕಾರಿ ಭಾಷಣಕ್ಕಾಗಿ ೧೯೩೨, ೧೯೪೦ ಮತ್ತು ೧೯೪೨ರಲ್ಲಿ ಬಂಧನಕ್ಕೊಳಗಾದರು.[೨೪]

ಗಾಂಧೀಯವರ ತತ್ವವನ್ನು ಮಹಿಳೆಯರು ತಿಳಿಯಬೇಕು ಎಂದು ಅಖಿಲ ಭಾರತ ಮಹಿಳಾ ಪರಿಷತ್ತಿನ ರಾಮೇಶ್ವರಿ ನೆಹರೂ ಉದ್ಘೋಷಿಸಿದಾಗ, ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷೆಯಾದ ಶ್ರೀಮತಿ ಕೃಷ್ಣಾಬಾಯಿ ಪಂಜೀಕರರು ಕರ್ನಾಟಕ ಪ್ರವಾಸ ಕೈಗೊಂಡರು. ಈ ಸಂದರ್ಭ ಮಂಗಳೂರಿಗೆ ಆಗಮಿಸಿ ಭಾರತದ ಪ್ರಸ್ತುತ ರಾಜಕೀಯ ವಿಷಯಗಳನ್ನು ವಿವರಿಸುತ್ತಾ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಯಾವ ಉದ್ದೇಶದಿಂದ ಸ್ವಾತಂತ್ರ್ಯ ಸಂಗ್ರಾಮಕ್ಕಿಳಿದಿದೆಯೆಂದು ವಿವರಿಸಿ, ಈ ನಿಟ್ಟಿನಲ್ಲಿ ಸಕಲರೂ ಯತ್ನಿಸಬೇಕೆಂದು ಸ್ಫೂರ್ತಿವತ್ತಾಗಿ ಮಾತಾಡಿದರು.[೨೫] ಕರ್ನಾಟಕದಾದ್ಯಂತ ಪ್ರವಾಸ ಕೈಗೊಂಡ ಇವರು ಮಂಗಳೂರು ಬೆಸೆಂಟ್ ಬಾಲಿಕಾ ಪಾಠಶಾಲೆಯಲ್ಲಿ ೧೯೪೧ರ ಡಿಸೆಂಬರ್ ೬ ಮತ್ತು ೭ರಂದು ನಡೆದ ಮಹಿಳೆಯರ ತೃತೀಯ ಪರಿಷತ್ತಿನ ಅಧ್ಯಕ್ಷೆಯಾಗಿದ್ದರು.[೨೬]

ಹೊನ್ನಾವರದವರಾದ ಗಂಗಾಬಾಯಿ ಎಸ್. ಮಿರಾಜ್ಕರ್ ಗಾಂಧೀಜಿಯಿಂದ ಪ್ರಭಾವಿತರಾಗಿ ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲ್ಗೊಂಡರು. ಇವರ ಪತಿ ಬ್ರಿಟಿಷ್ ಸರಕಾರಕ್ಕೆ ವಿಧೇಯರಾಗಿದ್ದರೂ ಗಂಗಾಬಾಯಿಯವರು ಮಾತ್ರ ತಮ್ಮ ಸಹವರ್ತಿಗಳ ಜೊತೆ ಸೇರಿ ಅಹಮದಾಬಾದ್ ಕಾಂಗ್ರೆಸ್ ಅಧಿವೇಶನದಲ್ಲಿ ಪಾಲ್ಗೊಂಡಿದ್ದರು. ತಮ್ಮ ಊರಿನಲ್ಲಿ ನಡೆಯುತ್ತಿದ್ದ ಪಿಕೆಟಿಂಗ್ ಹಾಗೂ ಸಭೆಗಳಲ್ಲಿ ಶ್ರೀಮತಿ ರಮಾಬಾಯಿ ಕಲ್ಯಾಣಪುರ, ಶ್ರೀಮತಿ ಭವಾನಿ ನಾಡಕರ್ಣಿ ಮತ್ತು ಕಂದ ಕಲ್ಬಾಗ್ ಜೊತೆ ಸೇರಿ ಭಾಗವಹಿಸಿದರು. ರಾಷ್ಟ್ರೀಯ ಚಟುವಟಿಕೆಗಳನ್ನು ಸಕ್ರಿಯಗೊಳಿಸುವ ನಿಟ್ಟಿನಲ್ಲಿ ೧೯೩೧ರಲ್ಲಿ ಉಮಾಬಾಯಿ ಕುಂದಾಪುರ ಹಾಗೂ ಕೃಷ್ಣಬಾಯಿ ಪಂಜಿಕಾರ್‌ರವರು ಮಹಿಳಾ ಚಾವಡಿಯನ್ನು ಸ್ಥಾಪಿಸಿದಾಗ ಅದರಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಿರ್ಸಿ ಗೋಕರ್ಣ, ಹೊನ್ನಾವರದಲ್ಲಿ ನಡೆಯುತ್ತಿದ್ದ ಜಾತ್ರೆಗಳಲ್ಲಿ ಸ್ವದೇಶಿ ಸೀರೆಗಳು, ಬಳೆಗಳು ಮತ್ತು ಖಾದಿ ಬಟ್ಟೆಗಳ ಪ್ರಚಾರ ಕಾರ್ಯದಲ್ಲಿ ತೊಡಗಿದರು. ಹೀಗೆ ಗಂಗಾಬಾಯಿಯವರು ತಮ್ಮ ಊರಿನ ಮಹಿಳೆಯರನ್ನು ಜಾಗೃತಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸಿರುವರು.[೩೨]

ಉಡುಪಿಯವರಾದ ಸತ್ಯಾಭಾಮಾದೇವಿಯವರು ಸ್ವಾತಂತ್ರ್ಯ ಹೋರಾಟಗಾರರಾದ ವೈ. ಹೆಚ್. ಸುಬ್ಬರಾವ್ ರವರ ಪತ್ನಿ. ವಿವಾಹದ ನಂತರ ದಂಪತಿಗಳಿಬ್ಬರು ಹೊಟ್ಟೆಪಾಡಿಗಾಗಿ ಆಂಧ್ರ ಪ್ರದೇಶದ ಶ್ರೀಕಾಕುಳಕ್ಕೆ ಹೋಗಿ ಹೋಟೆಲಿನಲ್ಲಿ ಕಾರ್ಮಿಕರಾಗಿ ಸೇರಿಕೊಂಡರು. ತದನಂತರ ರಾಷ್ಟ್ರೀಯ ಹೋರಾಟಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ದಿಟ್ಟ ನಿರ್ಧಾರ ಕೈಗೊಂಡರು. ಸುಬ್ಬರಾಯರು ತಮ್ಮ ಪತ್ನಿಯನ್ನು ತವರು ಮನೆಯಲ್ಲಿ ಉಳಿದುಕೊಳ್ಳುವಂತೆ ಕೇಳಿಕೊಂಡರೂ ಒಪ್ಪದೆ ತಮ್ಮ ಮೂವತ್ತನೇ ವಯಸ್ಸಿಗೆ ಸೆರೆವಾಸಕ್ಕೆ ಸಿದ್ಧರಾದರು. ಸುಮಾರು ಇಪ್ಪತ್ತೈದು ಜನ ಮಹಿಳೆಯರನ್ನು ಸೇರಿಸಿಕೊಂಡು ಸ್ಥಳೀಯ ಹೋರಾಟಗಳಲ್ಲಿ ಮೆರವಣಿಗೆಗಳ ಮೂಲಕ ಭಾಗವಹಿಸಿದರು. ಸಾರ್ವಜನಿಕ ಭಾಷಣಗಳಲ್ಲಿ ತೊಡಗಿದ್ದಾಗ ಈಕೆ ಬಂಧನಕ್ಕೊಳಗಾಗಿ ಕಡಲೂರು ಮತ್ತು ರಾಯವೇಲೂರು ಜೈಲಿನಲ್ಲಿ ಎರಡು ತಿಂಗಳುಗಳ ಸಜೆಯನ್ನು ಅನುಭವಿಸಿದರು.[೩೮]

ಪತ್ರಕರ್ತೆ ಹಾಗೂ ನ್ಯಾಯಾಧೀಶೆಯಾಗಿದ್ದ ವಯಲೇಟ್ ಆಳ್ವರವರು ೧೯೩೮ರಲ್ಲಿ ಇಂಡಿಯನ್ ವಿಮೆನ್ಸ್ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕಿಯಾಗಿ ಸೇವೆ ಸಲ್ಲಿಸಿದರು. ಮೂಲತ: ದಕ್ಷಿಣ ಕನ್ನಡ ಜಿಲ್ಲೆಯವರಾದ ಇವರು ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿ ತನ್ನ ೬ ತಿಂಗಳ ಮಗುವಿನೊಂದಿಗೆ ಸೆರೆವಾಸವನ್ನು ಅನುಭವಿಸಿದರು. ೧೯೪೭ರಲ್ಲಿ ಬೊಂಬಾಯಿ ಪ್ರೆಸಿಡೆನ್ಸಿಯ ಗೌರವಾನ್ವಿತ ಮ್ಯಾಜಿಸ್ಟ್ರೇಟ್ ಆಗಿ ನಿಯುಕ್ತಿಗೊಂಡರು. ಅಂತರಾಷ್ಟ್ರೀಯ ಮಹಿಳಾ ವಕೀಲರ ಒಕ್ಕೂಟದ ಸದಸ್ಯರಾಗಿದ್ದರು.[೩೯]

ರಾಷ್ಟ್ರೀಯ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಕುಟುಂಬದಿಂದ ಹೊರಹಾಕಲ್ಪಟ್ಟ ಸುಬ್ಬಮ್ಮ ಜೋಯಿಸರು ತಮ್ಮ ಪತಿ ಎಂ.ಎಸ್ ಜೋಯಿಸರೊಂದಿಗೆ ೧೯೩೦ರಲ್ಲಿ ಸಿರ್ಸಿ ಮತ್ತು ಸಿದ್ಧಾಪುರಗಳಿಗೆ ತೆರಳಿ

ಉಪ್ಪಿನ ಸತ್ಯಾಗ್ರಹ, ಕರ ನಿರಾಕರಣೆ ಮತ್ತು ಜಂಗಲ್ ಸತ್ಯಾಗ್ರಗಳಲ್ಲಿ ಭಾಗವಹಿಸಿ ಜನ ಜಾಗೃತಿ ಮೂಢಿಸಿದರು. ಮಹಿಳಾ ಕಾರ್ಯಕರ್ತೆಯರಾದ ಗೌರಮ್ಮ, ಕಾವೇರಮ್ಮ, ವೆಂಕುಬಾಯಿ, ಪರಮೇಶ್ವರಮ್ಮ, ನಾಗವೇಣಿ ಬಾಯಿ, ಸೀತಾಬಾಯಿ ಹೆಗ್ಗಡೆ ಜೊತೆ ಸೇರಿ ಕರನಿರಾಕಣೆ ಅಭಿಯಾನದಲ್ಲಿ ಪಾಲ್ಗೊಂಡು ಬ್ರಿಟಿಷರಿಂದ ಬಂಧನಕ್ಕೊಳಗಾದರು.

ವಿದ್ಯಾವಂತ ಕುಟುಂಬದಲ್ಲಿ ಹುಟ್ಟಿದ ಯಶೋಧರ ದಾಸಪ್ಪನವರು ತಮ್ಮ ತಂದೆ ರಾಮಯ್ಯನವರಿಂದ ಪ್ರಚೋದಿತರಾಗಿ ರಾಷ್ಟ್ರೀಯ ಚಳವಳಿಯಲ್ಲಿ ತೊಡಗಿಸಿಕೊಂಡರು. ಶಿವಪುರ ಕಾಂಗ್ರೆಸ್ ಅಧಿವೇಶನದಲ್ಲಿ ಬಳ್ಳಾರಿ ಸಿದ್ದಮ್ಮನವರ ಜೊತೆ ಸೇರಿ ಧ್ವಜ ಹಾರಿಸಲು ಮುಂದಾದ ನಾಯಕರನ್ನು ಬ್ರಿಟಿಷ್ ಬಂಧಿಸಿದಾಗ, ಯಶೋದರಮ್ಮನವರು ತಮ್ಮ ಹೆಗಲ ಮೇಲಿನ ಜವಾಬ್ದಾರಿಯನ್ನು ಇತರ ಕಾರ್ಯಕರ್ತೆಯರಾದ ಟಿ. ಸುಂದರಮ್ಮ, ಸುಬ್ಬಮ್ಮ ಜೋಯಿಸ್, ಸುಶೀಲಮ್ಮ ನಾಗೇಶರಾವ್, ವೆಂಕಮ್ಮ ಸೀತಾರಾಮಯ್ಯ ನವರ ಜೊತೆ ಸೇರಿ ನಿರ್ವಹಿಸಿದರು. ಧ್ವಜವನ್ನು ಕೆಳಗಿಳಿಸದೆ ಸಾಯಂಕಾಲದವರೆಗೂ ಸರ್ಪಗಾವಲು ಮಾಡಿದ್ದು ಮೈಸೂರಿನ ಇತಿಹಾಸದಲ್ಲಿ ಚಿರಸ್ಮರಣೀಯವಾಗಿ ಉಳಿದಿದೆ. ಗಾಂಧೀಜಿಯವರಿಂದ ಪ್ರಭಾವಿತರಾದ ಇವರು ಬಡತನ, ಅನಕ್ಷರತೆ, ಅಜ್ಞಾನ ತೊಡೆದುಹಾಕಲು ಶ್ರಮಿಸಿದರು. ತಮ್ಮ ಕುಟುಂಬದ ಒತ್ತಾಸೆಯಿಂದಾಗಿ ಹಾಗೂ ಭಾರತದ ಶ್ರೇಣೀಕೃತ ಜಾತಿ ವ್ಯವಸ್ಥೆಯ ಲಾಭ ಪಡೆದವರಾಗಿ ರಾಜಕಾರಣಕ್ಕೆ ಬಂದವರಾದರೂ ರಾಜಕಾರಣದ ನೆಲೆಗಳನ್ನು ತಕ್ಕಷ್ಟು ಅರಿತವರಾಗಿದ್ದರು.[೪೦]

ಸತ್ಯಾಗ್ರಹಿಯಾಗಿ ಅನುಭವಿಸಿದ ನೋವು ಮತ್ತು ತ್ಯಾಗದ ಮೂಲಕ ಇತರರಿಗೆ ಮಾದರಿಯಾದ ಪದ್ಮಾವತಿ ಬೀದರಿಯವರು ವಾಮನ ರಾವ್ ಬೀದರಿಯವರೊಂದಿಗೆ ವಿವಾಹವಾದ ನಂತರ ಸಾರ್ವಜನಿಕ ರಂಗ ಪ್ರವೇಶಿಸಿದರು. ಚರಕದಿಂದ ನೂಲುವುದನ್ನು ಕಲಿತ ಈಕೆ ತನ್ನ ಸಹವರ್ತಿಗಳಿಗೆ ನೂಲುವುದನ್ನು ಮತ್ತು ದೇಶಭಕ್ತಿ ಗೀತೆಗಳನ್ನು ಕಲಿಸಿದರು. ಹರಿಜನೋದ್ಧಾರದಲ್ಲಿ ತೊಡಗಿ ಅವರ ಏಳಿಗೆಗಾಗಿ ಶ್ರಮಿಸಿದರು. ಉಪ್ಪಿನ ಸತ್ಯಾಗ್ರಹ ಮತ್ತು ಕ್ವಿಟ್ ಇಂಡಿಯಾ ಚಳವಳಿಗಳಲ್ಲಿ ಭಾಗವಹಿಸಿದ ಕಾರಣಕ್ಕಾಗಿ ಎರಡು ಬಾರಿ ಬಂಧನಕ್ಕೊಳಪಟ್ಟರು. ಸಾಮಾಜಿಕ ಚಟುವಟಿಕೆಗಳಿಗಾಗಿ ೧೯೩೭ರಲ್ಲಿ ಪ್ರಾರಂಭವಾದ 'ಯೂತ್ ಲೀಗ್' ಇದರ ಕಾರ್ಯಕ್ರಮಗಳಲ್ಲಿ ಸುನಂದಮ್ಮನವರು ತೊಡಗಿಸಿಕೊಂಡಿದ್ದರು. ಒಮ್ಮೆ ಸರದಾರ್ ವಲ್ಲಭಬಾಯಿಯವರು ಯೂತ್ ಲೀಗಿನ ಕಾರ್ಯಕ್ರಮಕ್ಕೆ ಆಗಮಿಸಿದ ಸಂದರ್ಭ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಲು ಕರೆ ನೀಡಿದರು. ಇದರಿಂದ ಪ್ರಭಾವಿತರಾದ ಸುನಂದಮ್ಮನವರು ಶಿವಪುರ ಕಾಂಗ್ರೆಸ್ ಅಧಿವೇಶನದಲ್ಲಿ ಸ್ವಯಂ ಸೇವಿಕೆಯರ ನಾಯಕಿಯಾಗಿ ನೇಮಕಗೊಂಡು ನಂತರದಲ್ಲಿ ಮೈಸೂರು ಚಲೋ ಚಳವಳಿಯಲ್ಲೂ ಭಾಗವಹಿಸಿದರು. ದೇಶಭಕ್ತಿ ಮತ್ತು ಸ್ವದೇಶಿ ಒಲವು ಜಯದೇವಿ ತಾಯಿ ಲಿಗಾಡೆಯವರನ್ನು ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಲು ಪ್ರೋತ್ಸಾಹಿಸಿದವು. ತಮ್ಮ ಹಿರಿಯರಿಂದ ಪ್ರಭಾವಿತರಾದ ಇವರು ಉಪ್ಪಿನ ಸತ್ಯಾಗ್ರಹದಲ್ಲಿ ಪಾಲ್ಗೊಂಡರು.[೪೧]

ಶಾಂತಾಬಾಯಿ ಕರಮರಕರರಂತಹ ಮೇಲು ನೆಲೆಯ ಮಹಿಳೆಯರು ರಾಷ್ಟ್ರನಾಯಕರ ಪ್ರಭಾವಕ್ಕೆ ಒಳಗಾಗಿ ರಾಷ್ಟ್ರೀಯ ಚಳವಳಿಯ ಕಡೆಗೆ ಆಸಕ್ತರಾಗಿ ಧುಮುಕಿದರು. ನಾಡಿನಾದ್ಯಂತ ಮಹಿಳಾ ಸಂಘಟನೆ, ಮಹಿಳಾ ಸಮಾವೇಶಗಳನ್ನು ಹುಟ್ಟುಹಾಕಿ ಆ ಮೂಲಕ ಗ್ರಾಮೀಣ ಮಹಿಳೆಯರನ್ನು, ವಿದ್ಯಾರ್ಥಿನಿಯರನ್ನು ಚಳವಳಿಯಲ್ಲಿ ಒಳಗೊಳಿಸಿದ್ದು ಬಹಳ ಮಹತ್ವದ್ದಾಗಿದೆ.[೪೧] ಹೀಗೆ ಸ್ವಾತಂತ್ರ್ಯ ಚಳವಳಿಯಲ್ಲಿ ಸತ್ಯಾಗ್ರಹಿಗಳಾಗಿ ಭಾಗವಹಿಸಿ ಬ್ರಿಟಿಷರಿಂದ ಬಂಧನಕ್ಕೊಳಗಾದ ಇತರ ಹೋರಾಟಗಾರ್ತಿಯರಲ್ಲಿ ಸಿದ್ದಮತಿ ಮೈಲಾರ್, ರಮಾ ಬಾಯಿ ಜೀವನ್ ರಾವ್ ಯಾಲ್ಗಿ, ಸೀತಾಬಾಯಿ ರಾಮಚಂದ್ರ ಮಡ್ಗಾಂವ್ಕರ್, ಭವಾನಿಬಾಯಿ ಕಾನಗೋಡು, ಜಯಲಕ್ಷ್ಮಿಬಾಯಿ, ಬಲ್ಯತಂಡ ಮುದ್ದಮ್ಮ, ಲೀಲಾವತಿ ಮಾಗಡಿ, ಶಕುಂತಲ ಕುರ್ತಕೋಟಿ, ಉತ್ತರ ಕರ್ನಾಟಕದ ಸಿದ್ದಾಪುರದ ಕೆಳಂಗಿನ ಮನೆಯ ಹರಿಜನ ದೇವಿ, ಶಕುಂತಲಾ ದಾಬಡೆ, ಆನಂದಿಬಾಯಿ ಹಮ್ಮತೀಕರ, ಅಥಣಿಯ ಅಂಬಕ್ಕ ಬಳೆಗಾರ ಇವರು ಪ್ರಮುಖರಾಗಿದ್ದಾರೆ. ಪರಕೀಯರ ದಾಸ್ಯದಿಂದ ಬಿಡುಗಡೆ ಹೊಂದಲು ತೆರಮರೆಯಲ್ಲಿದ್ದು ಹೋರಾಡಿ ಜೈಲು ಶಿಕ್ಷೆ ಅನುಭವಿಸಿ, ಸಂಸಾರದ ಭಾರದ ಜೊತೆಗೆ ದೇಶಕ್ಕಾಗಿ ಹೋರಾಡಿದ ಇವರ ತ್ಯಾಗ ಶ್ಲಾಘನೀಯ.

### ೬.೨ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ರಾಷ್ಟ್ರೀಯ ಹೋರಾಟ ಮತ್ತು ಮಹಿಳೆ

ರಾಷ್ಟ್ರೀಯತೆಯ ವಿಚಾರಗಳು ಹತ್ತೊಂಭತ್ತನೆಯ ಶತಮಾನದಲ್ಲಿ ಮಹಿಳಾ ಸಮಸ್ಯೆಯನ್ನು ವಿಭಿನ್ನವಾಗಿ ಗ್ರಹಿಸಿ, ಅದಕ್ಕೆ ಪ್ರತಿಕ್ರಿಯಿಸಿದ್ದು ವಸಾಹತುಶಾಹಿ ಆಡಳಿತದ ಪರಿಣಾಮವಾಗಿಯೇ. ಕರ್ನಾಟಕದಲ್ಲಿ ಬಹಳ ಬೇಗ ವಸಾಹತುಶಾಹಿ ಆಡಳಿತಕ್ಕೆ ಒಳಗಾದ ಪ್ರದೇಶ ದಕ್ಷಿಣ ಕನ್ನಡ. ಬಂದರು ಪ್ರದೇಶವಾದ್ದರಿಂದ ಹಡಗಿನ ಪ್ರಯಾಣವು ಕರಾವಳಿಗೆ ವಸಾಹತು ಆಡಳಿತಕ್ಕೆ ತೆರೆದುಕೊಳ್ಳಲು ಸಹಾಯಕವಾಗಿಯೇ ಇತ್ತು. ಹಾಗಾಗಿ ಕರಾವಳಿಯು ಕ್ರೈಸ್ತ ಮಿಷನರಿಗಳು ಸ್ಥಾಪಿಸಿದ ಆಧುನಿಕ ಸೌಲಭ್ಯಗಳನ್ನು ಬಹಳ ಬೇಗ ಪಡೆದುಕೊಂಡಿತು. ಆಧುನಿಕ ಸೌಕರ್ಯಗಳು ಪ್ರವೇಶಿಸಿದಷ್ಟೇ ಅಲ್ಲದೆ ಭೌತಿಕ ಬೆಳವಣಿಗೆಯ ಜೊತ ಜೊತೆಯಲ್ಲಿಯೇ ಬೌದ್ಧಿಕ ಬದಲಾವಣೆಗಳೂ ಉಂಟಾದವು.

ಹೊಸಹೊಸ ವಿಚಾರಗಳು ಬದುಕನ್ನು ಸ್ಥಿತ್ಯಂತರಕ್ಕೆ ಒಳಮಾಡಿದವು. ಸ್ತ್ರೀ ಸಂಬಂಧಿ ವಿಚಾರಕ್ಕೆ ಸಂಬಂಧಿಸಿದಂತೆ ಪರಂಪರೆ ಮತ್ತು ಆಧುನಿಕತೆಯ ನಡುವೆ ಉಂಟಾದ ಮುಖಾಮುಖಿಯ ಪ್ರಭಾವವನ್ನು ಅರಿತುಕೊಳ್ಳುವುದು ಅಗತ್ಯವಾಗಿದೆ. ಸ್ವಾತಂತ್ರ್ಯ ಸಮರದ ಕಾಲದಲ್ಲಿ ಜಿಲ್ಲೆಯ ಮಹಿಳೆಯರು ಮುಂಚೂಣಿಯಲ್ಲಿದ್ದರು ಎನ್ನುವುದಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ಗಾಂಧೀಜಿಯವರು ಜಿಲ್ಲೆಗೆ ಆಗಮಿಸಿದಾಗ ಸ್ವಾತಂತ್ರ್ಯ ಹೋರಾಟದ ಬಿಸಿ ಎಲ್ಲೆಲ್ಲೂ ಆವರಿಸಿತ್ತು. ಜಾತಿ, ಮತ, ಲಿಂಗಬೇಧವಿಲ್ಲದೆ ಜನರು ಸಂಗ್ರಾಮದಲ್ಲಿ ಪಾಲ್ಗೊಂಡಿದ್ದರು.[೪೨] ಅಸಹಕಾರ ಮತ್ತು ಕಾನೂನುಭಂಗ ಚಳವಳಿಗಳಲ್ಲಿ ಮಹಿಳೆಯರು ಭಾಗವಹಿಸಿದ್ದು ಮಾತ್ರವಲ್ಲದೆ ತಮ್ಮ ಸ್ವಂತ ಆಸಕ್ತಿಯಿಂದ ನಾಯಕಿಯರಾಗದೆ, ಸ್ವಯಂಸೇವಿಕೆಯರಾಗಿ

ಪಾಲ್ಗೊಂಡಿರುವುದು ಗಮನಾರ್ಹವಾಗಿದೆ. ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಿಗೆ ಒಗ್ಗೊಟ್ಟು ರಾಷ್ಟ್ರ ನಿಧಿಗೆ ಹಣ ಸಂಗ್ರಹಿಸಲು, ಖಾದಿ ಪ್ರಚಾರ ಕಾರ್ಯದಲ್ಲಿ ಹಾಗೂ ವಿದೇಶಿ ವಸ್ತುಗಳ ಬಹಿಷ್ಕಾರದಲ್ಲೂ ಮಹಿಳೆಯರು ಭಾಗವಹಿಸಿರುವರು.[೪೪] ಗಾಂಧೀಜಿಯವರ ಪ್ರಭಾವದಿಂದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾರ್ನಾಡ್ ಸದಾಶಿವರಾಯರು ಸಕ್ರಿಯವಾಗಿ ರಾಷ್ಟ್ರೀಯ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡು ಇತರರನ್ನೂ ಹುರಿದುಂಬಿಸಿದರು. ಕಾರ್ನಾಡರ ಮಗಳು ಸುಗುಣಾ ಕಾರ್ನಾಡರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟದ ತನ್ನ ಅನುಭವಗಳನ್ನು ತಿಳಿಸುವಾಗ 'ತಾಯಿನಾಡಿನ ಸ್ವಾತಂತ್ರ್ಯ ಸಂಗ್ರಾಮವು ನನ್ನ ತಂದೆಯ ಜೀವನದೊಂದಿಗೆ ಹಾಸುಹೊಕ್ಕಾಗಿದೆ' ಎನ್ನುತ್ತಾರೆ. ಸ್ವದೇಶಿ ಚಳವಳಿಯ ಅಂಗವಾಗಿ ದೇಶಭಕ್ತಿಗೀತೆಗಳನ್ನು ಹಾಡುತ್ತಾ ಸಹಕಾರ್ಯಕರ್ತರ ಜೊತೆ ನಗರಸಂಕೀರ್ತನೆ ನಡೆಸಿ ವಿದೇಶಿ ಬಟ್ಟೆಗಳನ್ನು ಸುಡುವಾಗ ಶಾಂತಾ ಕಾರ್ನಾಡರ ಸೀರೆಗಳನ್ನು ಸುಡಲಾಯಿತು. ವಿದೇಶಿ ಬಟ್ಟೆಯನ್ನು ತ್ಯಜಿಸಿ ಖಾದಿ ಬಟ್ಟೆಯನ್ನು ತೊಡಲಾರಂಭಿಸಿದ ಶಾಂತಾ ಕಾರ್ನಾಡರು ಟಿಳಕ ಸ್ವರಾಜ್ಯ ನಿಧಿಗಾಗಿ ತಮ್ಮ ವಜ್ರದ ಓಲೆಗಳು, ಮೂಗುತಿ, ಹಾಗೂ ಇತರ ಆಭರಣಗಳನ್ನು ತೆಗೆದು ನೀಡಿರುವರು. ಆ ಮೂಲಕ ಜಿಲ್ಲೆಯ ಮಹಿಳೆಯರಿಗೆ ಮಾದರಿಯಾದರು.

ಗಣಪತಿ ಹೈಸ್ಕೂಲ್, ಡಿಪ್ರೆಸ್ಡ್ ಕ್ಲಾಸ್ ಮಿಶನ್, ಬೆಸೆಂಟ್ ಹೈಸ್ಕೂಲ್ ಮಾತ್ರವಲ್ಲದೆ ಸಮಾಜಸುಧಾರಣಾ ಚಳವಳಿಗಳಲ್ಲಿ ಸಹಾಯ ಹಸ್ತ ತೋರಿದ ಕಾರ್ನಾಡರು ಸ್ತ್ರೀ ಶಿಕ್ಷಣ ಮತ್ತು ವಿಧವಾಪುನರ್ವಿವಾಹ ಮುಂತಾದ ವಿಷಯಗಳಲ್ಲಿ ಅವರು ಆಸ್ಥೆ ಹೊಂದಿದ್ದರಲ್ಲದೆ ಜಾತಿಭೇದಗಳ ನಿವಾರಣೆಗೂ ಶ್ರಮಿಸಿರುವರು. ದಕ್ಷಿಣ ಕನ್ನಡ ಜಿಲ್ಲೆಯ ಮಹಿಳೆಯರ ಸಬಲೀಕರಣಕ್ಕಾಗಿ ಸ್ಥಾಪಿತವಾದ 'ಮಹಿಳಾ ಸಭಾ' ಮೊದಲಿಗೆ ಕಾರ್ನಾಡರ ಮನೆಯಲ್ಲಿಯೇ ಪ್ರಾರಂಭವಾಗಿ, ಶಾಂತಾ ಕಾರ್ನಾಡರು ಕಮಲಾದೇವಿ ಚಟ್ಟೋಪಾಧ್ಯಾಯರ ಜೊತೆ ಸೇರಿ, ಮಹಿಳೆಯರನ್ನು ಒಗ್ಗೂಡಿಸಿ ವಿವಿಧ ಚಟುವಟಿಕೆಗಳನ್ನು ಪ್ರಾರಂಭಿಸಿದರು.

ಬ್ರಹ್ಮಸಮಾಜದಿಂದ ಪ್ರಭಾವಿತರಾದ ಕಾರ್ನಾಡರು, ಗಾಂಧೀಜಿಯವರನ್ನು ಮಂಗಳೂರಿಗೆ ಬರುವಂತೆ ಆಮಂತ್ರಿಸಿ ಪತ್ರ ಬರೆದಿದ್ದರು.[೪೫] ೧೯೨೦ರಲ್ಲಿ ಮಹಾತ್ಮಾಗಾಂಧಿಯವರು ಅಸಹಕಾರ ಚಳವಳಿಯನ್ನು ಪ್ರಾರಂಭಿಸಿ, ಬ್ರಿಟಿಷ್ ಅಧಿಕಾರಿಗಳೊಂದಿಗಿನ ಸಹಕಾರವನ್ನು ನಿಲ್ಲಿಸಿ, ಎಲ್ಲಾ ಸರಕಾರಿ ವ್ಯವಸ್ಥೆಯಿಂದ ಹೊರಬಂದು ಪರದೇಶಿ ಸರಕುಗಳ ಕೊಡುಕೊಳ್ಳುವಿಕೆಯನ್ನು ತಡೆಯಲು ಆದೇಶಿಸಿದರು. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ೧೯೨೦-೨೨ರ ನಡುವೆ ವಿದೇಶಿ ವಸ್ತ್ರಗಳ ಬಹಿಷ್ಕಾರ ಮತ್ತು ಮದ್ಯಪಾನ ವಿರೋಧಿ ಚಟುವಟಿಕೆಗಳಿಗೆ ಉತ್ತಮ ಪ್ರತಿಕ್ರಿಯೆ ಸಿಕ್ಕಿತು. ಅಸಹಕಾರ ಚಳವಳಿಯ ತರುವಾಯ ಗಾಂಧೀಜಿ ರೂಪಿಸಿದ ರಚನಾತ್ಮಕ ಕಾರ್ಯಕ್ರಮಗಳ ಭಾಗವಾಗಿಯೂ ಖಾದಿ, ಸ್ವದೇಶಿ, ಮದ್ಯಪಾನ ನಿರೋಧ ಮುಂತಾದ ಚಟುವಟಿಕೆಗಳು ಸ್ವಾತಂತ್ರ್ಯ ಹೋರಾಟದ ಭಾಗವಾಗಿಯೇ ೧೯೪೭ರ ತನಕವೂ

ಮುಂದುವರಿದಿರುವುದು ವಿಶೇಷ. ಉಡುಪಿಯಲ್ಲಿ ಸ್ವಾತಂತ್ರ್ಯ ಹೋರಾಟಗಾರರು ರಥಬೀದಿಯಲ್ಲಿ ಮೆರವಣಿಗೆ ನಡೆಸಿ ವಿದೇಶಿ ಬಟ್ಟೆಗಳನ್ನು ಸಂಗ್ರಹಿಸಿ, ವಾರಕ್ಕೊಮ್ಮೆ ಅಜ್ಜರಕಾಡಿನಲ್ಲಿ ಸಾಮೂಹಿಕವಾಗಿ ದಹಿಸುತ್ತಿದ್ದರು. ಇದರಿಂದ ಖಾದಿ ಬಟ್ಟೆಗಳಿಗೆ ಬೇಡಿಕೆ ಹೆಚ್ಚಾಯಿತು.[೪೬]

೧೯೨೦ರ ಆಗಸ್ಟ್೧೯ರಂದು ಗಾಂಧೀಜಿ ದಕ್ಷಿಣ ಕನ್ನಡ ಜಿಲ್ಲೆಗೆ ಆಗಮಿಸಿದಾಗ ರಾಜಕೀಯ ಚೈತನ್ಯಕ್ಕೆ ಹೊಸ ಬಲವರ್ಧನೆ ಸಿಕ್ಕಿದಂತಾಯಿತು. ದೇಶದಲ್ಲಿ ತಾವು ನಡೆಸಬಯಸಿದ ಅಸಹಕಾರ ಮತ್ತು ಖಿಲಾಫತ್ ಚಳವಳಿಗಳ ಪ್ರಚಾರದ ಅಂಗವಾಗಿ ಗಾಂಧೀಜಿಯವರ ಜೊತೆ ಶೌಕತ್ ಆಲಿಯವರೂ ಆಗಮಿಸಿದ್ದರು.[೪೭] ಅವರಿಗೆ ಭಿನ್ನವತ್ತಳೆ ಅರ್ಪಿಸಲಾಯಿತಲ್ಲದೆ, ಮಂಗಳೂರಿನಲ್ಲಿ ಸಾರ್ವಜನಿಕ ಸಭೆ ಹಾಗೂ ಮಹಿಳೆಯರ ಸಭೆಗಳಾದವು. ಸಾರ್ವಜನಿಕ ಸಭೆಯಲ್ಲಿ ತಮ್ಮ ಅಸಹಕಾರ ಚಳವಳಿಯ ಕಲ್ಪನೆಯನ್ನು ಗಾಂಧೀಜಿ ತಿಳಿಸಿ, ರಾಷ್ಟ್ರನಿಧಿಗೆ ಸಹಕರಿಸಬೇಕಾಗಿ ವಿನಂತಿಸಿದರು.

ಮಹಿಳೆಯರ ಸಭೆಯಲ್ಲಿ ಸ್ತ್ರೀಯರು ರಾಷ್ಟ್ರೀಯ ನಿಧಿಗಾಗಿ ತಮ್ಮ ಆಭರಣಾಧಿಗಳನ್ನು ಕಿತ್ತು ಗಾಂಧೀಜಿಗೆ ಕೊಟ್ಟ ಪ್ರಸಂಗ ಅಪೂರ್ವವಾಗಿ, ಈ ಬಗ್ಗೆ ಗಾಂಧೀಜಿ ಕೂಡಾ ಅಚ್ಚರಿ ಪಟ್ಟರು.[೪೮] ಸಾರ್ವಜನಿಕ ಸಭೆ ನಡೆದಾಗ ಇಲ್ಲಿನ ಕೇಂದ್ರ ಮೈದಾನದಲ್ಲಿ ಹತ್ತು ಸಾವಿರ ಸಂಖ್ಯೆಯ ಅಗಾಧ ಜನಸ್ತೋಮವನ್ನು ಉದ್ದೇಶಿಸಿ ಮಾತನಾಡಿದ ಸಂದರ್ಭ ಕಾರ್ನಾಡರ ಪುತ್ರಿಯರಾದ ಸುಗುಣ ಮತ್ತು ರಾಧ ತಮ್ಮ ಬಂಗಾರದ ಬಳೆಗಳನ್ನು, ಸರಪಳಿಗಳನ್ನೂ ತೆಗೆದು ಗಾಂಧೀಜಿಯವರಿಗೆ ನೀಡಿದರು. ತುಂಬಿದ ಜನಜಂಗುಳಿಯ ನಡುವಿನಿಂದ ಒಬ್ಬರ ನಂತರ ಒಬ್ಬರಂತೆ ಸ್ತ್ರೀಯರು ಎದ್ದು ಹೋಗಿ ತಮ್ಮ ಬಳೆ ಹಾಗೂ ಇನ್ನಿತರ ಆಭರಣಗಳನ್ನು ಕಿತ್ತು ಕೊಟ್ಟಾಗ ಅದ್ವಿತೀಯ ದೃಶ್ಯ ಸೃಷ್ಟಿಯಾಗಿತ್ತು.[೪೯] ಕಾಸರಗೋಡಿನಲ್ಲಿಯೂ, ಸ್ತ್ರೀಯರು ರಾಷ್ಟ್ರೀಯ ನಿಧಿಗಾಗಿ ತಮ್ಮ ಆಭರಣಾಧಿಗಳನ್ನು ಕಿತ್ತು ಕೊಟ್ಟ ಪ್ರಸಂಗ ಅಪೂರ್ವವಾಗಿತ್ತು.

ಕುಟುಂಬ ಮತ್ತು ಸುತ್ತಮುತ್ತಲ ಪರಿಸರದಲ್ಲಿ ರಾಷ್ಟ್ರಪ್ರಜ್ಞೆ ಮತ್ತು ರಾಷ್ಟ್ರಪ್ರೇಮವನ್ನು ಮೂಡಿಸುವಲ್ಲಿ ಹೆಣ್ಣಿನ ಪಾತ್ರ ಪ್ರಧಾನವಾಗಿದೆ ಎಂಬುವುದು ಗಾಂಧೀಜಿಯವರ ನಿಲುವಾಗಿತ್ತು. ಮಂಗಳೂರು ಮತ್ತು ಉಡುಪಿ ಸ್ವಾತಂತ್ರ್ಯ ಚಳವಳಿಯ ಕ್ರಿಯಾಶೀಲ ಕೇಂದ್ರಗಳಾಗಿ ಬಿಟ್ಟವು. ಅನೇಕ ವಿದ್ಯಾರ್ಥಿಗಳು ಸರಕಾರದಿಂದ ನಡೆಸಲಾಗುತ್ತಿದ್ದ ಶಾಲಾ ಕಾಲೇಜುಗಳಿಂದ ಹೊರಬಂದರು. ಮಂಗಳೂರು, ಉಡುಪಿ, ಹಿರಿಯಡ್ಕ, ಪೆರ್ಡೂರು, ಕಾಸರಗೋಡು ಮೊದಲಾಗಿ ದಕ್ಷಿಣ ಕನ್ನಡದಾದ್ಯಂತ ರಾಷ್ಟ್ರೀಯ ಶಾಲೆಗಳು ಸ್ಥಾಪಿತವಾದವು. ಯುವಕರು ಸರಕಾರಿ ಶಾಲೆ, ಕಾಲೇಜು ಮತ್ತು ಕೋರ್ಟುಗಳ ಮುಂದೆ ಧರಣಿಗಿಳಿದರು. ವಿದೇಶಿ ವಸ್ತ್ರಗಳನ್ನು ಬಹಿಷ್ಕರಿಸಿ ಸುಡಲಾಯಿತು.[೫೦] ಸರಕಾರಮಾನ್ಯ ಶಾಲೆಗಳ ತ್ಯಾಗಕ್ಕೆ ಗಾಂಧೀಜಿಯವರು ಕರೆಕೊಟ್ಟಾಗ ಕಾನ್ವೆಂಟ್ ಶಾಲೆಯಲ್ಲಿ ಶಿಕ್ಷಣ ಪಡೆಯುತ್ತಿದ್ದ ಕಾರ್ನಾಡರ ಮಗಳಾದ ರಾಧ ಕಾರ್ನಾಡ್ ಶಾಲೆ ತ್ಯಜಿಸಿ, ತಮ್ಮ ಮನೆಯ ವಠಾರದಲ್ಲೇ ತಮ್ಮ ತಂದೆ ಪ್ರಾರಂಭಿಸಿದ ಟಿಲಕ ವಿದ್ಯಾಲಯವೆಂಬ ರಾಷ್ಟ್ರೀಯ ಶಾಲೆಯನ್ನು ಸೇರಿದರು. ಶೈಕ್ಷಣಿಕ ವಿಷಯಗಳ ಜೊತೆಗೆ ನೂಲುವುದು, ನೇಯ್ಗೆ ಮತ್ತು ಇತರ ಗ್ರಾಮೋದ್ಯೋಗದ ಕಸಬುಗಳಲ್ಲಿ

ತರಬೇತಿ ನೀಡಲಾಗುತ್ತಿತ್ತು. ಇಡೀ ಜಿಲ್ಲೆಯಲ್ಲಿ ಇಂಥಹ ೨೧ ಶಾಲೆಗಳು ನಡೆಯಲು ಕಾರ್ನಾಡರು ಕಾರಣಕರ್ತರಾದರು. ಶಾಲೆಯ ವಿದ್ಯಾರ್ಥಿಗಳಿಗೆ ಉಚಿತ ಖಾದಿ ಸಮವಸ್ತ್ರ ನೀಡುವುದರ ಜೊತೆ ಹರಿಜನ ವಿದ್ಯಾರ್ಥಿಗಳಿಗೆ ಮಧ್ಯಾಹ್ನದ ಊಟ ನೀಡಲಾಗುತ್ತಿತ್ತು. ಶಾಂತಾ ಕಾರ್ನಾಡ್ ಮತ್ತು ಕಾರ್ನಾಡರ ತಾಯಿ ಊಟವನ್ನು ನೀಡುವುದರೊಂದಿಗೆ ಕಾರ್ನಾಡರ ಎಲ್ಲಾ ಕಾರ್ಯಗಳಲ್ಲಿ ಕೈಜೋಡಿಸತೊಡಗಿದರು.[೫೧] ಜಿಲ್ಲೆಯಲ್ಲಿ ರಾಷ್ಟ್ರೀಯತೆಯ ಗಾಳಿ ಬಲವಾಗಿ ಬೀಸಿದಾಗ ಸಮಾಜದ ಅತ್ಯಂತ ಕೆಳವರ್ಗದವರೂ ಸೇರಿದಂತೆ ಎಲ್ಲರೂ ಶಿಕ್ಷಣದ ಪ್ರಯೋಜನ ಪಡೆಯಬೇಕೆಂಬ ಎಚ್ಚರಮೂಡಿತು. ರಾಷ್ಟ್ರೀಯ ಪತ್ರಿಕೆಗಳು ಪಂಚಮರ ಶಿಕ್ಷಣ ಸುಧಾರಣೆಗಾಗಿ ದೇಣಿಗೆ ನೀಡುವಂತೆ ತೀವ್ರವಾದ ಮನವಿ ಮಾಡಿದುವು.[೫೨]

ರಾಷ್ಟ್ರೀಯತೆಯ ಉಬ್ಬರದ ಕಾಲದಲ್ಲಿ ಪಂಚಮರ ಉದ್ಧಾರಕ್ಕೆ ಪ್ರಯತ್ನಗಳು ನಡೆದುವು. ಆರ್ಯಸಮಾಜವೂ ತನ್ನ ಚಟುವಟಿಕೆಗಳನ್ನು ಸಕ್ರಿಯಗೊಳಿಸಿತು.[೫೩] ಇಂದಬೆಟ್ಟು ಪಟೇಲ ನಾಗರಾಜಶೆಟ್ಟಿಯವರು ೫೦ ಮಂದಿ ಪಂಚಮರ ಶುದ್ಧಿಸಂಸ್ಕಾರದಲ್ಲಿ ಪಾಲ್ಗೊಂಡ ಕುರಿತು 'ಸ್ವದೇಶಾಭಿಮಾನಿ' ಪತ್ರಿಕೆ ವರದಿ ಮಾಡಿತ್ತು. ಕ್ರೈಸ್ತ ಧರ್ಮೀಯರಾಗಿ ಮತಾಂತರಗೊಂಡ ಇವರನ್ನು ಮತ್ತೆ ಹಿಂದೂ ಧರ್ಮದ ಮಡಿಲಿಗೆ ತರಲಾಯಿತು. ೧೯೨೪ರಲ್ಲಿ ಬೆಳಗಾಂ ಕಾಂಗ್ರೆಸ್ ಅಧಿವೇಶನವು ಕರ್ನಾಟಕದಲ್ಲಿ ಆಗುವಂತೆ ಕಾರ್ನಾಡರು ಗಂಗಾಧರ್ ರಾವ್ ದೇಶಪಾಂಡೆಯವರ ಜೊತೆ ಸೇರಿ ಗಾಂಧೀಜಿಯವರನ್ನು ಒಪ್ಪಿಸಿದರು. ಆದರೆ ಮುಂದೆ ಸ್ಥಳ ನಿರ್ಣಯಿಸುವ ಪ್ರಶ್ನೆ ಬಂದಾಗ ಬಹುಪಾಲು ಕೆ.ಪಿ.ಸಿ.ಸಿ ಸದಸ್ಯರು ಸಭೆ ಮಂಗಳೂರಿನಲ್ಲಿ ನಡೆಯಬೇಕೆಂಬ ಪರ ಮತವಿತ್ತರೂ ಗಂಗಾಧರ ರಾವ್ ದೇಶಪಾಂಡೆಯವರ ಪ್ರಭಾವ ಮತ್ತು ಇತರ ನಾಯಕರ ಹೊಂದಾಣಿಕೆಯ ಮನೋಭಾವಗಳು ವಾದವನ್ನು ಸುಲಭದಲ್ಲಿ ಬಗೆಹರಿಸಿದ ಕಾರಣ ಕಾರ್ನಾಡರು ತಮಗೆ ಸಲ್ಲಬೇಕಾಗಿದ್ದ ಗೌರವವನ್ನು ತ್ಯಜಿಸಿದರು. ಇದರ ಬಗ್ಗೆ ಸ್ಥಳೀಯ ಪತ್ರಿಕೆಯೊಂದು ವಿಮರ್ಶಿಸುತ್ತ 'ಭೀಷ್ಮ ಪಟ್ಟಾಧಿಕಾರವನ್ನು ತ್ಯಜಿಸಿದಂತೆ' ಎಂದು ಕಾರ್ನಾಡರನ್ನು ವರ್ಣಿಸಿತ್ತು.

ಬೆಳಗಾವಿ ಅಧಿವೇಶನವನ್ನು ಹಮ್ಮಿಕೊಂಡ ಸಂದರ್ಭ ದಕ್ಷಿಣ ಕನ್ನಡ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರ್ತಿಯಾದ ಉಮಾಬಾಯಿ ಕುಂದಾಪುರ ಇವರು ಸ್ವಯಂಸೇವಿಕೆಯರನ್ನು ಒಗ್ಗೂಡಿಸಿ ಮಹಿಳೆಯರಲ್ಲಿ ರಾಷ್ಟ್ರೀಯ ಜಾಗೃತಿಯನ್ನು ತರುವ ಸಲುವಾಗಿ ಕರ್ನಾಟಕದಾದ್ಯಂತ ಪ್ರವಾಸ ಕೈಗೊಂಡರು. ಸೇವಾದಳದ ಮಹಿಳಾ ಘಟಕದ ಮುಖ್ಯಸ್ಥೆಯಾಗಿ ಸುಮಾರು ನೂರೈವತ್ತು ಮಂದಿ ಮಹಿಳೆಯರನ್ನು ಸ್ವಯಂಸೇವಿಕೆಯರಾಗಿ ಸೇರಿಸಿದರು. ಮುಂದೆ ಈ ಮಹಿಳೆಯರೇ ಕಾಂಗ್ರೆಸ್ಸಿನ ಎಲ್ಲಾ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಹೀಗೆ ನಾಲ್ಕು ಗೋಡೆಗಳಿಗೆ ಸೀಮಿತವಾಗಿದ್ದ ಮಹಿಳೆಯರನ್ನು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಲು ಪ್ರಚೋದಿಸಿದರು.[೫೪] ಎರಡನೆಯ ಬಾರಿಗೆ ಗಾಂಧೀಜಿಯವರು ದಕ್ಷಿಣ ಕನ್ನಡ ಜಿಲ್ಲೆಗೆ ೧೯೨೭ರ ಅಕ್ಟೋಬರ್ ೨೬ರಲ್ಲಿ ಖಾದಿ ಪ್ರಚಾರದ ಪ್ರವಾಸ ಕೈಗೊಂಡು ಕಲ್ಲಿಕೋಟೆಯಿಂದ ಮಂಗಳೂರಿಗೆ ರೈಲಿನಲ್ಲಿ ಬಂದಿಳಿದರು. ಕೆನರಾ ಶಾಲೆಯಲ್ಲಿ ಲೋಕಮಾನ್ಯ ತಿಲಕರ ಭಾವಚಿತ್ರವನ್ನು

ಅನಾವರಣಗೊಳಿಸಿದರು. ಸಾರ್ವಜನಿಕ ಸಭೆಯಲ್ಲಿ ಅವರು ಖಾದಿಯ ಮಹತ್ವ ತಿಳಿಸಿ ಅದೇ ವೇಳೆಗೆ ಮುನ್ಸಿಪಲ್ ಬೋರ್ಡ್ ಕೆಳಗೆ ಇದ್ದ ಶಾಲೆಗಳಲ್ಲಿ ನೂಲುವುದನ್ನು ಪಾಠಭಾಗವಾಗಿ ತಂದ ವಿಷಯವನ್ನು ಅವರು ಪ್ರಶಂಸಿದರು. ಹಿಂದೂ ಮುಸಲ್ಮಾನರ ನಡುವೆ ಸಾಮರಸ್ಯದ ಮಹತ್ವ, ಅಸ್ಪೃಶ್ಯತೆಯ ನಿವಾರಣೆ, ಮಾತೃಭಾಷಾ ವಿಚಾರ ಮತ್ತು ರಾಷ್ಟ್ರಭಾಷಾ ಮಹತ್ವದ ವಿಚಾರವಾಗಿ ಮಾತನಾಡಿದ್ದರು. ಸಭೆಯ ನಂತರ ರೂ. ೪೩೮೭ ನಗದು ಮತ್ತು ಬೆಲೆಬಾಳುವ ಆಭರಣಗಳು ದೇಣಿಗೆಯಾಗಿ ಸಂಗ್ರಹವಾಗಿತ್ತು.[೫೫]

ಮೂರನೆಯ ಬಾರಿಗೆ ೧೯೩೩-೩೪ ರಲ್ಲಿ ಜಿಲ್ಲೆಯಾದ್ಯಂತ ಅಸ್ಪೃಶ್ಯರ ಏಳಿಗೆಯ ಕಾರಣಕ್ಕಾಗಿ ೯ ತಿಂಗಳ ಧೀರ್ಘಕಾಲದ ಪ್ರವಾಸ ಕೈಗೊಂಡರು. ೧೯೩೪ರ ಫೆಬ್ರವರಿ ೨೪ರಂದು ಬೆಳಿಗ್ಗೆ ೭ ಗಂಟೆಗೆ ಮಡಿಕೇರಿಗೆ ಹೊರಟು ಪುತ್ತೂರನ್ನು ತಲುಪಲು ಸುಳ್ಯ, ಸಂಪಾಜೆಯ ಮೂಲಕ ಪ್ರವೇಶಿಸಿದರು. ನಂತರ ಮಂಗಳೂರಿನ ನ್ಯಾಶನಲ್ ಗರ್ಲ್ಸ್ ಸ್ಕೂಲಿನಲ್ಲಿ ನಡೆದ ಸಭೆಯಲ್ಲಿ ೧೫೦೦ ಮಂದಿ ಮಹಿಳೆಯನ್ನುದ್ದೇಶಿಸಿ ಮಾತನಾಡಿ ರಾಷ್ಟ್ರನಿಧಿಗೆ ಮಂಗಳೂರಿನ ಮಹಿಳೆಯರು ನೀಡಿದ ಕೊಡುಗೆಗಳಿಂದ ಗಾಂಧೀಜಿಯವರು ಸಂತೃಪ್ತವಾದ ಎರಡು ಘಟನೆಗಳನ್ನು ನೆನಪಿಸಿಕೊಂಡರು.

ಮುಂದುವರಿದು ಹರಿಜನರೋದ್ಧಾರದ ಕುರಿತು ಮಾತನಾಡಿ, 'ಹಿಂದೂಗಳ ಮನಸ್ಸು ಅಸ್ಪೃಶ್ಯತೆಯ ಕಳಂಕದಿಂದ ಶುದ್ಧವಾಗಬೇಕಾದರೆ, ಮಹಿಳೆಯರು ಪುರುಷರಿಗಿಂತಲೂ ಹೆಚ್ಚು ಸಮರ್ಥರು. ಏಕೆಂದರೆ ತಮ್ಮ ವೈರಾಗ್ಯ ಮತ್ತು ತಪಸ್ಸುಗಳ ಉನ್ನತ ಶಕ್ತಿಯಿಂದ ಅವರು ವಿಶ್ವದಾದ್ಯಂತ ಧರ್ಮದ ಹರಿಕಾರರಾಗಿದ್ದಾರೆ. ಆದುದರಿಂದ ಮಹಿಳೆಯರು ಹರಿಜನ ಚಳವಳಿಯ ಮುಂಚೂಣಿಯಲ್ಲಿದ್ದು ಅದರ ಅಪೇಕ್ಷೆಗಳನ್ನು ಈಡೇರಿಸಬೇಕು' ಎಂದು ಗಾಂಧೀಜಿಯವರು ಆಶಿಸಿದರು. ಮರುದಿನ, ೧೫ನೇ ಆದಿತ್ಯವಾರ ಅಪರಾಹ್ನ ೩.೩೦ಕ್ಕೆ ಸರಿಯಾಗಿ ಉಡುಪಿ ತಲುಪಿ ನಿಶ್ಚಿತವಾದಂತೆ ಖಾದಿ ಅಂಗಡಿಯನ್ನು ಸಂದರ್ಶಿಸಿ ಸ್ಟೋರಿನ ಡೈರೆಕ್ಟರರಿಂದ ಅರ್ಪಿಸಲಾದ ಹರಿಜನ ನಿಧಿಯನ್ನು ಸ್ವೀಕರಿಸಿಕೊಂಡು ಅಜ್ಜರಕಾಡು ಮೈದಾನಕ್ಕೆ ತಲುಪಿದಾಗ ಅಲ್ಲಿ ಸೇರಿದ್ದ ಆರು ಸಾವಿರ ಸ್ತ್ರೀ ಪುರುಷರು ಜಯಕಾರಗಳೊಂದಿಗೆ ಗಾಂಧೀಜಿಯವರನ್ನು ಸ್ವಾಗತಿಸಿದರು. ಉಡುಪಿ ಮಹಾಜನರ ಮಾನಪತ್ರವು ನಿಧಿ ಸಂಗ್ರಹವು ಅರ್ಪಿಸಲಾದವು. ಅನಂತರ ಹಿಂದೀ ವಿದ್ಯಾರ್ಥಿ ವರ್ಗದ ಪರವಾದ ಮಾನಪತ್ರವು ಒಂಭತ್ತು ವರ್ಷ ಪ್ರಾಯದ ಹಿಂದಿ ವಿದ್ಯಾರ್ಥಿನಿ ಹಾಗೂ ಶ್ರೀ ಪಾಂಗಾಳ ಮಂಜುನಾಥ ನಾಯಕರ ಸುಕುಮಾರಿಯಾದ ನಿರುಪಮಾ ದೇವಿಯಿಂದ ಓದಲಾಗಿ ಅರ್ಪಿಸಲ್ಪಟ್ಟಿತು.

ಪುತ್ತೂರಿಗೆ ಗಾಂಧೀಜಿ ಬಂದಾಗ ಸುಮಾರು ಒಂದು ಸಾವಿರಕ್ಕಿಂತಲೂ ಹೆಚ್ಚು ಜನರು ನೆರೆದು ಭಕ್ತಿಪೂರ್ವಕವಾಗಿ ಸ್ವಾಗತಿಸಿದರು.  ಮುಂದೆ ಬಂಟವಾಳಕ್ಕೆ ಹೋಗಿ ಹರಿಜನ ನಿಧಿಗಾಗಿ ರೂ.೧೭೫, ಬಿಹಾರ ರಿಲೀಫ್ ಫಂಡಿಗಾಗಿ ರೂ.೧೫೮, ಶ್ರೀ ವೆಂಕಟರಮಣ ಸ್ವಾಮಿ ಥಿಯೆಟ್ರಿಕಲ್ ಕಂಪೆನಿಯವರಿಂದ ರೂ.೫೧ ಪಡೆದರು. ಸಭೆಯಲ್ಲಿ ಭಾಗವಹಿಸಿದ್ದ ಮಹಿಳೆಯರು ರೂ. ೧೨೫ ಬೆಲೆಬಾಳುವ ಆಭರಣಗಳನ್ನು ಕೊಟ್ಟರು. ಅನಂತರ ಗಾಂಧೀಜಿಯವರು ಅಸ್ಪೃಶ್ಯರನ್ನು ಕೀಳೆಂದು ಕಾಣದೆ ಕರುಣೆ, ಭಾತೃತ್ವದಿಂದ ಅವರನ್ನು ನಮ್ಮವರಂತೆ

ಕಾಣಬೇಕೆಂದರು. ಗೃಹ ಇಲಾಖೆಯ ಗೌಪ್ಯ ವರದಿಯಲ್ಲಿ ೧೯೩೪ರ ಫೆಬ್ರವರಿ ೨೪ ರಿಂದ ೨೭ರವರೆಗೆ ಮದ್ರಾಸ್ ಪ್ರೆಸಿಡೆನ್ಸಿಯ ದಕ್ಷಿಣ ಕನ್ನಡ ಜಿಲ್ಲೆಗೆ ಭೇಟಿ ನೀಡಿದ ಗಾಂಧೀಜಿಯವರ ಕಾರ್ಯಕ್ರಮಕ್ಕೆ ಮಾಡಲಾದ ವ್ಯವಸ್ಥೆಗಳು, ನೆರೆದ ಜನಸಮೂಹದ ಕುರಿತು ಚರ್ಚಿಸಲಾಗಿದೆ. ಅಂತೆಯೇ ಜಿಲ್ಲೆಯಲ್ಲಿ ರಾಷ್ಟ್ರನಿಧಿಗೆ ಸಂಗ್ರಹವಾಗಿರುವ ಮೊತ್ತದಲ್ಲಿ ಹೆಚ್ಚಿನ ದೇಣಿಗೆ ರೂ. ೧೦೦೧, ಮಂಗಳೂರಿನಿಂದಲೇ ಸಂಗ್ರಹಿಸಲಾಗಿದೆ ಎಂಬುವುದನ್ನು ದಾಖಲಿಸಲಾಗಿದೆ. ಜಿಲ್ಲೆಯಲ್ಲಿ ಗಾಂಧೀಜಿಯವರ ಪ್ರಭಾವ ಬ್ರಿಟಿಷರನ್ನು ಬೆರಗುಗೊಳಿಸಿರುವುದು ಆಶ್ಚರ್ಯಕರವಾದ ಸಂಗತಿಯಾಗಿದೆ.

ಜಿಲ್ಲೆಯಲ್ಲಿ ದೇವಾಲಯದ ಪ್ರವೇಶ ಕುರಿತಂತೆ ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸಬೇಕೇ ವಿನಹ, ಯಾವುದೇ ಜಾತಿಯ ಹಿಂದೂಗಳ ಮೇಲೆ ಒತ್ತಾಯ ಹೇರಬಾರದು ಎಂದರು. ಡಿಪ್ರೆಸ್ಡ್ ಕ್ಲಾಸ್ ಮಿಷನ್ ಶಾಲೆಗೆ ಸ್ವಲ್ಪ ಅನುದಾನ ನೀಡುವ ಭರವಸೆ ಹಾಗೂ ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿಯ ಕಾರ್ಯವನ್ನು ಶ್ಲಾಘಿಸಿದರು. ಬಿಹಾರದ ಭೂಕಂಪ ನಿಧಿಗೆ ದೇಣಿಗೆ ಕೊಡುವಂತೆ ಜನರೊಡನೆ ವಿನಂತಿಸಿದರು.[೫೬] ಆದರೆ ತಾವೇ ಸಣ್ಣ ಮೊತ್ತವನ್ನು ನೀಡಿದಾಗ ಶಿಕ್ಷಿತವರ್ಗ ಗಾಂಧೀಜಿಯವರನ್ನು ಟೀಕಿಸಿತು.[೫೭] ಗಾಂಧೀಜಿಯವರ ನಾಯಕತ್ವದಲ್ಲಿ ೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹ ಪ್ರಾರಂಭವಾದಾಗ ರಾಷ್ಟ್ರದ ಉದ್ದಗಲಕ್ಕೂ ಜನರು ಭಾಗವಹಿಸಿದರು. ಗ್ರಾಮ ಪ್ರದೇಶಗಳಿಂದ ಜನರು ಬಂದು ಉಪ್ಪು ತಯಾರಿಸಿ ಬಂಧನಕ್ಕೆ ಒಳಗಾದರು. ಉಪ್ಪಿನ ಸತ್ಯಾಗ್ರಹಕ್ಕೆ ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ಸಕಾರಾತ್ಮಕ ಪ್ರತಿಕ್ರಿಯೆ ವ್ಯಕ್ತವಾಯಿತು. ಮಂಗಳೂರು, ಉಡುಪಿ, ಕುಂದಾಪುರ ಮತ್ತು ಹೊಸದುರ್ಗಗಳಲ್ಲಿ ಸಭೆಗಳನ್ನು ನಡೆಸಿ ಉಪ್ಪಿನ ಸತ್ಯಾಗ್ರಹದಲ್ಲಿ ಜನತೆ ಭಾಗವಹಿಸಲು ಪ್ರೋತ್ಸಾಹಿಸಲಾಯಿತು ಹಾಗೂ ಪಾಲ್ಗೊಳ್ಳುವಂತೆ ಕರೆ ನೀಡಲಾಯಿತು.[೫೮]

ಕಾನೂನುಭಂಗ ಚಳವಳಿಯು ನೈತಿಕವಾಗಿ ಅಸಮರ್ಥನೀಯ ಕಾನೂನುಗಳನ್ನು ಜಾರಿಗೊಳಿಸುವ ಮುಖಾಂತರ ಆಳುವ ನೈತಿಕ ಹಕ್ಕು ಕಳೆದುಕೊಂಡ ಆಡಳಿತದ ವಿರುದ್ಧ ನೈತಿಕ ಪ್ರತಿಭಟನೆ ಹಾಗೂ ಅದರ ಅನುಕರಣೆಯಾಗಿತ್ತು. ಉಪ್ಪಿನ ಸತ್ಯಾಗ್ರಹವು ಅಂತಹ ರಾಷ್ಟ್ರೀಯ ನಿರ್ಣಯದ ಪ್ರತೀಕವಾಗಿತ್ತು. ತಮ್ಮ ಪ್ರಸಿದ್ಧ ದಂಡಿಯಾತ್ರೆಯ ಮೂಲಕ ಗಾಂಧೀಜಿ ಇದಕ್ಕೆ ಚಾಲನೆ ನೀಡಿದರು.[೫೯] ಮಂಗಳೂರಿನ ಕೇಂದ್ರ ಮೈದಾನದಲ್ಲಿ ೧೯೩೦ರ ಎಪ್ರಿಲ್ ೧೨ರಂದು ನಡೆದ ಸಭೆಯಲ್ಲಿ ಪುತ್ತೂರು, ಉಡುಪಿ ಮತ್ತು ಕಾಸರಗೋಡಿನಿಂದ ಅನೇಕರು ಪಾಲ್ಗೊಂಡಿದ್ದರು. ಕಾಸರಗೋಡಿನ ವಕೀಲರಾದ ಶ್ರೀ. ಎಂ. ಉಮೇಶರವರು ಮರುದಿನ ನಡೆಯಲಿರುವ ಉಪ್ಪಿನ ಸತ್ಯಾಗ್ರಹದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಜನರು ಭಾಗವಹಿಸುವಂತೆ ಕರೆ ನೀಡಿದರು. ೧೩ನೇ ಎಪ್ರಿಲ್ ೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹ ನಡೆದಾಗ ಉಡುಪಿ, ಕುಂದಾಪುರ ಮತ್ತು ಹೊಸದುರ್ಗದ ನಾಯಕರ ವಿರುದ್ಧ ವ್ಯಾಜ್ಯ ಹೂಡಲಾಯಿತು ಹಾಗೂ ೨೨ ಮಂದಿಯನ್ನು ಬಂಧಿಸಿ ಕಾನೂನು ಕ್ರಮ ಜರಗಿಸಲಾಯಿತು. ಉಳಿದಂತೆ ಹಲವರಿಗೆ ಎಚ್ಚರಿಕೆ ನೀಡಿ ಬಿಡುಗಡೆಗೊಳಿಸಲಾಯಿತು.[೬೦]

ಗಾಂಧೀಜಿಯವರಿಂದ ಪ್ರಭಾವಿತರಾಗಿ ಡಾ. ಎನ್. ಎಸ್. ಹರ್ಡೀಕರ್, ವಿ. ಬಿ. ಪುರೋಹಿತ್ ಮತ್ತು ಉಮಾಬಾಯಿ ಕುಂದಾಪುರ, ಜೊತೆ ಸೇರಿ ಅಂಕೋಲದಲ್ಲಿ ಎಪ್ರಿಲ್ ೧೩, ೧೯೩೦ರಂದು ಉಪ್ಪಿನ ಸತ್ಯಾಗ್ರಹ ನಡೆಸಿದರು. ಜಿಲ್ಲೆಯ ಹಲವಾರು ಕಡೆ ಸಭೆ ನಡೆಸಿ ಕಾಂಗ್ರೆಸ್ ಪಕ್ಷದ ಉದ್ದೇಶ ಮತ್ತು ವಿಧಾನ ಕ್ರಮಗಳನ್ನು ಜನರಿಗೆ ವಿವರಿಸಿದರು. ಅಂಕೋಲದ ಉಪ್ಪಿನ ಸತ್ಯಾಗ್ರಹ ಉದ್ಘಾಟಿಸಿ ಮಂಗಳೂರಿಗೆ ಆಗಮಿಸಿದ ಕಾರ್ನಾಡರು ಮಂಗಳೂರು ಬಂದರಿನಲ್ಲಿ ಮೈಲು ಉದ್ದದ ಮೆರವಣಿಗೆಯ ನಂತರ ಸ್ವತ: ಉಪ್ಪು ತಯಾರಿಸಿದ ಸಂದರ್ಭ ಅವರ ಮಕ್ಕಳಾದ ರಾಧಾ ಮತ್ತು ಸುಗುಣ ಅವರ ಜೊತೆ ಧ್ವಜ ಹಿಡಿದು ಮುನ್ನಡೆದಿರುವರು. ಅದಕ್ಕಾಗಿ ಅವರಿಗೆ ಬ್ರಿಟಿಷ್ ಸರಕಾರ ೧೫ ತಿಂಗಳ ಬಂಧನದ ಶಿಕ್ಷೆ ನೀಡಿತು. ತಂದೆಯವರ ಬಂಧನದ ನಂತರವೂ ಕಾರ್ನಾಡರ ಹೆಣ್ಮಕ್ಕಳು ನಿತ್ಯ ಕಡಲ ತೀರಕ್ಕೆ 'ಹೋಗಿ ಉಪ್ಪು ತಯಾರಿಸಿ, ಘೋಷಣೆ ಕೂಗಿ ಉಪ್ಪಿನ ಚೀಟಿ ಏಲಂ ಮಾಡಿ ಕಾಂಗ್ರೆಸ್ ಫಂಡಿಗೆ ಹಣ ನೀಡಿರುವರು.[೬೧]

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಖ್ಯಾತ ಸಾಹಿತಿಯಾದ ಕಯ್ಯಾರ ಕಿಂಞ್ಞಣ್ಣ ರೈಯವರು ತಿಳಿಸುವಂತೆ ಉಪ್ಪಿನ ಸತ್ಯಾಗ್ರಹ ಮಂಗಳೂರಿನಲ್ಲಿ ಭರದಿಂದ ನಡೆದಿದೆ. ಉಪ್ಪನ್ನು ತಯಾರು ಮಾಡಿ, ಸಾರ್ವಜನಿಕವಾಗಿ ಮಾರಾಟ ಮಾಡುವವರ ಮುಷ್ಠಿಯಿಂದ ಪೊಲೀಸರು ಬಲತ್ಕಾರದಿಂದ ಉಪ್ಪನ್ನು ತೆಗೆಯುವಾಗ ಸತ್ಯಾಗ್ರಹಿಗಳ ಬೆರಳು ತುಂಡಾಗುತ್ತಿತ್ತು. ಸತ್ಯಾಗ್ರಹಿಗಳನ್ನು ಹೊಡೆದು ಮೂರ್ಛೆ ಬಂದ ಮೇಲೆ ಚರಂಡಿಗೆ ಎಳೆದು ಹಾಕುತ್ತಿದ್ದರು. ಮಂಗಳೂರಿನಲ್ಲಿ ಸುವರ್ಣ ಎಂಬುವವರನ್ನೂ, ಕಾಸರಗೋಡಿನಲ್ಲಿ ಭೀರುಶೆಟ್ಟಿ ಎಂಬುವವರನ್ನೂ ಹೊಡೆದು ಚರಂಡಿಗೆ ಹಾಕಿದರು. ಪೊಲೀಸರು ಎಳೆಯುವಾಗ, ಮುಷ್ಠಿ ಸಡಿಲಿಸಿದ ಎನ್ನುವುದಕ್ಕೆ, ತನ್ನ ಮಗನಿಗೆ ಮನೆಗೆ ಪ್ರವೇಶ ನೀಡದೆ ಒಬ್ಬ ಮಹಿಳೆ ಸ್ವತಃ ಸತ್ಯಾಗ್ರಹ ಮಾಡಿ ಸೆರೆಮನೆಗೆ ಸೇರಿದ್ದರು. ಬೆಳ್ಳಿ ಪಾಡಿ ಲಕ್ಷ್ಮಿ ರೈ ಎನ್ನುವವರೂ ಈ ಸತ್ಯಾಗ್ರಹದಲ್ಲಿ ಭಾಗವಹಿಸಿ ಸೆರೆಮನೆ ಸೇರಿದ್ದರು. ಖಂಡಿಗೆ ಕೃಷ್ಣಭಟ್ಟರೂ ಸೆರೆಮನೆ ಸೇರಿದರು; ಬಿಡುಗಡೆಯಾಗಿ ಬಂದ ನಂತರ, ಅವರಿಗೆ ನೇಯ್ದ ಖಾದಿಬಟ್ಟೆಯನ್ನು ಸಮರ್ಪಿಸಿದೆವು" ಎಂದೆನ್ನುತ ಸ್ವಾತಂತ್ರ್ಯ ಚಳವಳಿಯಲ್ಲಿ ತಮ್ಮ ಭಾಗವಹಿಸುವಿಕೆಯನ್ನು ಸ್ಮರಿಸುತ್ತಾರೆ.[೬೨]

ದಕ್ಷಿಣ ಕನ್ನಡದಲ್ಲಿ ಲಕ್ಷ್ಮೀ ಅಕ್ಕ ಎಂದೇ ಪ್ರಸಿದ್ಧರಾಗಿರುವ ಲಕ್ಷ್ಮಿ ಬಿ.ವಿ. ರೈಯವರು ೧೯೩೨ರಲ್ಲಿ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ ಬಂಧಿಸಲ್ಪಟ್ಟು ಜೈಲು ಸೇರಿದಾಗ ಗರ್ಭಿಣಿಯಾಗಿದ್ದು ಬಂಧಿಖಾನೆಯಲ್ಲಿಯೇ ಇವರು ಮಗುವಿಗೆ ಜನ್ಮ ನೀಡಿ ನಂತರ ಬಿಡುಗಡೆ ಹೊಂದಿದ್ದರು. ಗಾಂಧೀಜಿಯವರು ಪುತ್ತೂರಿಗೆ ಬಂದಿದ್ದಾಗ ತನ್ನ ಆಭರಣಗಳನ್ನು ರಾಷ್ಟ್ರ ನಿಧಿಗೆ ಅರ್ಪಿಸಿದ್ದರು.[೬೩] ಸ್ವದೇಶಿ ಸಂದೇಶವನ್ನು ಒಯ್ಯುವಲ್ಲಿ ಸ್ತ್ರೀಯರೂ ಒಳಗೊಂಡಿದ್ದು ಯಾವುದೇ ಭಯವಿಲ್ಲದೆ ತಮ್ಮನ್ನು ತೊಡಗಿಸಿಕೊಂಡಿದ್ದರು, ಲಕ್ಷ್ಮೀಬಾಯಿ ವೆಂಕಪ್ಪ ರೈಯವರು ಈ ಪ್ರಚಾರದ ಮುಂಚೂಣಿಯಲ್ಲಿದ್ದು ಮಂಗಳೂರಿನಲ್ಲಿ ಇಬ್ಬರು ಹೆಂಗಸರ ಜೊತೆಗೆ ಸ್ವದೇಶಿ ವಸ್ತುಗಳನ್ನು ಮಾರಿದ್ದಕ್ಕೆ ಮೂಲ್ಕಿಯಲ್ಲಿ ಬಂಧಿತರಾದರು.[೬೪]

೧೯೩೦ರ ಕಾನೂನುಭಂಗ ಚಳವಳಿಯ ಸಂದರ್ಭ ಮಂಗಳೂರು ಅಬ್ದುಲ್ ಖಾದರ್ ಅಸ್ಸಾದಿ ಸಾಹೇಬರ ಮನೆ ರಹಮಾನ್ ಮಂಜಿಲ್‌ನಲ್ಲಿ ಸೇವಾದಳದ ಮಹಾಶಬ್ದೆಯವರ ಸತ್ಯಾಗ್ರಹ ಶಿಬಿರ ನಡೆದು ನಂತರದಲ್ಲಿ ಏಪ್ರಿಲ್ ೧೩ರಂದು ಮಂಗಳೂರಿನಲ್ಲಿ ಉಪ್ಪಿನ ಸತ್ಯಾಗ್ರಹ ನಡೆಯಿತು. ಇದೇ ಸಮಯದಲ್ಲಿ ಮಲ್ಪೆ, ಪಡುಬಿದ್ರೆ, ಕುಂದಾಪುರ, ಕಾಪು, ಕುಂಬಳೆ, ಕಾಸರಗೋಡು, ಮಂಜೇಶ್ವರ, ಸುರತ್ಕಲ್, ಕಟಪಾಡಿ ಮುಂತಾದ ಜಿಲ್ಲೆಯ ಅನೇಕ ಕಡೆ ಉಪ್ಪಿನ ಸತ್ಯಾಗ್ರಹ ಅನೇಕ ದಿನ ನಡೆಯಿತು. ೧೯೩೦ರ ಮೇ ೧೬ರಂದು ಮದ್ಯಪಾನ ನಿಷೇಧ ಚಳವಳಿ ದೊಡ್ಡ ಮಟ್ಟದಲ್ಲಿ ಆರಂಭವಾಯಿತು. ಊರೂರುಗಳಲ್ಲಿ ಮದ್ಯದಂಗಡಿಗಳ ಪಿಕೆಟಿಂಗ್ ನೇತೃತ್ವವನ್ನು ಮಹಿಳೆಯರೇ ವಹಿಸಿದ್ದರು. ನರ್ಕಳ ಮಾರಪ್ಪ ಶೆಟ್ಟರು ರಚಿಸಿದ 'ಪರಡೆ ಕಳಿ ಗಂಗಸರೊ' ಎಂಬ ತುಳು ಹಾಡು ಎಲ್ಲೆಡೆ ಪ್ರತಿಧ್ವನಿಸಿತು. ಈ ಹಾಡನ್ನು ಹಾಡುತ್ತಾ ಜನರಲ್ಲಿ ಮದ್ಯಪಾನದ ವಿರುದ್ಧ ಅರಿವು ಮೂಡಿಸಲು ಪ್ರಯತ್ನಿಸುತ್ತಿದ್ದರು. ಜನರು ಮದ್ಯದಂಗಡಿ ಎದುರು ನಿಂತು ಪ್ರತಿಭಟನೆ ಮಾಡತೊಡಗಿದರು. ಮದ್ಯದಂಗಡಿ ಮಾಲೀಕರ, ಕುಡುಕರ ಮತ್ತು ಪೊಲೀಸರ ಅವಾಚ್ಯ ಬೈಗುಳ ಮತ್ತು ಹೊಡೆತ ಸಹಿಸಿಕೊಂಡು ಚಳವಳಿ ಮಾಡತೊಡಗಿದರು.[೬೫]

೧೯೩೧ರ ಏಪ್ರಿಲ್ ೬ ರಿಂದ ೧೩ರ ವರೆಗೆ ರಾಷ್ಟ್ರವಾರವು ಆಚರಿಸಲ್ಪಟ್ಟ ಸಂದರ್ಭ ನಡೆದ ಮೆರವಣಿಗೆ ಮತ್ತು ಸಭೆಗಳಿಗೆ ಸ್ತ್ರೀಯರೂ ದೇಶಸೇವಿಕೆಯರಾಗಿ ಪಾಲ್ಗೊಂಡು ಮನೆಮನೆಗೆ ಖಾದಿ ತೆಗೆದುಕೊಂಡು ಹೋಗಿ ವಿಕ್ರಯಿಸಿದರು. ಚರಕದಿಂದ ಮತ್ತು ತಕ್ಲಿಯಿಂದ ನೂಲು ತೆಗೆಯುವ ಸ್ಪರ್ಧೆಗಳಲ್ಲಿ ಭಾಗವಹಿಸಿ ಶ್ರೀಮತಿ ಮುಕ್ತಾ ಬಾಯಿ ಮತ್ತು ಶ್ರೀಮತಿ ವೆಂಕಮ್ಮ ಬಹುಮಾನಕ್ಕೆ ಅರ್ಹರಾದರು.[೬೬] ಗಾಂಧೀಜಿಯವರು ಪ್ರಾರಂಭಿಸಿದ ಕಾನೂನುಭಂಗ ಚಳವಳಿ ಬೃಹತ್ ಸಂಖ್ಯೆಯಲ್ಲಿ ಮಹಿಳೆಯರ ಗಮನ ಸೆಳೆಯಿತು. ಇದು ೧೯೨೦ರ ಚಳವಳಿಗಿಂತ ಗುಣಾತ್ಮಕವಾಗಿ ಮತ್ತು ಪ್ರಮಾಣಾತ್ಮಕವಾಗಿ ವಿಭಿನ್ನವಾಗಿತ್ತು. ಮಹಿಳಾ ಸಂಘಟನೆಗಾಗಿ ಗಾಂಧೀಜಿಯವರ ಕರೆಗೆ ಓಗೊಟ್ಟು ಸ್ಥಾಪಿತವಾದ ರಾಷ್ಟ್ರೀಯ ಸ್ತ್ರೀ ಸಂಘ ಸ್ವರಾಜ್ಯಕ್ಕೆ ಬದ್ಧವಾಗಿದ್ದು ಸರೋಜಿನಿ ನಾಯ್ಡುರವರನ್ನು ಅದರ ಅಧ್ಯಕ್ಷರನ್ನಾಗಿ, ಗೋಶಿಬೆನ್ ನವರೋಜಿ ಮತ್ತು ಅವಂತಿಕಾಬಾಯಿ ಗೋಖಲೆಯವರನ್ನು ಉಪಾಧ್ಯಕ್ಷರನ್ನಾಗಿ, ಪೆರಿನ್ ನವರೋಜಿ ಮತ್ತು ಶ್ರೀಮತಿ ರಾಟೆನ್ ಬೆಹನ್ ಮೆಹ್ತಾ ಇವರನ್ನು ಕಾರ್ಯದರ್ಶಿಗಳಾಗಿ ನೇಮಿಸಿತು.

ಇದಕ್ಕೆ ಪೂರಕವಾಗಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರ್ತಿಯಾದ ಕಮಲಾದೇವಿ ಚಟ್ಟೋಪಾಧ್ಯಾಯರು ಜಿಲ್ಲೆಯ ವಿವಿಧ ಭಾಗಗಳಲ್ಲಿ ಸಂಚರಿಸಿ ಮಹಿಳೆಯರನ್ನು ಪ್ರೋತ್ಸಾಹಿಸಿದರು. ಅದರಂತೆ ೧೯೩೧ರಲ್ಲಿ ಉಡುಪಿಯ ಯೂನಿಯನ್ ಕ್ಲಬ್ಬಿನಲ್ಲಿ ಕಮಲಾದೇವಿ ಅಧ್ಯಕ್ಷತೆಯಲ್ಲಿ ನಡೆದ ಮಹಿಳಾ ಸಭೆಯಲ್ಲಿ ಸಭೆಯನ್ನುದ್ದೇಶಿಸಿ ಮಾತನಾಡಿದ ಸಂದರ್ಭ ಉತ್ತರ ದೇಶೀಯ ಹೆಂಗಸರ ನಿಸ್ಸೀಮ ಸ್ವಾರ್ಥ ತ್ಯಾಗವನ್ನು ಕೊಂಡಾಡಿ, ನಮ್ಮೂರಿನವರು ಅವರನ್ನು ಅನುಸರಿಸಲು ಪ್ರಯತ್ನಿಸತಕ್ಕದ್ದು ಎನ್ನುವ ಮೂಲಕ ಸ್ತ್ರೀಯರು ರಾಷ್ಟ್ರೀಯ ಹೋರಾಟದಲ್ಲಿ ತಮ್ಮನ್ನು ತೊಡಗಿಸಬೇಕು

ಎಂದರು.[೬೭] ಅವರ ಇಂಗ್ಲಿಷ್ ಭಾಷಣವನ್ನು ರಾಮರಾಯ ಮಲ್ಯರು ಕನ್ನಡಕ್ಕೆ ಅನುವಾದಿಸಿದರು. ನಂತರ ಕಾರ್ಕಳಕ್ಕೆ ತೆರಳಿ ಸಂಜೆ ೪ ಗಂಟೆಗೆ ವಿಕ್ಟೋರಿಯಾ ಜುಬಿಲಿ ಯೂನಿಯನ್ ಕ್ಲಬ್‌ನಲ್ಲಿ ನಡೆದ ಮಹಿಳಾ ಸಭೆಯಲ್ಲಿ ೧೫೦ಕ್ಕಿಂತಲೂ ಹೆಚ್ಚು ಮಂದಿ ಸ್ತ್ರೀಯರ ಸಭೆಯನ್ನುದ್ದೇಶಿಸಿ 'ಮಹಿಳೆಯರ ಕರ್ತವ್ಯ' ಎಂಬ ವಿಷಯದ ಕುರಿತು ಮಾತನಾಡಿದರು. ಸುಮಾರು ಒಂದು ತಾಸಿನವರೆಗೆ ಕೊಂಕಣಿ ಭಾಷೆಯಲ್ಲಿಯೂ ಮಾತನಾಡಿದರು. ಸಭೆಯಲ್ಲಿ ನೆರೆದಿದ್ದ ಸಮೂಹದಲ್ಲಿ ೧೯ ಮಂದಿ ದೇಶ ಸೇವಿಕೆಯರಾಗಲು ಒಪ್ಪಿಗೆ ನೀಡಿ ಸಹಿಕೊಟ್ಟರು. ಅವರಲ್ಲಿ ವಕೀಲ ಎಂ.ಎಸ್ ಅಧಿಕಾರಿಯವರ ಧರ್ಮಪತ್ನಿಯವರಾದ ಶ್ರೀಮತಿ ಇಂದಿರಾಬಾಯಿಯವರು ಮತ್ತು ಶ್ರೀಮತಿ ಗಿರಿಜಾ ಬಾಯಿಯವರು ಈ ಮೊದಲೇ ದೇಶ ಸೇವಿಕೆಯರಾಗಿ ಸೇರ್ಪಡೆಗೊಂಡಿದ್ದು ಮನೆಮನೆಗೆ ಹೋಗಿ ಖಾದಿಯನ್ನು ತೆಗೆದುಕೊಂಡು ಹೋಗಿ ವಿಕ್ರಯಿಸುತ್ತಿದ್ದರು.[೬೮]

೧೯೩೨ರಲ್ಲಿ ಮತ್ತೆ ಚಳವಳಿ ಆರಂಭವಾದಾಗ ಪ್ರತಿಬಂಧಕಾಜ್ಞೆಗಳ ಭಂಗ,ಕೋರ್ಟು, ಮದ್ಯದಂಗಡಿ, ವಿದೇಶಿ ವಸ್ತ್ರದಂಗಡಿಗಳ ಪಿಕೆಟಿಂಗ್, ಅರಣ್ಯ ಸತ್ಯಾಗ್ರಹ ಮುಖ್ಯವಾದ ಕಾರ್ಯಕ್ರಮಗಳಾದವು. ನಿತ್ಯವೂ ಬೆಳಗ್ಗೆ ೬ ಗಂಟೆಗೆ ಪ್ರಭಾತಫೇರಿ ಹಾಗೂ ಸಂಜೆ ಸಭೆ ಮೆರವಣಿಗೆಗಳು ನಡೆಯುತ್ತಿದ್ದವು. ಸತ್ಯಾಗ್ರಹಿಗಳನ್ನು, ಸ್ವಯಂಸೇವಕರನ್ನು ಪೊಲೀಸರು ಅಮಾನುಷವಾಗಿ ಬಡಿಯುತ್ತಿದ್ದರು. ಕಾಸರಗೋಡಿನಲ್ಲಿ ಚೆರ್ಡಪ್ಪ ಕಾಮತ್ ಎಂಬುವವರಿಗೆ ಲಾಠಿಯೇಟಿನಿಂದಾಗಿ ಆದ ಆಘಾತದಿಂದ ಕಾಲುಗಳನ್ನು ಕಳೆದುಕೊಂಡರು.[೬೯] ೧೯೩೪ರಲ್ಲಿ ಕಮಲಾದೇವಿಯವರು ಧಾರವಾಡ, ಹುಬ್ಬಳ್ಳಿಗಳನ್ನು ಸಂದರ್ಶಿಸಿ ಪೂರ್ಣ ಸ್ವರಾಜ್ಯವೆಂದರೆ ಬಡಬಲ್ಲಿದರ ಹಿತರಕ್ಷಣೆಯೆಂಬ ಬಗೆಗೆ ಸ್ಫೂರ್ತಿದಾಯಕವಾದ ಭಾಷಣ ಮಾಡಿ ಸೇವಾದಳದ ಚಟುವಟಿಕೆಗಳಲ್ಲಿ ಮಹಿಳೆಯರು ಭಾಗವಹಿಸಲು ಕರೆ ನೀಡಿದರು.[೭೦]

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಗೆ ಆಗಮಿಸಿದ ಶ್ರೀಮತಿ ಕಸ್ತೂರಿಬಾಯಿ ಗಾಂಧಿಯವರು ಮತ್ತು ಉರ್ಮಿಳಾ ದೇವಿ (ಸಿ.ಆರ್ ದಾಸರ ತಂಗಿ) ಯವರು ಜಿಲ್ಲೆಯ ಮಹಿಳೆಯರಲ್ಲಿ ಉತ್ಸಾಹ ತುಂಬಿದರು. ೧೯೩೨ ರ ಡಿಸೆಂಬರ್ ೧೨ರಂದು ರೈಲಿನಲ್ಲಿ ಮಂಗಳೂರಿಗೆ ಆಗಮಿಸಿ, ಥಿಯೋಸಾಫಿಕಲ್ ಸೊಸೈಟಿ, ಕಮಲಾದೇವಿ ಚಟ್ಟೋಪಾಧ್ಯಾಯರ ಮನೆ, ಮುನಿಸಿಪಲ್ ಆಫೀಸುಗಳಲ್ಲಿ ಸಭೆ ನಡೆಸಿದರು.[೭೧] ಮಂಗಳೂರಿನಲ್ಲಿ ಕಸ್ತೂರಿ ಬಾಯಿಯವರು ೧೨ನೇ ಡಿಸೆಂಬರ್ ೧೯೩೨ರಂದು ಮಾತನಾಡಿ 'ನಮ್ಮ ಹೃದಯ ಮಂದಿರ ಹರಿಜನರಿಗಾಗಿ ತೆರೆಯಲ್ಪಡಬೇಕು' ಎಂದರು. ಉರ್ಮಿಲಾದೇವಿಯವರು ತಮ್ಮ ಭಾಷಣದಲ್ಲಿ 'ಅಸ್ಪೃಶ್ಯತೆ ರಾಷ್ಟ್ರ ಸಂಘಟನೆಗೆ ಮಹಾ ವಿಘ್ನವಾದುದು. ಉಡುಪಿಯ ಶ್ರೀ ಕೃಷ್ಣ ದೇವಾಲಯ ಹರಿಜನ ಪ್ರವೇಶಕ್ಕಾಗಿ ತೆರೆಯಬೇಕು' ಎಂದು ಅಭಿಪ್ರಾಯ ಪಟ್ಟರು. ಕಸ್ತೂರಿಬಾಯಿಯವರ ಭಾಷಣವನ್ನು[೭೨]ಲಕ್ಷ್ಮಣದೇವ ಹಾಗೂ ಉರ್ಮಿಳಾದೇವಿಯವರ ಭಾಷಣವನ್ನು ಶ್ರೀ ರಂಗರಾವ್ ತಲ್ಚೇರಿಕರರು ಕನ್ನಡಕ್ಕೆ ತರ್ಜುಮೆ ಮಾಡಿದರು. ಮದ್ರಾಸ್ ಪ್ರೆಸಿಡೆನ್ಸಿಯ ಹಲವೆಡೆ ಮಹಿಳೆಯರು ಪಿಕೆಟಿಂಗ್ ನಡೆಸಿದಾಗ, ಪ್ರಾರಂಭದಲ್ಲಿ ವ್ಯಾಪಾರಿಗಳು ಮತ್ತು ಗ್ರಾಹಕರು ಸ್ವಯಂಸೇವಿಕೆಯರನ್ನು ತರಾಟೆಗೆ ತೆಗೆದುಕೊಂಡರು. ವಸ್ತ್ರದಂಗಡಿಗಳ ಪಿಕೆಟಿಂಗ್ ಕರಾವಳಿಯಲ್ಲಿ ಬಹಳ

ಪ್ರಾಮುಖ್ಯತೆ ಪಡೆದುಕೊಂಡಿತು. ಇದಕ್ಕೆ ಪೂರಕವಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬ್ರಿಟಿಷ್ ವಿರೋಧಿ ಚಟುವಟಿಕೆಗಳು ಸ್ಫೂರ್ತಿವತ್ತಾಗಿ ನಡೆದು ಎನ್.ಎಸ್ ಹರ್ಡೀಕರ್ ಇವರ ಆಪ್ತರಾಗಿರುವ ಮಹಾಶಾಬ್ದೆಯವರ ಪ್ರಚೋದನಾಕಾರಿ ಭಾಷಣ ಮಾಡಿದರು.[೨೩]

೧೯೩೧ರಲ್ಲಿ ಸ್ವಯಂಸೇವಕ-ಸ್ವಯಂಸೇವಿಕೆಯರೊಡಗೂಡಿ ಮಂಗಳೂರಿನ ಬಿಜೈಯವರಾದ ಪಂಡಿತ ಬಿ. ಲಕ್ಷ್ಮಣದೇವ ವಿದ್ಯಾರ್ಥಿಯವರು ಬೆಳ್ತಂಗಡಿ ಭಾಗದಲ್ಲಿ ಖಾದಿ ಪ್ರಚಾರ ಮತ್ತು ಮಾರಾಟ ಕಾರ್ಯ ಕೈಗೊಂಡರು. ಸಮಾಜಸೇವಾ ರಂಗದಲ್ಲೂ ಅನೇಕ ವಿಧವಾ ಹಾಗೂ ಅಂತರ್ಜಾತೀಯ ವಿವಾಹಗಳನ್ನು ನಡೆಸಿದ ಸಂದರ್ಭ ಅವರ ಪತ್ನಿ ವಸಂತಿದೇವಿ ಸಹಕರಿಸಿದ್ದರು. ಕಮಲಾದೇವಿ ಚಟ್ಟೋಪಾಧ್ಯಾಯರ ನೇತೃತ್ವದಲ್ಲಿ ೧೯೩೪ರಲ್ಲಿ ಸ್ಥಾಪಿತವಾದ ಹಿಂದೀ ನಾಟಕ ಸಂಘದ ವತಿಯಿಂದ 'ಮೇವಾಡ ಪತನ', 'ದುರ್ಗಾದಾಸ', 'ಭರತ ಮಣಿ' ಮುಂತಾದ ನಾಟಕಗಳಲ್ಲಿ ಮುಖ್ಯ ಪಾತ್ರ ವಹಿಸಿದರು. ಇಂಥಹ ನಾಟಕಗಳು ರಾಷ್ಟ್ರೀಯ ಜಾಗೃತಿಗೂ ಕಾರಣವಾಯಿತು. ೧೯೪೧ರಲ್ಲಿ ಕೊಡಗಿನಲ್ಲಿ ಹರಿಕಥೆಗಳ ಮೂಲಕ ಹಳ್ಳಿಹಳ್ಳಿಗಳಲ್ಲಿ ಕಾಂಗ್ರೆಸ್ಸಿನ ಪ್ರಚಾರ ಮಾಡಿದರು.[೨೪]

ಮಂಗಳೂರಿನಲ್ಲಿ ೧೯೩೧ರ ಮೇ ತಿಂಗಳ ೧೯, ೨೫ ಮತ್ತು ೩೧ ರಂದು ನಡೆದ ವಿದೇಶಿವಸ್ತ್ರ ಬಹಿಷ್ಕಾರದಲ್ಲಿ ದೇಶಸೇವಿಕೆಯರು ಸ್ವಯಂಸೇವಕರೊಡನೆ ಸೇರಿ ಪರದೇಶಿ ವಸ್ತ್ರದಂಗಡಿಗಳನ್ನು ಪಹರೆ ಮಾಡಿದರು. ನಂತರ ಮೈದಾನಿನಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಕಾರ್ನಾಡ್ ಸದಾಶಿವ ರಾಯರು ಮತ್ತು ಶ್ರೀ ರಾಮರಾಯ ಮಲ್ಯರು ಸ್ವಯಂಸೇವಿಕೆಯರಿಗೆ ಪಿಕೆಟಿಂಗ್ ನಲ್ಲಿ ಭಾಗವಹಿಸಲು ಪ್ರೋತ್ಸಾಹಿಸಿದರು.[೨೫] ೧೯೩೦-೩೧ರಲ್ಲಿ (ಗಾಂಧಿ ಇರ್ವಿನ್ ಒಪ್ಪಂದ ತನಕ) ಜಿಲ್ಲೆಯಲ್ಲಿ ಒಟ್ಟು ೧೫೫ ಮಂದಿ ಬಂಧಿತರಾಗಿ ವಿವಿಧ ಅವಧಿಯ ಶಿಕ್ಷೆ ಅನುಭವಿಸಿದರು. ೧೯೩೨ರಲ್ಲಿ ಪುನಃ ಚಳವಳಿ ಆರಂಭವಾದಾಗ ಪ್ರತಿಬಂಧಕಾಜ್ಞೆಗಳ ಭಂಗ, ಕೋರ್ಟು ಮದ್ಯದಂಗಡಿ ವಿದೇಶಿ ವಸ್ತ್ರಗಳ ಅಂಗಡಿ ಪಿಕೆಟಿಂಗ್, ಜಂಗಲ್ ಸತ್ಯಾಗ್ರಹ ಮುಖ್ಯ ಕಾರ್ಯಕ್ರಮಗಳಾದವು. ರಥಬೀದಿಯ ವೆಂಕಟರಾಯ ಪೈಗಳ ಅಂಗಡಿಯೆದುರು ೧೯೩೨ನೇ ಜೂನ್ ೮, ೧೧, ೧೪, ೧೫ ರಂದು ಸ್ವಯಂ ಸೇವಿಕೆಯರು ವಿದೇಶಿ ಸಕ್ಕರೆ ಪಹರೆ ನಡೆಸಿ ಬಂಧನಕ್ಕೆ ಒಳಗಾದರು. ಬಂಧಿಸಲಾಗಿದ್ದ ದೇವೆಂದ್ರ ಶೆಣೈಯವರ ಧರ್ಮಪತ್ನಿ ಮತ್ತು ಇತರರ ಪೈಕಿ ದೇವೇಂದ್ರ ಶೆಣೈಯವರನ್ನುಳಿದು ಉಳಿದ ಎಲ್ಲರನ್ನು ಬಿಡುಗಡೆ ಮಾಡಲಾಯಿತು.[೨೬]

ಕಾಸರಗೋಡಿನಲ್ಲಿಯೂ ವಿದೇಶಿ ವಸ್ತ್ರದಂಗಡಿಗಳ ಬಹಿಷ್ಕಾರ ನಡೆಯಿತು. ೧೯೩೨ರ ಜೂನ್ ತಿಂಗಳಿನಲ್ಲಿ ಶ್ರೀಧರ ಕಾಮ್ತಿಯವರ ಪರದೇಶಿ ವಸ್ತ್ರದ ಅಂಗಡಿಯನ್ನು ರಾಮಕೃಷ್ಣ ಮತ್ತು ರಾಮ ಹೆಗ್ಡೆಯವರು ಪಹರೆ ಮಾಡಿದರು.[೨೭] ಉಡುಪಿಯಲ್ಲಿ ವೇಲ್ಜಿಸೇಟರ ಅಂಗಡಿಯನ್ನು ಪಿಕೆಟ್ ಮಾಡಿದ ಡಿಕ್ಟೇಟರ್ ಶ್ರೀಮತಿ ಗಿರಿಜಾಬಾಯಿಯನ್ನು, ಸ್ವಯಂ ಸೇವಿಕಾ ಸಂಘದ ವ್ಯವಸ್ಥಾಪಕಿಯಾದ ಶ್ರೀ ಅಂಬಾಬಾಯಿಯನ್ನು ಬಂಧಿಸಿ ಮೂಡಬಿದ್ರೆಗೊಯ್ಯಲಾಯಿತು. ವಿಚಾರಣೆಯಾದ ನಂತರ ಇಬ್ಬರಿಗೂ ೪-೪ ತಿಂಗಳ ಸಜೆಯು

ವಿಧಿಸಲಾಯಿತು.[೭೮] ಜೂನ್ ೫, ೧೯೩೨ರಂದು ಜಿಲ್ಲಾ ಪರಿಷತ್ತಿನ ಸಂದರ್ಭ ಮೆರವಣಿಗೆ ಏರ್ಪಡಿಸಿದುದಕ್ಕೆ ಒಟ್ಟಾರೆ ೨೭ ಜನರನ್ನು ಬಂಧಿಸಲಾಯಿತು. ಅವರಲ್ಲಿ ೨೯ ಜನರಲ್ಲದೆ ಉಳಿದವರನ್ನು ರಾತ್ರಿಯಲ್ಲಿಯೇ ಬಿಡುಗಡೆ ಮಾಡಲಾಯಿತು. ಬಂಧಿಸಲಾದ ಒಟ್ಟು ೫ ಮಂದಿ ಹೆಂಗಸರಲ್ಲಿ ಶ್ರೀಮತಿ ಕಲ್ಯಾಣಿ ಬಾಯಿ, ಶ್ರೀಮತಿ ಮೀನಾಕ್ಷಿಬಾಯಿ ಎಂಬಿಬ್ಬರಿಗೆ ೪ ತಿಂಗಳ ಶಿಕ್ಷೆ ವಿಧಿಸಲಾಗಿ, ಉಳಿದವರನ್ನು ಬಿಡುಗಡೆ ಮಾಡಲಾಯಿತು.[೭೯]

ಕಾಂಜಿ ಬ್ರದರ್ಸ್ ಅಂಗಡಿಯನ್ನು ಶ್ರೀಮತಿ ರಮಾಬಾಯಿ ಮತ್ತು ಶ್ರೀಮತಿ ಸುನಂದಾಬಾಯಿ ಎಂಬ ಮಹಿಳೆಯರು ಪಿಕೆಟಿಂಗ್ ಮಾಡಿದ ಪರಿಣಾಮವಾಗಿ ಪೋಲಿಸರು ಅವರನ್ನು ಬಂಧಿಸಿ ಅಂದಿನ ದಿನ ಸ್ಟೇಷನಿನಲ್ಲಿರಿಸಿ ಮರುದಿನ ಡೆಪ್ಯುಟಿ ಮ್ಯಾಜಿಸ್ಟ್ರೇಟರಲ್ಲಿ ಹಾಜರು ಮಾಡಿದರು. ಕೈದಿಗಳಿಬ್ಬರಿಗೂ ಐದೈದು ತಿಂಗಳು ಸಜೆಯಾಗಿತ್ತು.[೮೦] ಅದೇ ರೀತಿ ೧೯೩೨ರ ಎಪ್ರಿಲ್ ತಿಂಗಳಿನಲ್ಲಿ ಶ್ರೀಮತಿ ಸುಶೀಲಾಬಾಯಿ ಮತ್ತು ಸಂಜೀವಿಬಾಯಿ ಕಾನ್ವಿಯವರ ಅಂಗಡಿಯಲ್ಲಿ ಪಹರೆ ನಡೆಸಿದರು. ಸ್ವಲ್ಪ ಸಮಯದಲ್ಲಿ ಪೋಲಿಸ್ ಸಬ್‌ಇನ್ಸ್‌ಪೆಕ್ಟರು ಅವರನ್ನು ಬಂಧಿಸಿ ಠಾಣೆಗೆ ಕೊಂಡೊಯ್ದರು.[೮೧] ೧೯೩೨ರ ಮೇ ತಿಂಗಳ ೪ರಂದು ಬೆಳಿಗ್ಗೆ ಸುಮಾರು ೯ ಗಂಟೆಗೆ ಹಂಪನಕಟ್ಟೆಯಲ್ಲಿ ಶ್ರೀಮತಿ ಸಂಜೀವಿಬಾಯಿ ಮತ್ತು ಜಲಜಾಬಾಯಿ (ಇಬ್ಬರೂ ವಿದ್ಯಾರ್ಥಿನಿಯರು) ಪಹರೆಗೆ ನಿಂತರು. ಸ್ವಲ್ಪ ಸಮಯದಲ್ಲಿ ಅವರನ್ನು ಬಂಧಿಸಿ ಸ್ಟೇಷನ್ನಿಗೆ ಕೊಂಡೊಯ್ಯಲಾಯಿತು. ಶ್ರೀಮತಿ ಕೃಷ್ಣೀಬಾಯಿ ಮತ್ತು ಸುಶೀಲಾ ಬಾಯಿಯವರು ಅದೇ ರೀತಿಯಲ್ಲಿ ಪಹರೆ ಮಾಡಿದ ಕಾರಣ ಅವರನ್ನೂ ಕೊಂಡೊಯ್ದರು. ಆ ಮೇಲೆ ಇಬ್ಬಿಬ್ಬರೇ ಸ್ವಯಂ ಸೇವಕರು ಒಂದರ ಮೇಲೊಂದು ತಂಡವಾಗಿ ಅಲ್ಲೇ ಪಹರೆ ನಡೆಸಲಾರಂಭಿಸಿದರು. ಈ ಮಧ್ಯೆ ೩ ಮಂದಿ ಸ್ವಯಂಸೇವಕರು ರಥಬೀದಿಯಲ್ಲಿ ಸ್ವದೇಶಿ ಉಪ್ಪಿನ ಮಾರಾಟವನ್ನು ಮಾಡುತ್ತಾ ಧ್ವಜವನ್ನು ಹಿಡಿದುಕೊಂಡು ಹೋದರು. ಇವರನ್ನು ಬಂಧಿಸಿ ಸ್ಟೇಷನ್ನಿಗೆ ಕೊಂಡೊಯ್ಯಲಾಯಿತು. ರಾತ್ರಿ ೭ ಘಂಟೆಗೆ ಸುಶೀಲಾಬಾಯಿ ಮತ್ತು ಸಂಜೀವಿ ಬಾಯಿ ಹಾಗೂ ಇಬ್ಬರು ಸ್ವಯಂಸೇವಕರನ್ನುಬಿಡುಗಡೆಗೊಳಿಸಿದರು.[೮೨]

ಉಡುಪಿಯವರಾದ ಅಂಬಾಬಾಯಿಯವರು ೧೯೨೦ರ ಸುಮಾರಿಗೆ ತಮ್ಮ ಪತಿಯೊಂದಿಗೆ ಬೊಂಬಾಯಿಯಲ್ಲಿ ವಾಸ್ತವ್ಯ ಹೂಡಿದ ಸಂದರ್ಭ ಭಗಿನಿ ಸಮಾಜದ ಸದಸ್ಯೆಯಿಂದ, ಗಾಂಧೀಜಿ, ತಿಲಕರ ಪ್ರಭಾವದಿಂದ ಸ್ವರಾಜ್ಯದ ಬಗ್ಗೆ ಅರಿವು ಉಂಟಾಗಿ ಚರಕದಿಂದ ನೂಲುವುದನ್ನು ಕಲಿತರು. ಹದಿನಾರನೆಯ ವಯಸ್ಸಿಗೆ ವಿಧವೆಯಾದ ಇವರು ಉಡುಪಿಗೆ ಬಂದು ತನ್ನ ತಂದೆಯ ಮನೆಯಲ್ಲಿ ವಾಸಿಸತೊಡಗಿದರು. ಏಕಾಂಗಿ ಜೀವನದಿಂದ ಬೇಸತ್ತ ಇವರು ತಮ್ಮ ಆರೋಗ್ಯ ಹದಗೆಡತೊಡಗಿದಾಗ ದೈವತ್ವದ ಅನುಭವವಾಗಿ ವಿದೇಶಿವಸ್ತ್ರ ಮತ್ತು ಮದ್ಯದಂಗಡಿಗಳ ಪಿಕೆಟಿಂಗ್ ಮೊದಲಾದುವುಗಳಲ್ಲಿ ಭಾಗವಹಿಸಿದರು. ಇತರ ಒಡನಾಡಿಗಳ ಜೊತೆ ಪ್ರಥಮ ಬಾರಿಗೆ ಬಂಧನಕ್ಕೊಳಪಟ್ಟರು. ಆದರೆ ಎರಡನೆಯ ಬಾರಿಗೆ ಬಂಧಿತರಾದಾಗ ನಾಲ್ಕು ತಿಂಗಳ ಸಜೆಯಾಯಿತು. ಬಿಡುಗಡೆಯ ನಂತರ ರಾಷ್ಟ್ರೀಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಇತರರನ್ನೂ ಹುರಿದುಂಬಿಸತೊಡಗಿದರು.[೮೩] ಸ್ವದೇಶಿ ಚಳವಳಿ ಆರಂಭವಾದ ನಂತರ, ೨೦ನೇ

ಏಪ್ರಿಲ್ ೧೯೩೨ರ ತನಕ ೬೬,೪೬೬ ಮಂದಿ ಸೆರೆವಾಸ ಅನುಭವಿಸಿದರು. ಅವರಲ್ಲಿ ೫೩೨೫ ಮಂದಿ ಸ್ತ್ರೀಯರೂ ಮಕ್ಕಳೂ ಸೇರಿದ್ದಾರೆಂದೂ ದಾಖಲೆಗಳಿಂದ ತಿಳಿದು ಬರುತ್ತದೆ.[೮೪] ೧೯೨೨ರ ಫೆಬ್ರವರಿ ತಿಂಗಳಿನಲ್ಲಿ ಎರಡನೆಯ ಕರ್ನಾಟಕ ಪ್ರಾಂತೀಯ ರಾಜಕೀಯ ಪರಿಷತ್ತು ಸರೋಜಿನಿ ನಾಯ್ಡುರವರ ಅಧ್ಯಕ್ಷತೆಯಲ್ಲಿ ಮಂಗಳೂರಿನಲ್ಲಿ ನಡೆದು ಅಪೂರ್ವ ಜಾಗೃತಿಗೆ ಕಾರಣವಾಯಿತು. ಇದೇ ಕಾಲಕ್ಕೆ ಶಿವರಾಮ ಕಾರಂತರು ಕಾಲೇಜು ತ್ಯಜಿಸಿ ರಚನಾತ್ಮಕ ಕಾರ್ಯಗಳಲ್ಲಿ ತೊಡಗಿದರು.[೮೫]

೧೯೪೦ರ ಡಿಸೆಂಬರ್ ತಿಂಗಳ ೨೨ನೇ ತಾರೀಖಿನ 'ಸ್ವದೇಶಾಭಿಮಾನಿ' ಪತ್ರಿಕೆಯು ಜಿಲ್ಲೆಯ ಸತ್ಯಾಗ್ರಹಿಯಾದ ಶ್ರೀಮತಿ ಡಾ.ತುಂಗಮ್ಮನವರು ಶಿಕ್ಷೆಗೆ ಒಳಗಾದ ಕುರಿತು ಮಾಹಿತಿ ಪ್ರಕಟಿಸಿದ ಪ್ರಕಾರ, ಶ್ರೀಮತಿ ತುಂಗಮ್ಮನವರು ಪ್ರಸಿದ್ಧ ಕಾರ್ಯಕರ್ತರಾದ ಶ್ರೀ ಭೋಜರಾಜ ಬೋಳಾರ ಇವರ ಸಹೋದರಿಯರಾಗಿದ್ದು, ತಮ್ಮ ವಿದ್ಯಾಭ್ಯಾಸವನ್ನು ಸ್ಥಳೀಯ ಗವರ್ನಮೆಂಟ್ ಕಾಲೇಜಿನಲ್ಲಿ ಪೂರೈಸಿ ನಂತರದಲ್ಲಿ, ಮದ್ರಾಸ್ ಮೆಡಿಕಲ್ ಕಾಲೇಜು ಸೇರಿ ವ್ಯಾಸಾಂಗ ಮಾಡಿ ಮದ್ರಾಸ್ ಯುನಿವರ್ಸಿಟಿಯ ಎಲ್.ಎಂ.ಎಸ್ ಪದವಿ ಪಡೆದರು. ಈರೋಡು ನಗರ ಸಭೆಯ ಕೈಕೆಳಗೆ ವೈದ್ಯ ವೃತ್ತಿಯಲ್ಲಿ ತೊಡಗಿಸಿಕೊಂಡು ಆರು ವರ್ಷಗಳ ತನಕ ಕೆಲಸ ಮಾಡಿ, ೧೯೩೧ರಲ್ಲಿ ಇಂಗ್ಲೆಂಡಿಗೆ ಹೋಗಿ ಎಫ್.ಆರ್.ಸಿ.ಎಸ್ ಡಿಗ್ರಿಯನ್ನು ಸಂಪಾದಿಸಿ ಭರತಖಂಡದ ಡಬ್ಲೂ. ಯು.ಎಮ್.ಎಸ್ (ವಿಮೆನ್ಸ್ ಮೆಡಿಕಲ್ ಸರ್ವಿಸ್) ಇಲಾಖೆಯನ್ನು ಸೇರಿದರು. ೧೯೩೧ರಲ್ಲಿ ಪುನಃ ಇಂಗ್ಲೆಂಡಿಗೆ ಹೋಗಿ ಬಂದ ನಂತರ ೧೯೩೧ರ ಸತ್ಯಾಗ್ರಹ ಚಳವಳಿಯಲ್ಲಿ ತಮ್ಮ ಧಾರಾಳ ವೇತನದ ಹುದ್ದೆಗೆ ರಾಜಿನಾಮೆ ಕೊಟ್ಟು ಸ್ವತಂತ್ರವಾಗಿ ವೈದ್ಯ ವೃತ್ತಿ ಕೈಗೊಂಡರು. ೧೯೩೭ರ ಚುನಾವಣೆಯಲ್ಲಿ ಇವರು ಕಾಂಗ್ರೆಸ್ ಕಡೆಯಿಂದ ಬೆನಾರಸ್ (ಕಾಶಿ) ಕ್ಷೇತ್ರದ ಪ್ರತಿನಿಧಿಗಳಾಗಿ ಯು. ಪಿ. ಅಸೆಂಬ್ಲಿಗೆ ವಿಶೇಷ ಬಹುಮತದಿಂದ ಆರಿಸಲ್ಪಟ್ಟರು. ೧೯೪೦ರಲ್ಲಿ ಡಾ. ತುಂಗಮ್ಮನವರು ಯುದ್ಧ ವಿರುದ್ಧವಾಗಿ ಹೂಡಿದ ಚಳವಳಿಯಲ್ಲಿ ಭಾಗವಹಿಸಿ ೬ ತಿಂಗಳ ಶಿಕ್ಷೆಗೆ ಒಳಗಾಗಿದ್ದರು.

೧೯೩೨-೧೯೩೩ರ ಅವಧಿಯಲ್ಲಿ ಸ್ತ್ರೀಯರ ಪಿಕೆಟಿಂಗ್, ಮೆರವಣಿಗೆಗಳಲ್ಲಿ ಪಾಲ್ಗೊಂಡು ಸುಮಾರು ೨೦೦ ಮಂದಿ ದೇಶಸೇವಿಕೆಯರು ಬಂಧಿತರಾದರು. ಹರಿಜನೋದ್ಧಾರ, ಖಾದಿ ಗ್ರಾಮೋದ್ಯೋಗ, ಹಿಂದೀ ಪ್ರಚಾರ ಮುಂತಾದ ವಿಧೇಯಕ ಕಾರ್ಯಗಳಲ್ಲೂ ಅನೇಕರು ದುಡಿದರು.[೮೬] ಗಾಂಧೀಜಿಯವರು ಮದ್ರಾಸ್ ಪ್ರೆಸಿಡೆನ್ಸಿಯ ಜನರಿಗೆ ಹಿಂದಿ ಭಾಷೆ ಕಲಿಯಲು ಸಂದೇಶ ನೀಡಿದ ಪರಿಣಾಮವಾಗಿ, ರಾಷ್ಟ್ರಭಾಷೆಯಾದ ಹಿಂದಿಯನ್ನು ಪ್ರಚಾರ ಮಾಡುವ ಕಾರ್ಯವೂ ಜಿಲ್ಲೆಯಲ್ಲಿ ನಡೆಯಿತು. ಮಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟ ಹಿಂದಿ ವಿದ್ಯಾರ್ಥಿನಿ ಮಂಡಲದಲ್ಲಿ ಮೂಲ್ಕಿ ಶಾಂಭವಿ ಪೂಂಜ ಅಧ್ಯಕ್ಷೆಯಾಗಿದ್ದರು. ಬಾಲಕಿಯರಲ್ಲಿ ರಾಷ್ಟ್ರೀಯ ಭಾವನೆಗಳನ್ನು ಮೂಡಿಸುವುದು ಇವರ ಉದ್ದೇಶವಾಗಿತ್ತು.[೮೭] ಖಾದಿಯನ್ನು ಧರಿಸುತ್ತಿರುವುದು ನಿಜವಾದ ದೇಶ ಪ್ರೇಮಿಯ ಬಾಹ್ಯ ಚಿಹ್ನೆಯಾಗಿದೆ ಮಾತ್ರವಲ್ಲದೇ ಅದು ಒಡನೆಯೇ ಮಹತ್ತಾದ ರಾಜಕೀಯ ಸಾಧನವೆಂದೂ ಆರ್ಥಿಕ ಹಾಗೂ ಸಾಮಾಜಿಕ ರೀತಿಯಲ್ಲಿಯೂ ಪ್ರಬಲ ಸಾಧನವೆಂದೂ ತಿಳಿಯ ತಕ್ಕದಾಗಿದೆ ಎಂಬ ಪತ್ರಿಕಾ

ಪ್ರಕಟಣೆಗಳ ಮೂಲಕ ಖಾದಿ ಗ್ರಾಮೋದ್ಯೋಗಕ್ಕೆ ಉತ್ತೇಜನ ನೀಡಲಾಯಿತು.[೮೮] ಉಡುಪಿಯ ಮನೋರಮಾ ಮಂಜುನಾಥ ನಾಯಕ್ ಇವರು ತಮ್ಮ ಪತಿಯೊಂದಿಗೆ ಸೇರಿಕೊಂಡು ಹಲವು ರಾಷ್ಟ್ರೀಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ಕಟಪಾಡಿಯ ಪಾಂಗಾಳ ದಾಮೋದರ ನಾಯಕರ ಅಭಿಪ್ರಾಯದಂತೆ 'ಪಾಂಗಾಳ ನಾಯಕ ಮನೆತನದವರು ಸ್ವಾತಂತ್ರ್ಯ ಚಳವಳಿಯಲ್ಲಿ ಅತ್ಯಂತ ಶ್ರದ್ಧೆಯಿಂದ ಭಾಗವಹಿಸಿರುತ್ತಾರೆ. ಪಾಂಗಾಳ ಮಂಜುನಾಥ ನಾಯಕ್ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ ೬ ತಿಂಗಳ ಶಿಕ್ಷೆಯನ್ನು ಅನುಭವಿಸಿ ನಂತರ ವೈಯಕ್ತಿಕ ಸತ್ಯಾಗ್ರಹದಲ್ಲೂ ತೊಡಗಿಸಿ ಸುಮಾರು ಒಂದು ವರ್ಷಗಳವರೆಗೆ ತಲೆಮರೆಸಿಕೊಂಡಿದ್ದು ಶಿಕ್ಷೆಗೆ ಒಳಗಾಗಿದ್ದರು. ಇವರ ಪತ್ನಿ ಮನೋರಮಾ ಮಂಜುನಾಥರು ಎರಡು ಬಾರಿ ಜೈಲು ಸೇರಿ ಶಿಕ್ಷೆ ಅನುಭವಿಸಿರುವರು' ಎನ್ನುತ್ತಾರೆ. 'ಸ್ವದೇಶಾಭಿಮಾನಿ' ಪತ್ರಿಕೆಯು ಎರಡು ತಿಂಗಳ ಸಜೆಗೆ ಒಳಗಾಗಿದ್ದ ಮನೋರಮಾ ಬಾಯಿ ವೆಲ್ಲೂರು ಜೈಲಿನಿಂದ ಬಿಡುಗಡೆ ಮಾಡಲ್ಪಟ್ಟಿರುವ ಕುರಿತು ವರದಿಯನ್ನು ಪ್ರಕಟಿಸಿತ್ತು.[೮೯]

ವಿದೇಶಿವಸ್ತ್ರ ಪಹರೆಗಾಗಿ ಕಾರಾಗೃಹ ಶಿಕ್ಷೆ ಅನುಭವಿಸುತ್ತಿದ್ದ ವೇಳೆ ಮನೋರಮಾ ಅವರ ಮೇಲೆ ಹೊರಿಸಲಾದ ೧೦೦ ರೂಪಾಯಿ ದಂಡದ ಪಾವತಿಗಾಗಿ ಅವರ ಬೆಲೆಬಾಳತಕ್ಕ ೪ ಸೀರೆಗಳನ್ನು ರೂಪಾಯಿ ೫೧ ಮೊತ್ತಕ್ಕೆ ಹರಾಜು ಮಾಡಲಾಯಿತು.[೯೦] ವಿದೇಶಿವಸ್ತ್ರ ಬಹಿಷ್ಕಾರದ ಕುರಿತಂತೆ ಶ್ರೀಮತಿ ಮನೋರಮಾಬಾಯಿಯವರು (ಶ್ರೀ ಪಾಂಗಾಳ ಮಂಜುನಾಥ ನಾಯಕರ ಪತ್ನಿ) ಪೆರ್ಡೂರಿಗೆ ಹೋಗಿ ವಸ್ತ್ರ ವ್ಯಾಪಾರಿಗಳನ್ನು ಭೇಟಿ ಮಾಡಿ ವಿದೇಶಿ ಬಟ್ಟೆಗಳನ್ನು ಬೇರ್ಪಡಿಸಿ ಇನ್ನು ಮುಂದೆ ಅವುಗಳನ್ನು ಮಾರಾಟಮಾಡದಂತೆ ಎಚ್ಚರಿಕೆ ನೀಡಿದರು.[೯೧] ಅದೇ ರೀತಿ ೧೯೩೨ರ ಮೇ ತಿಂಗಳಿನಲ್ಲಿ ಉಡುಪಿಯ ಪ್ರಮುಖ ಜಿನಸು ವ್ಯಾಪಾರಿಗಳಾದ ಕೆ. ವೆಂಕಟ್ರಾಯ ಪೈಗಳ ಅಂಗಡಿಯೆದುರು ಪರದೇಶಿ ಸಕ್ಕರೆಯನ್ನು ಮಾರಬಾರದಾಗಿ ತಿಳಿಸಲಾಯಿತು. ಶ್ರೀಮತಿ ಮನೋರಮಾಬಾಯಿ, ವಾಸುದೇವ ಪ್ರಭು, ಬಾಬುರಾವ್ ಮತ್ತೊಬ್ಬರು[೯೨] ಮೇ ೨೩ನೇ ೧೯೩೨ರ ಬೆಳಿಗ್ಗೆ ೮ ಗಂಟೆಯಿಂದ ಪಹರೆ ಪ್ರಾರಂಭಿಸಿದರು. ಒಂದು ತಾಸಿನೊಳಗೆ ಪೋಲಿಸರು ಬಂಧಿಸಿ ಅವರನ್ನು ಸ್ಟೇಷನಿಗೊಯ್ದರು. ಶ್ರೀಮತಿ ಮನೋರಮಾಬಾಯಿಯವರು ಕುಂದಾಪುರ ಡಿವಿಜನಲ್ ಆಫೀಸಿನೆದುರು ಹಾಜರಾಗಬೇಕೆಂದು ಮುಂಚಿತವಾಗಿಯೇ ನೋಟೀಸು ಕೊಡಲಾಯಿತು. ತನಿಖೆ ಮುಂದುವರಿದು ಕುಂದಾಪುರ ಬಿಟ್ಟು ಹೋಗದಂತೆ ನಿಯಮಿಸಲಾಯಿತು. ಇವರೊಡನೆ ಬಂಧಿಸಲಾಗಿದ್ದ ಮೂವರನ್ನು ಮಧ್ಯಾಹ್ನದ ನಂತರ ಪೊಲೀಸರು ಬಿಡುಗಡೆ ಮಾಡಿದರು.[೯೩]

ಉಡುಪಿಯಲ್ಲಿ ೧೯೩೨ರ ಮೇ ೪ರಂದು ಸಂಜೆ ೪ ಗಂಟೆಗೆ ಶ್ರೀಮತಿ ಮನೋರಮಾ ಬಾಯಿಯವರು ತಮ್ಮ ಮಗ ಶ್ರೀ ನಾರಾಯಣ ನಾಯಕ ಮತ್ತು ಗೋಪಾಲಕೃಷ್ಣ ಶಾನುಭಾಗರೊಂದಿಗೆ ಧ್ವಜ ಸಮೇತ ಜಯಕಾರಗಳೊಂದಿಗೆ ಬ್ರಿಟಿಷ್ ವಸ್ತುಗಳನ್ನು ಬಹಿಷ್ಕರಿಸುತ್ತಾ, ಕಲ್ಲು ಸಂಕ ಬಳಿಯಿಂದ ಮೆರವಣಿಗೆಯಲ್ಲಿ ರಥಬೀದಿಗೆ ಬಂದ ನಂತರ ಅವರನ್ನು ಹಿಂಬಾಲಿಸಿದ ಸುಮಾರು ೨೦೦ ಕಾರ್ಯಕರ್ತರೆದುರು ರಾಷ್ಟ್ರಗೀತೆ

ಹಾಡಿ ಮೆರವಣಿಗೆ ಮುಗಿಸಿದರು.[೬೪] ೧೯೩೨ರ ಮೇ ೧೧ರಂದು ಸುಮಾರು ೪ ಗಂಟೆಗೆ ಉಡುಪಿಯಲ್ಲಿ ಶ್ರೀಮತಿ ಮನೋರಮಾಬಾಯಿಯವರ ಮುಂದಾಳತ್ವದಲ್ಲಿ ಮೆರವಣಿಗೆಯು ಮಸೀದಿ ಬಳಿಯಿಂದ ಹೊರಟಾಗ ಅವರ ಮೂರು ವರ್ಷದ ಬಾಲಕನೂ ಜೊತೆಯಲ್ಲಿದ್ದ. ಜಯಕಾರ ಘೋಷಗಳನ್ನೆತ್ತಿಕೊಂಡು ಶ್ರೀ ವೇಲ್ಜಿಯವರ ಅಂಗಡಿಯನ್ನು ದಾಟುತ್ತಲೇ ಪೋಲಿಸರು ಬಂಧಿಸಿದರು. ಇವರ ಜೊತೆಯಲ್ಲಿದ್ದ ೫ ಮಂದಿಯನ್ನು ಪೊಲೀಸ್ ಠಾಣೆಗೆ ಒಯ್ಯಲಾಯಿತು.[೬೫] ೧೯೪೨ರಲ್ಲಿ ಪುನಃ, ಕಟಪಾಡಿಯ ಮಂಜುನಾಥ ನಾಯಕ ದಂಪತಿಗಳನ್ನು ಬಂಧಿಸಲಾಯಿತು. ನಂತರದಲ್ಲಿ ತುಳುನಾಡು ಛಾಪಾಖಾನೆಯಲ್ಲಿ ನಡೆದ ತಾಲೂಕು ಕಾಂಗ್ರೆಸ್ ಕಮಿಟಿಯ ಮಹಾಸಭೆಯಲ್ಲಿ ಕಾಡಬೆಟ್ಟು ಶ್ರೀನಿವಾಸ ಪೈದಂಪತಿಗಳು, ಪಾಂಗಾಳ ಮಂಜುನಾಥ್ ನಾಯಕ್ ಮತ್ತು ಅವರ ಪತ್ನಿ ಹಾಗೂ ನಂದ್ಯಪ್ಪ ಹೆಗ್ಡೆ ಮತ್ತು ಕೆ. ಎಚ್ ಶೆಟ್ಟರನ್ನು ಪ್ರತಿನಿಧಿಯರನ್ನಾಗಿ ಆರಿಸಲಾಯಿತು.

ಮಹಿಳೆಯರಿಗೆ ಮತದಾನದ ಹಕ್ಕು ನೀಡುವ ನಿಟ್ಟಿನಲ್ಲಿ ಜಿಲ್ಲೆಯಲ್ಲಿಯೂ ಸಭೆಗಳು ನಡೆದವು. ಶ್ರೀಮತಿ ಆನಂದಿಬಾಯಿಯವ ಅಧ್ಯಕ್ಷತೆಯಲ್ಲಿ ಮಹಿಳಾ ಸಭೆ ನಡೆಯಿತು. ಹೆಂಗಸರಿಗೆ ಮತದಾನದ ಹಕ್ಕು ಕೊಡುವ ಕುರಿತು ಸಭೆ ನಡೆದು ಶ್ರೀಮತಿ ಲಲಿತಾಬಾಯಿಯವರು 'ಸ್ತ್ರೀಯರಿಗೆ ಪುರುಷರಂತೆಯೇ ಹಕ್ಕು ಭಾಧ್ಯತೆಗಳು' ಎಂಬ ವಿಷಯದ ಕುರಿತು ಭಾಷಣ ನೀಡಿದರು.[೬೬] ೧೯೩೪ರ ೨ನೇ ಮಾರ್ಚ್ ಬಂಟವಾಳದಲ್ಲಿ ಮೊದಲ ಬಾರಿಗೆ ಮೀರಾಬೆನ್ ರವರು ಭಗಿನಿಯರನ್ನು ಉದ್ದೇಶಿಸಿ ಮಾಡಿದ ಭಾಷಣ ಜಿಲ್ಲೆಯ ಮಹಿಳೆಯರಿಗೆ ಪ್ರೋತ್ಸಾಹದಾಯಕವಾಗಿತ್ತು.[೬೭] ಉಡುಪಿಯ ಕಮಲಾ ಅಧಿಕಾರಿಯವರು ತಮ್ಮ ಪತಿಯವರ ಪ್ರೋತ್ಸಾಹದಿಂದ ೧೯೩೮ರ ನಂತರ ರಾಷ್ಟ್ರೀಯ ಚಟುವಟಿಕೆಗಳಲ್ಲಿ ಪಾಲ್ಗೊಂಡರು. ೧೯೪೦ರಲ್ಲಿ ಕಮಲಾರವರ ಪತಿಯನ್ನು ಬ್ರಿಟಿಷರು ಬಂಧಿಸಿದ ಸಂದರ್ಭ ಅವರು ತಮ್ಮ ಪತ್ನಿಯ ಕುತ್ತಿಗೆಯಿಂದ ಮಂಗಳಸೂತ್ರವನ್ನು ಸಾಂಕೇತಿಕವಾಗಿ ತೆಗೆದು ಆ ಮೂಲಕ ದೇಶ ಸೇವೆಗೆ ಆಕೆಯನ್ನು ಮುಡಿಪಾಗಿಡಲು ಅವಕಾಶ ನೀಡಿದರು. ೧೯೪೦ ಜನವರಿ ೨೩ ನಂತರ ಪುತ್ತೂರಿನ ಜೈನ ಬಸದಿಯ ಮುಂದೆ ಯುದ್ಧ ವಿರುದ್ಧ ಘೋಷಣೆ ಮಾಡಿದ ಕಾರಣ, ಎಂ. ಡಿ ಅಧಿಕಾರಿಯವರ ಸಹಧರ್ಮಿಣಿಯಾದ ಕಮಲಾ ಅಧಿಕಾರಿ ಅವರನ್ನು ದಸ್ತಗಿರಿ ಮಾಡಿದರು. ಪುತ್ತೂರು ಮಜಿಸ್ಟ್ರೇಟರು ವಿಚಾರಣೆ ನಡೆಸಿ ೬ ತಿಂಗಳ ಶಿಕ್ಷೆಗೊಳಪಡಿಸಿ ಕಡಲೂರು ಜೈಲಿಗೆ ಕೊಂಡೊಯ್ಯಲಾಯಿತು. ತಮ್ಮ ಎರಡು ವರ್ಷದ ಮಗುವಿನೊಂದಿಗೆ ದಸ್ತಗಿರಿಗೊಳಪಟ್ಟರು.[೬೮]

೧೯೩೫ರ ಸೆಪ್ಟೆಂಬರ್ ತಿಂಗಳಿನಲ್ಲಿ ಮಂಗಳೂರಿನ ಹೆಮ್ಮಕ್ಕಳ ಟ್ರೈನಿಂಗ್ ಶಾಲೆಯಲ್ಲಿ ಒಂದು ಪ್ರಚಂಡ ಸಭೆಯು ಜಿಲ್ಲಾ ಜಡ್ಜರ ಪತ್ನಿ ಬೇಗಂ ಸುಲ್ತಾನ ಅಮಿರುದ್ದೀನ್ ರವರ ಅಧ್ಯಕ್ಷತೆಯಲ್ಲಿ ನಡೆಯಿತು. ಮದರಾಸು ನ್ಯಾಯ ವಿಧೇಯಕ ಸಭೆಗೆ ಸ್ತ್ರೀಯರಿಗಾಗಿ ಮೀಸಲಾಗಿಟ್ಟ ಎಂಟು ಸ್ಥಾನಗಳಲ್ಲಿ ಕನ್ನಡ ನಾಡಿನ ಸ್ತ್ರೀಯರಿಗೆ ಯಾವುದೇ ಸ್ಥಾನವನ್ನು ನೀಡದಿರುವುದನ್ನು ಖಂಡಿಸುವುದು ಸಭೆಯ ಮುಖ್ಯ ಉದ್ದೇಶವಾಗಿತ್ತು. ಮಹಿಳಾಮಣಿಗಳಾದ ಶಾಂಭವಿ ಆರ್ ಪೂಂಜ, ಸುಭದ್ರಾ ಚೆಟ್ಟೂರ್, ಶಾರದಾ ತಲವಾರ್ ತಮ್ಮ ಅಭಿಪ್ರಾಯ

ಮಂಡಿಸಿದರು. ಕೊನೆಗೆ ಈ ಕುರಿತು ಪ್ರಸ್ತಾವನೆಯನ್ನು ಸಭೆಯಲ್ಲಿ ಭಾಗವಹಿಸಿದ ಮಹಿಳೆಯರ ಸಹಿಗಳೊಂದಿಗೆ ಸರಕಾರಕ್ಕೆ ಕಳುಹಿಸಲಾಯಿತು. ೧೯೩೬ರ ಅಕ್ಟೋಬರ್ ತಿಂಗಳಿನಲ್ಲಿ ಮಂಗಳೂರಿನಲ್ಲಿ ಗಾಂಧಿಜಯಂತಿಯನ್ನು ಬಹಳ ವಿಜೃಂಭಣೆಯಿಂದ ಆಚರಿಸಲಾಯಿತು. ಮೈದಾನದಲ್ಲಿ ರಾಷ್ಟ್ರಗೀತೆಯನ್ನು ಸ್ವಯಂಸೇವಕರು ಹಾಡಿದ ನಂತರ ನಡೆದ ಧ್ವಜವಂದನಾ ಕಾರ್ಯಕ್ರಮದಲ್ಲಿ ಶ್ರೀಮತಿ ಲಕ್ಷ್ಮೀ ರೈಗಳು ಧ್ವಜವನ್ನು ಏರಿಸಿದರು.[೯೯] ನಂತರ ನಡೆದ ಸಭಾ ಕಾರ್ಯಕ್ರಮದಲ್ಲಿ ಹರಿಜನರ ಸಮಸ್ಯೆಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ಸರಕಾರದ ಯೋಜನೆಗಳು ಜಾರಿಗೆ ಬರಬೇಕೆಂದು ಡಿಸಿಎಂ ಇದರ ಕಾರ್ಯದರ್ಶಿಗಳಾದ ಸೂರ್ಯನಾರಾಯಣರು ಅಭಿಪ್ರಾಯಪಟ್ಟರು. ಹರಿಜನೋದ್ಧಾರ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಕಾರ್ಕಳದಲ್ಲಿ ಅಸ್ಪೃಶ್ಯತಾ ನಿವಾರಣೆಯ ಕುರಿತು ಠರಾವುಗಳು ನಡೆದು ಸರ್ವಸಮ್ಮತವಾಗಿ ಒಪ್ಪಲ್ಪಟ್ಟವು.[೧೦೦]

ರಾಷ್ಟ್ರೀಯತೆಯ ಕಾವು ಕರಾವಳಿಯ ಕ್ರೈಸ್ತರನ್ನು ಸ್ಪಂದಿಸದಿರಲಿಲ್ಲ. ಅಲ್ಪಸಂಖ್ಯಾತರಾದ ಇವರು ಧಾರ್ಮಿಕ ವಿಷಯಗಳಲ್ಲಿ ವಿದೇಶಿ ಕ್ರೈಸ್ತ ಪಾದ್ರಿಗಳ ಪ್ರಭಾವಕ್ಕೊಳಗಾಗಿದ್ದು, ರಾಷ್ಟ್ರೀಯ ಚಳವಳಿಗೆ ಸಂಬಂಧಿಸಿದ ವಿಷಯಗಳಲ್ಲಿ ವಿಭಿನ್ನತೆಯನ್ನು ಕಾಯ್ದುಕೊಂಡರು. ವಿದೇಶಿಯರಲ್ಲವೆಂಬ ಭಾವನೆ ದೃಢಪಡಿಸುವುದು ಅವರಿಗೆ ಸವಾಲಾಗಿತ್ತು. ೨೦ನೇ ಶತಮಾನದ ಆದಿಭಾಗದಲ್ಲಿ ಮಂಗಳೂರಿನ ಕ್ರೈಸ್ತರಲ್ಲಿ ಸ್ವಪ್ರಜ್ಞೆ ಹಾಗೂ ಸಾರ್ವಜನಿಕ ಜೀವನದಲ್ಲಿ ಅರಿವು ಮೂಡಿಸುವ ಪ್ರಯತ್ನಗಳಾದವು. ಪತ್ರಿಕೆಗಳು ನಿರಂತರವಾಗಿ ಕ್ರೈಸ್ತರನ್ನು 'ನೀವು ಈ ಮಣ್ಣಿನ ಮಕ್ಕಳು, ಬರೇ ಮತಾಂತರಗೊಂಡ ಕ್ರೈಸ್ತರೇ ವಿನಃ ಹೊರದೇಶದಿಂದ ಬಂದ ವಿದೇಶಿಯರಲ್ಲ' ಎಂಬ ಎಚ್ಚರಿಕೆಯನ್ನು ಪದೇಪದೇ ನೀಡಿ, ವಿದೇಶಿ ಸಂಸ್ಕೃತಿಯನ್ನು ಗುರಿಗೊತ್ತಿಲ್ಲದೆ ಅನುಕರುಣಿಸುವುದರಿಂದ ಬ್ರಿಟಿಷ್ ಸಾಮ್ರಾಜ್ಯದ ಗುಲಾಮನಂತೆ ನಡೆದುಕೊಂಡಂತಾಗುತ್ತದೆ ಎಂಬುವುದಾಗಿ ಎಚ್ಚರಿಕೆ ನೀಡುತ್ತವೆ.[೧೦೧] ಭಾರತೀಯ ಕ್ರೈಸ್ತರು ಅದರಲ್ಲೂ ಮಂಗಳೂರಿನ ಕ್ರೈಸ್ತರು, ಭಾರತದ ರಾಜಕೀಯದಲ್ಲಿ ಸಂಘಟಿತರಾಗಿ ಕಾರ್ಯಪ್ರವೃತ್ತರಾಗಬೇಕೆಂಬ ಕೂಗು ಕೇಳಿಸಿತು. ಈ ನಿಟ್ಟಿನಲ್ಲಿ ಕ್ಯಾಥೋಲಿಕ್ ಎಸೋಸಿಯೇಶನ್ ಆಫ್ ಸೌತ್ ಕೆನರಾ ೧೯೧೪ರಲ್ಲಿ ಮಂಗಳೂರಿನಲ್ಲಿ ಸ್ಥಾಪಿಸಲಾಯಿತು. ಪ್ರಾರಂಭದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳತ್ತ ಗಮನಹರಿಸಿ, ೧೯೨೦ರ ನಂತರ ರಾಜಕೀಯ ಚಟುವಟಿಕೆಗಳತ್ತ ಗಮನ ಹರಿಸಿತು.[೧೦೨] ಕ್ರೈಸ್ತರ ಧ್ವನಿ ಪ್ರಚಾರ ಮಾಡುವ ನಿಟ್ಟಿನಲ್ಲಿ ಕ್ರೈಸ್ತ ಪಾಕ್ಷಿಕ ಪತ್ರಿಕೆಯನ್ನು ೧೯೧೨ರಲ್ಲಿ ಪ್ರಾರಂಭಿಸಲಾಯಿತು.

ಮಂಗಳೂರಿನ ಪುರಮಹಾಜನರ ಸಭೆದಾಗ ಪ್ರೊ. ಮರ್ಕಿಯವರು ಕ್ರೈಸ್ತಧರ್ಮದವರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಬೇಕೆಂದು ಕರೆ ನೀಡಿದರು.[೧೦೩] ೧೯೩೦ರಲ್ಲಿ ಕಾಸರಗೋಡಿನ ಕುಂಬಳೆಯಲ್ಲಿ ಪ್ರಥಮ ಬಾರಿಗೆ ಹಿಂದು, ಮುಸಲ್ಮಾನ ಹಾಗೂ ಕ್ರೈಸ್ತರು ಜೊತೆ ಸೇರಿ ಯಾವ ವೈಷಮ್ಯವೂ ಇಲ್ಲದೆ ಹರತಾಳವನ್ನು ಆಚರಿಸಿರುವುದು ವರದಿಯಾಗಿರುತ್ತದೆ.[೧೦೪] ಬ್ರಿಟಿಷರೇ ಭಾರತ ಬಿಟ್ಟು ತೊಲಗಿ ಎಂಬ ಹೋರಾಟ ದೇಶವ್ಯಾಪಿಯಾಗಿ ನಡೆಯಿತು. ೧೯೪೨ರ ಸೆಪ್ಟೆಂಬರ್ ೯ರಂದು ಪೂರ್ವಾಹ್ನ ಮಂಗಳೂರಿನಲ್ಲಿ

ಸ್ವಯಂಸೇವಕ ದಳವು ಜಿಲ್ಲಾ ಕೋರ್ಟಿನ ಬಳಿ ಪಿಕೆಟಿಂಗ್ ನಡೆಸಿತು. ಪಿಕೆಟಿಂಗ್ ವೇಳೆ ಅಲ್ಲಿಗೆ ಬಂದ ಪೋಲಿಸರಪಡೆ ಸ್ವಯಂಸೇವಕರನ್ನು ಚದುರಿಸಲು ಗಾಳಿಯಲ್ಲಿ ಗುಂಡುಹಾರಿಸಿತು. ಸಂಜೆ ಕೇಂದ್ರ ಮೈದಾನದವರೆಗೆ ಸಾಗಿದ ಮೆರವಣಿಗೆ ಮತ್ತು ನಂತರ ನಡೆದ ಸಭೆಯಲ್ಲಿ ಮಹಿಳೆಯರಿಂದ ವಂದೇ ಮಾತರಂ ಮೊಳಗಿದ ನಂತರ ಅಧ್ಯಕ್ಷರಾದ ಎಂ.ಡಿ. ಅಧಿಕಾರಿಯವರು ಸ್ಫೂರ್ತಿಯುತವಾದ ಭಾಷಣ ಮಾಡಿ ಬ್ರಿಟಿಷರು ಭಾರತ ಬಿಟ್ಟು ತೊಲಗುವಂತೆ ಕರೆಯಿತ್ತರು.

ಅಗೋಸ್ಟು ೯, ೧೯೪೩ರಂದು ಹಲವು ವ್ಯಾಪಾರಿಗಳು ಹರತಾಳ ಆಚರಿಸಿದ್ದರು. ಸ್ಥಳೀಯ ಶಾಲಾ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಹಾಜರಿ ಕಡಿಮೆಯಿದ್ದು ವಿದ್ಯಾರ್ಥಿನಿಯರೂ ಭಾಗವಹಿಸಿದ್ದರು.[೧೦೫] ಉಡುಪಿಯಲ್ಲಿ ನಡೆದ ಹರತಾಳಕ್ಕೆ ಸ್ಪಂದನೆ ಸಕಾರಾತ್ಮಕವಾಗಿತ್ತು. ಪಟ್ಟಣದ ಮುಖ್ಯ ಭಾಗದಲ್ಲೆಲ್ಲಾ ವ್ಯಾಪಾರಿಗಳು ತಮ್ಮ ವ್ಯಾಪಾರ ವಹಿವಾಟುಗಳನ್ನು ಸಂಪೂರ್ಣವಾಗಿ ನಿಲ್ಲಿಸಿದ್ದರು. ಕರಿಪತಾಕೆಯ ಮೆರವಣಿಗೆಯು ರಥಬೀದಿಯಿಂದ ಶ್ರೀ ಪಿ. ಮಂಜುನಾಥ ನಾಯಕರ ನೇತೃತ್ವದಲ್ಲಿ ಹೊರಟಾಗ ಶ್ರೀಮತಿ ಪಿ. ಮನೋರಮಾಬಾಯಿಯವರು ಇನ್ನಿತರ ಮಹಿಳೆಯರ ಜೊತೆ ಸೇರಿ ಮೆರವಣಿಗೆಯಲ್ಲಿ ಭಾಗವಹಿಸಿದ್ದರು. ಇದಕ್ಕೆ ಪ್ರತಿಯಾಗಿ ಬ್ರಿಟಿಷರು ೧೯೪೩ರಲ್ಲಿ ಯಾವುದೇ ಸಾರ್ವಜನಿಕ ಸಭೆ, ಮೆರವಣಿಗೆ, ಕೂಟಗಳು ಜರಗಕೂಡದೆಂದು ಬ್ರಿಟಿಷರು ವಿಧಿಸಿದ ನಿರ್ಬಂಧಕಾಜ್ಞೆಎರಡು ತಿಂಗಳವರೆಗೆ ಮುಂದುವರೆಯಿತು.[೧೦೬]

ಮಹಿಳೆಯರನ್ನು ಸಬಲೀಕರಣಗೊಳಿಸುವ ನಿಟ್ಟಿನಲ್ಲಿ ೧೯೪೫ರ ಅಕ್ಟೋಬರ್ ತಿಂಗಳಿನಲ್ಲಿ ಕೆನರಾ ಹೈಸ್ಕೂಲಿನಲ್ಲಿ ನಡೆದ ಪ್ರಾಂತೀಯ ಮಹಿಳಾ ಸಮ್ಮೇಳನದಲ್ಲಿ ಶ್ರೀಮತಿ ರಮಾಬಾಯಿಯವರನ್ನು ಸ್ವಾಗತಾಧ್ಯಕ್ಷೆಯಾಗಿ ನೇಮಿಸಲಾಯಿತು. ಶ್ರೀಮತಿ ಕಲ್ಯಾಣಿ ಡಿ. ಶೆಟ್ಟಿ ಮತ್ತು ಕೌಸಲ್ಯ ಶೆಟ್ಟಿಯವರು ಜತೆ ಕಾರ್ಯದರ್ಶಿಗಳಾಗಿದ್ದು, ಈ ಕೆಲವು ಠರಾವುಗಳನ್ನು ಮಂಡಿಸಲಾಯಿತು. ೧. ಹುಡುಗಿಯರಿಗೆ ನರ್ಸ್ ಉದ್ಯೋಗಕ್ಕೆ ಅವಕಾಶ ೨. ಕಡ್ಡಾಯ ಶಿಕ್ಷಣ ೩. ಸ್ವದೇಶಿ ವಸ್ತು ಬಳಸುವುದು. ಹೀಗೆ ಮಹಿಳಾ ಸಮ್ಮೇಳನಗಳೂ ಸ್ತ್ರೀಯರಲ್ಲಿ ರಾಷ್ಟ್ರೀಯ ಜಾಗೃತಿ ಮೂಡಿಸಿದವು.[೧೦೭]ರಾಷ್ಟ್ರೀಯ ಮನೋಭಾವದ ಭಾರತೀಯರು ದೇಶ ಪ್ರೇಮದ ಸಂದೇಶ, ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಅಭಿಪ್ರಾಯಗಳ ಪ್ರಸಾರ ಹಾಗೂ ಆ ಬಗ್ಗೆ ಜಾಗೃತಿಯನ್ನು ಸೃಷ್ಟಿಸಲು ಬಳಸಿದ ಪ್ರಮುಖ ಸಾಧನವೆಂದರೆ ಪತ್ರಿಕೆಗಳು. ಹತ್ತೊಂಭತ್ತನೆಯ ಶತಮಾನದ ಉತ್ತರಾರ್ಧದಲ್ಲಿ, ರಾಷ್ಟ್ರೀಯ ಪತ್ರಿಕೆಗಳು ಹೆಚ್ಚು ಸಂಖ್ಯೆಯಲ್ಲಿ ಪ್ರಕಟಗೊಂಡವು. ಅವುಗಳ ಅಂಕಣಗಳಲ್ಲಿ, ಸರಕಾರದ ನೀತಿಗಳನ್ನು ನಿರಂತರವಾಗಿ ಟೀಕಿಸಲಾಗುತ್ತಿತ್ತು. ಭಾರತೀಯ ದೃಷ್ಟಿಕೋನವನ್ನು ಪ್ರಸ್ತಾಪಿಸಲಾಗುತ್ತಿತ್ತು. ಪತ್ರಿಕೆಗಳು ದೇಶದ ವಿವಿಧ ಭಾಗಗಳಲ್ಲಿ ನೆಲೆಸಿದ್ದ ರಾಷ್ಟ್ರೀಯ ಕಾರ್ಯಕರ್ತರು ಪರಸ್ಪರ ಅಭಿಪ್ರಾಯಗಳ ವಿನಿಮಯ ಮಾಡಿಕೊಳ್ಳಲು ಸಹಾಯ ಮಾಡಿದವು.[೧೦೮] ಮುದ್ರಣದ ಆರಂಭ ಹಾಗೂ ಪತ್ರಿಕೆಗಳ ಪ್ರಕಟಣೆ ಕೂಡಾ ರಾಷ್ಟ್ರೀಯ ಜಾಗೃತಿಯಲ್ಲಿ ಗಣ್ಯ ಪಾತ್ರವಹಿಸಿದವು. ಕಾಯಿದೆಭಂಗ ಚಳವಳಿಯ ಕಾಲದಲ್ಲಿ ಉಡುಪಿಯ ಸುತ್ತಮುತ್ತ ಗುಪ್ತಪ್ರಸಾರದಲ್ಲಿದ್ದ 'ರಾಮಬಾಣ' ಎಂಬ ಪತ್ರಿಕೆಯು ಸರಕಾರದ

ಕಾನೂನು ಉಲ್ಲಂಘಿಸಿ ಗುಪ್ತವಾಗಿ ಮುದ್ರಣಗೊಳ್ಳುತ್ತಿದ್ದ ಪತ್ರಿಕೆಗಳಲ್ಲೊಂದಾಗಿತ್ತು. ಈ ಪತ್ರಿಕೆಯನ್ನು ವಿತರಿಸುತ್ತಿದ್ದ ಪುರುಷರ ಜೊತೆ ಭಾಗೀರಥಿ ಬಾಯಿ, ಅಂಬಾ ಪೈ, ಗಿರಿಜಾಬಾಯಿ ಮೊದಲಾದ ಮಹಿಳೆಯರೂ ಪಾಲ್ಗೊಂಡಿದ್ದರು.[೧೦೯]

ರಾಷ್ಟ್ರೀಯ ಹೋರಾಟದಲ್ಲಿ ಮಹಿಳೆಯರ ಚಟುವಟಿಕೆಗಳು ಕೇವಲ ಭಾಗಶಃ ದಾಖಲಾಗಿದೆ. ಪುರುಷ ಕೇಂದ್ರಿತ ಸಮಾಜದಲ್ಲಿ ಕೇಳಿಸುವ ದನಿಗಳು, ಕಾಣಿಸುವ ಪದಗಳು ಪುರುಷ ಪರವಾಗಿರುವುದರಿಂದ ಇಲ್ಲಿನ ಸಾಹಿತ್ಯ ಮತ್ತು ರಾಜಕೀಯ, ಇತಿಹಾಸಗಳಲ್ಲಿ ಹೆಣ್ಣನ್ನು ಒಂದು ನಿರ್ದಿಷ್ಟ ಸಾಂಪ್ರದಾಯಿಕ ಮಾದರಿಯಲ್ಲಿ ಕಲ್ಪಿಸಿ ಆ ನೆಲೆಯಲ್ಲಿಯೇ ದಾಖಲಿಸಲಾಗಿದೆ. ಗಂಡಿನ ಕ್ರಿಯಾ ಚಟುವಟಿಕೆಗಳು ಪ್ರಧಾನವಾಗಿ, ಮಾದರಿಯಾಗಿ ಗ್ರಹೀತವಾಗುವುದರಿಂದ ಹೆಣ್ಣಿನ ಚಟುವಟಿಕೆಗಳು ಹಿನ್ನೆಲೆಗೆ ತಳ್ಳಲ್ಪಟ್ಟಿವೆ. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಸಾಮಾನ್ಯ ವರ್ಗದವರ ಕುರಿತು ಉಲ್ಲೇಖ ಲಭ್ಯವಿಲ್ಲದಿರುವುದು ವಿಷಾದಕರ ಸಂಗತಿಯಾಗಿದೆ. ಅಂತೆಯೇ ರಾಷ್ಟ್ರೀಯ ಚಟುವಟಿಕೆಗಳಲ್ಲಿ ಭಾಗವಹಿಸಿದ ಅಸಂಖ್ಯಾತ ಮಹಿಳೆಯರು ಯಾವುದೇ ಸಂಘಟನೆಗಳನ್ನು ಸ್ಥಾಪಿಸದೆ, ಉನ್ನತ ಹುದ್ದೆಗಳ ಆಕಾಂಕ್ಷಿಗಳಾಗಿರದೆ ಸ್ವಯಂಸೇವಿಕೆಯರಾಗಿ ದುಡಿದರೂ ಅವರ ತ್ಯಾಗ ಅಲಕ್ಷ್ಯಕ್ಕೊಳಗಾಗಿರುವುದು ಖೇದನೀಯ ವಿಚಾರವಾಗಿದೆ.

# ಸಂದರ್ಭ ಸೂಚಿ


೧. ಬಿಪನ್ ಚಂದ್ರ : ೨೦೧೨, ಆಧುನಿಕ ಭಾರತದ ಇತಿಹಾಸ, ನವಕರ್ನಾಟಕ ಪಬ್ಲಿಕೇಶನ್ಸ್, ಬೆಂಗಳೂರು, ಪುಟಗಳು ೨೧೮-೨೨೭.

೨. ಲೋಲಾಕ್ಷಿ ಕೆ.ಎನ್: ೨೦೦೬, ಕನ್ನಡ ಪತ್ರಿಕೆಗಳು ಮತು ಮಹಿಳೆ, ಕೆ.ಎನ್. ಮಂಗಳೂರು ವಿಶ್ವವಿದ್ಯಾಲಯ, ಪುಟ ೧೬.

೩. ಗೀತಾ ಶೆಣೈ : ೨೦೧೧, ಸಂಚರ - ಸಹಸ್ರಮಾನ ಲೇಖಕಿಯರು, ಸ್ನೇಹಾ ಪ್ರಿಂಟರ್ಸ್, ಬೆಂಗಳೂರು, ಪುಟ೧.

೪. ಉಷಾ ಪಿ. ರೈ: ೨೦೦೯, ಮಧ್ಯಂತರ , ಕಿರಣ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು, ಪುಟ ೬೩.

೫. ಹೊಸತು (ಸಂ): ೨೦೦೭, ಸಂಪುಟ ೮, ಸಂಚಿಕೆ ೬, ಜನವರಿ ೨೦೦೭, ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪುಟಗಳು ೬೯ -೭೦.

೬. ಶಿವರಾಮ ಪಡಿಕ್ಕಲ್: ೨೦೦೧, ನಾಡು - ನುಡಿಯ ರೂಪಕ, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ, ಪುಟ ೩೮.

೭. ನಿರಂತರ: ೨೦೦೯, ಬಿ. ವಿ. ಕಕ್ಕಿಲ್ಲಾಯ ಸಂಭಾವನಾ ಗ್ರಂಥ, ಎಂ ಎಸ್. ಕೃಷ್ಣನ್ ಸ್ಮರಣ ಸಂಸ್ಥೆ ಬೆಂಗಳೂರು, ಪುಟ ೩೧೭.

೮. ಸುಮಿತ್ ಸರ್ಕರ್ : ೧೯೭೩, ದಿ ಸ್ವದೇಶಿ·ಮೂವ್ ಮೆಂಟ್ ಇನ್ ಬೆಂಗಾಲ್ ೧೯೦೩-೧೯೦೮, ಪೀಪಲ್ಸ್ ಪಬ್ಲಿಷಿಂಗ್ ಹೌಸ್. ನ್ಯೂ ಡೆಲ್ಲಿ, ಪುಟ ೨೫೩.

೯. ನಂದ ಬಿ. ಆರ್ (ಸಂ): ೧೯೭೬, ಇಂಡಿಯನ್ ವಿಮೆನ್: ಫ್ರಾಂ ಪರ್ದಾ ಟು ಮೋರ್ಡನಿಟಿ , ಅಪರ್ಣ ಬಸುರವರ ಲೇಖನ 'ದ ರೋಲ್ ಆಫ್ ವಿಮೆನ್ ಇನ್ ದ ಇಂಡಿಯನ್ ಸ್ಟ್ರಗಲ್ ಫಾರ್ ಫೀಡಂ', ವಿಕಾಸ್ ಪಬ್ಲಿಕೇಶನ್ಸ್, ನ್ಯೂ ಡೆಲ್ಲಿ, ಪುಟ ೧೭.

೧೦. ಬಿಪನ್ ಚಂದ್ರ: ಪೂರ್ವೋಕ್ತ, ಪುಟ ೨೫೮.

೧೧. ಸೂರ್ಯನಾಥ ಕಾಮತ್: ೨೦೧೨, ಇತಿಹಾಸದ ಆಚೆ ಈಚೆ, ಹೇಮಂತ ಸಾಹಿತ್ಯ ಬೆಂಗಳೂರು, ಪುಟಗಳು ೨೯೯-೩೦೦.

೧೨. ಜೆರಾಲ್ಡಿನ್ ಫೋಬ್ಸ್ : ೨೦೦೫, ವಿಮೆನ್ ಇನ್ ಕೊಲೋನಿಯಲ್ ಇಂಡಿಯಾ, ಕ್ರೋನಿಕಲ್ ಬುಕ್ಸ್, ನ್ಯೂ ಡೆಲ್ಲಿ, ಪುಟಗಳು ೩೩- ೪೯.

೨೩. ಜಾನ ಎವರೆಟ್ ಮಾಟ್ಸನ್: ೧೯೮೧, ವಿಮೆನ್ ಆಂಡ್ ಸೋಷಲ್ ಚೆಂಜ್ ಇನ್ ಇಂಡಿಯಾ, ಹೆರಿಟೇಜ್ ಪಬ್ಲಿಷರ್ಸ್, ನ್ಯೂ ಡೆಲ್ಲಿ, ಪುಟ ೮೫.

೧೪. ಎಕ್ಸ್ ಟ್ರಾಕ್ಸ್ ಫ್ರಾಮ್ ದಿ ಫೋರ್ಟನೈಟ್ಲಿ ಕಾನ್ಫಿಡೆನ್ಶಿಯಲ್ ರಪೋರ್ಟ್ಸ್ ಫ್ರಾಮ್ ದಿ ಮದ್ರಾಸ್ ಗವರ್ನಮೆಂಟ್ ಟು ದಿ ಗವರ್ನಮೆಂಟ್ ಆಫ್ ಇಂಡಿಯಾ ಆನ್ ದಿ ಸ್ಟೇಟ್ ಆಫ್ ದಿ ಕಂಟ್ರಿ, ೧೯೧೫.

೧೫. ಎಕ್ಸ್ ಟ್ರಾಕ್ಸ್ ಫ್ರಾಮ್ ದಿ ಫೋರ್ಟ್ ನೈಟ್ಲಿ ಕಾನ್ಫಿಡೆನ್ಶಿಯಲ್ ರಪೋರ್ಟ್ಸ್ ಫ್ರಾಮ್ ದಿ ಮದ್ರಾಸ್ ಗವರ್ನಮೆಂಟ್ ಟು ದಿ ಗವರ್ನಮೆಂಟ್ ಆಫ್ ಇಂಡಿಯಾ ಆನ್ ದಿ ಸ್ಟೇಟ್ ಆಫ್ ದಿ ಕಂಟ್ರಿ. ಡಿಸೆಂಬರ್ ೧೫, ೧೯೧೫, ನಂಬ್ರ ೫೫೫೩.

೧೬. ಎಕ್ಸ್ ಟ್ರಾಕ್ಸ್ ಫ್ರಾಮ್ ದಿ ಫೋರ್ಟ್ ನೈಟ್ಲಿ ಕಾನ್ಫಿಡೆನ್ಶಿಯಲ್ ರಪೋರ್ಟ್ಸ್ ಫ್ರಾಮ್ ದಿ ಮದ್ರಾಸ್ ಗವರ್ನಮೆಂಟ್ ಟು ದಿ ಗವರ್ನಮೆಂಟ್ ಆಫ್ ಇಂಡಿಯಾ ಆನ್ ದಿ ಸ್ಟೇಟ್ ಆಫ್ ದಿ ಕಂಟ್ರಿ, ೧೯೧೬ ರಿಪೋರ್ಟ್ ನಂಬ್ರ ೧೩೩೫.

೧೭. ಹೋಮ್ ಡಿಪಾರ್ಟ್ ಮೆಂಟ್ ರೆಕಾರ್ಡ್ಸ್, ನವೆಂಬರ್ ೧, ೧೯೧೫, ನಂಬ್ರ ೪೭೫೨.

೧೮. ಹೋಮ್ ಡಿಪಾರ್ಟ್ ಮೆಂಟ್ ರೆಕಾರ್ಡ್ಸ್, ಮೇ ೧೭, ೧೯೧೬, ನಂಬ್ರ ೧೯೭೫.

೧೯. ಎವರೆಟ್ ಮಾಟ್ಸನ್ ಜಾನ: ಪೂರ್ವೋಕ್ತ, ಪುಟಗಳು ೮೫, ೧೦೪.

೨೦. ಉಮಾ ಜಾ ಶಂಕರ್, ಪ್ರೇಮಲತ ಪೂಜಾರಿ: ೧೯೯೮, ಇಂಡಿಯನ್ ವಿಮೆನ್ ಟುಡೇ, ಟ್ರೆಡಿಷನ್, ಮೋಡರ್ನಿಟಿ ಅಂಡ್ ಚಾಲೆಂಜ್, ಕಾನಿಷ್ಕ ಪಬ್ಲಿಷರ್ಸ್, ಪುಟ ೧೧೪,

೨೧. ಸೂರ್ಯನಾಥ ಕಾಮತ್: ಪೂರ್ವೋಕ್ತ, ಪುಟಗಳು ೩೦೩, ೩೦೪.

೨೨. ರಿಪೋರ್ಟ್ ಆಫ್ ದಿ ಲೋಕಲ್ ಅಂಡ್ ಮುನ್ಸಿಪಲ್ ಡಿಪಾರ್ಟ್ ಮೆಂಟ್, ೧೯೦೪, ಮದ್ರಾಸ್, ಪುಟ ೨೨೪.

೨೩. ಎವರೆಟ್ ಮಾಟ್ಸನ್ ಜಾನ: ಪೂರ್ವೋಕ್ತ, ಪುಟ ೧೦೫.

೨೪. ಸರೋಜಿನಿ ಶಿಂತ್ರಿ : ೧೯೭೯, ನಾನೊಂದು ಕನಸು ಕಂಡೆ, ಧಾರವಾಡ, ಪುಟಗಳು ೫೧- ೫೮.

೨೫. ಸೂರ್ಯನಾಥ ಕಾಮತ್: ೧೯೮೦, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಪುಟಗಳು ೨೩೬-೨೩೭.

೨೬. ಶ್ರೀಯಾನ್ ಕೆ.ಆರ್: ೨೦೦೭, ನನ್ನ ಜೀವನ ಕಥನದ ನೆನಪಿನಂಗಳದಿಂದ, ಕ್ರಿಯಾ ಪುಸ್ತಕ, ಬೆಂಗಳೂರು, ಪುಟಗಳು ೬೦-೬೨.

೨೭. ಶ್ರೀ ಬಾಲಕೃಷ್ಣ ಶೆಟ್ಟಿ ಇವರ ಸಂದರ್ಶನ ೧೧-೧೧-೨೦೧೬.

೨೮. ಸರೋಜಿನಿ ಶಿಂತ್ರಿ ಮತ್ತು ರಾಘವೇಂದ್ರ ರಾವ್: ೧೯೬೩, ವಿಮೆನ್ ಫ್ರೀಡಂಫೈಟರ್ಸ್ ಇನ್ ಕರ್ನಾಟಕ ಪ್ರಸಾರಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪುಟಗಳು ೪೪-೪೭.

೨೯. ಫ್ರೀಡಂ ಮೂವ್ ಮೆಂಟ್ ಇನ್ ಕರ್ನಾಟಕ, ಹೂ ಇಸ್ ಹೂ ಸಂಪುಟ ೧, ಗವರ್ನಮೆಂಟ್ ಆಫ್ ಮೈಸೂರು ಪಬ್ಲಿಕೇಶನ್, ೧೯೭೯, ಪುಟ ೨೫೭.

೩೦. ಸರೋಜಿನಿ ಶಿಂತ್ರಿ ಮತ್ತು ರಾಘವೇಂದ್ರ ರಾವ್: ಪೂರ್ವೋಕ್ತ, ಪುಟಗಳು ೪೭-೫೦.

೩೧. ಲಿಂಗಯ್ಯ.ಡಿ (ಸಂ):೧೯೯೮, ಸತ್ಯಾಗ್ರಹಿಗಳ ನೆನಪುಗಳು, ದಿನಕರ ಪ್ರಕಾಶನ, ಬೆಂಗಳೂರು, ಪುಟ ೧೮೭.

೩೨. ಸರೋಜಿನಿ ಶಿಂತ್ರಿ ಮತ್ತು ರಾಘವೆಂದ್ರ ರಾವ್: ಪೂರ್ವೋಕ್ತ, ಪುಟ ೫೫.

೩೩. ಸೂರ್ಯನಾಥ ಕಾಮತ್: ಪೂರ್ವೋಕ್ತ, ಪುಟಗಳು ೨೦೨- ೨೦೪.

೩೪. ಸರೋಜಿನಿ ಶಿಂತ್ರಿ ಮತ್ತು ರಾಘವೇಂದ್ರ ರಾವ್: ಪೂರ್ವೋಕ್ತ, ಪುಟ ೫೬.

೩೫. ಸ್ವದೇಶಾಭಿಮಾನಿ, ಜನವರಿ ೩, ೧೯೪೧.

೩೬. ಸ್ವದೇಶಾಭಿಮಾನಿ, ಡಿಸೆಂಬರ್ ೧೨, ೧೯೪೧.

೩೭. ಸರೋಜಿನಿ ಶಿಂತ್ರಿ ಮತ್ತು ರಾಘವೇಂದ್ರ ರಾವ್: ಅದೇ ಪೂರ್ವೋಕ್ತ , ಪುಟ ೮೫.

೩೮. ಗೋಪಾಲ್. ಆರ್ (ಸಂ): ೨೦೦೯, ಉಡುಪಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಪುಟ ೧೭೧.

೩೯. ಫ್ರೀಡಂ ಸ್ಟ್ರಗಲ್ ಇನ್ ಕರ್ನಾಟಕ, ಹೂ ಇಸ್ ಹೂ, ೧೯೬೯ ಸಂಪುಟ - ೧, ಗವರ್ನಮೆಂಟ್ ಆಫ್ ಮೈಸೂರು ಪಬ್ಲಿಕೇಶನ್, ಪುಟ ೨೫೧.

೪೦. ಶ್ರೀಮತಿ ಎಚ್. ಎಸ್: ೧೯೯೯, ಕನ್ನಡ ಮಹಿಳೆ ಮತ್ತು ಸ್ವಾತಂತ್ರ್ಯ ಹೋರಾಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟಗಳು ೪೬-೫೨.

೪೧. ಸರೋಜಿನಿ ಶಿಂತ್ರಿ ಮತ್ತು ರಾಘವೇಂದ್ರ ರಾವ್: ಅದೇ ಪೂರ್ವೋಕ್ತ, ಪುಟ ೬೭-೯೫.

೪೨. ಗಾಯತ್ರಿ ನಾವಡ : ೨೦೦೩, ಮಹಿಳಾ ಸಂಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ ೨೨.

೪೩. ಉಷಾ ಪಿ. ರೈ: ಪೂರ್ವೋಕ್ತ, ಪುಟ ೬೩.

೪೪. ಲೋಲಾಕ್ಷಿ, ಕೆ.ಎನ್: ಪೂರ್ವೋಕ್ತ, ಪುಟ ೧೬.

೪೫. ಸೂರ್ಯನಾಥ ಕಾಮತ್: ಪೂರ್ವೋಕ್ತ, ಪುಟ ೨೧೬ -೨೧೭.

೪೬. ವಿನಿತ್ ರಾವ್ ಸಂಯೋಜಕರು, ಗಾಂಧಿ ಅಧ್ಯಯನ ಕೇಂದ್ರ, ಎಂ.ಜಿ.ಎಂ ಕಾಲೇಜು, ಉಡುಪಿ, ಇವರ ಪತ್ರಿಕಾ ಲೇಖನ - (ವಿಜಯವಾಣಿ, ದಿನಾಂಕ ೧೧ನೇ ಅಗೋಸ್ಟ್, ೨೦೧೬.)

೪೭. ಮಂಗಳೂರು ದರ್ಶನ: ಪೂರ್ವೋಕ್ತ, ಪುಟ ೩೩೭-೩೪೩.

೪೮. ಸುದರ್ಶನ: ೧೯೭೭, ಡಾ. ತೋನ್ಸೆ ಮಾಧವ ಅನಂತ ಪೈ ಅಭಿನಂದನ ಗ್ರಂಥ, ಸಂಪಾದಕ ಅಡ್ಯನಡ್ಕ ಕೃಷ್ಣ ಭಟ್, ವಿಜಯ ಕಾಲೇಜು ಟ್ರಸ್ಟ್, ಮುಲ್ಕಿ, ದಕ್ಷಿಣ ಕನ್ನಡ, ಪುಟ ೧೩೨.

೪೯. ಸೂರ್ಯನಾಥ ಕಾಮತ್: ಪೂರ್ವೋಕ್ತ, ಪುಟ ೨೧೮.

೫೦. ಬಿ.ಎ ವಿವೇಕ್ ರೈ: ೨೦೧೬, ಮಂಗಳೂರು ದರ್ಶನ, ಸಂಪುಟ ೧, ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ಪುಟ ೩೩೭.

೫೧. ಸೂರ್ಯನಾಥ ಕಾಮತ್ ಪೂರ್ವೋಕ್ತ, ಪುಟಗಳು ೨೧೮, ೨೧೯.

೫೨. ಸ್ವದೇಶಾಭಿಮಾನಿ, ಅಕ್ಟೋಬರ್ ೧೨, ೧೯೧೨.

೫೩. ಸ್ವದೇಶಾಭಿಮಾನಿ, ಮೇ ೨೨, ೧೯೨೫.

೫೪. ಸರೋಜಿನಿ ಶಿಂತ್ರಿ ಮತ್ತು ರಾಘವೇಂದ್ರ ರಾವ್: ಪೂರ್ವೋಕ್ತ, ಪುಟ ೪೪-೪೭.

೫೫. ವಿನಿತ್ ರಾವ್ ಸಂಯೋಜಕರು, ಗಾಂಧಿ ಅಧ್ಯಯನ ಕೇಂದ್ರ, ಎಂ.ಜಿ.ಎಂ ಕಾಲೇಜು ಇವರ ಲೇಖನ - (ವಿಜಯವಾಣಿ ಪತ್ರಿಕೆ, ದಿನಾಂಕ ೧೧, ಆಗೋಸ್ಟ್ ೨೦೧೬.)

೫೬. ಹೋಂ ಡಿಪಾರ್ಟ್ ಮೆಂಟ್ ರಿಪೋರ್ಟ್ಸ್, ದಿನಾಂಕ - ೧೪ ಮಾರ್ಚ್ ೧೯೩೪ ನಂಬ್ರ ೧೧೮, ಪುಟ ೭.

೫೭. ಹೋಂ ಡಿಪಾರ್ಟ್ ಮೆಂಟ್ ರಿಪೋರ್ಟ್ಸ್, ದಿನಾಂಕ ೧೪ ಮಾರ್ಚ್ ೧೯೩೪, ನಂಬ್ರ ೧೧೮.

೫೮. ರಿಪೋರ್ಟ್ ಆಫ್ ಸಿವಿಲ್ ಡಿಸೊಬೀಡಿಯನ್ಸ್ ಮೂವ್ ಮೆಂಟ್, ೧೯೩೧, ಗವರ್ನಮೆಂಟ್ ಪ್ರೆಸ್, ಮದ್ರಾಸ್.

೫೯. ಬಿಪನ್ ಚಂದ್ರ : ಪೂರ್ವೋಕ್ತ ,ಪುಟ ೨೬೭.

೬೦. ರಿಪೋರ್ಟ್ ಆನ್ ಸಿವಿಲ್ ಡಿಸೊಬೀಡಿಯನ್ಸ್ ಮೂವ್ ಮೆಂಟ್ ೧೯೩೦-೩೧, ಗವರ್ನಮೆಂಟ್ ಪ್ರೆಸ್, ಮದ್ರಾಸ್.

೬೧. ಸೂರ್ಯನಾಥ ಕಾಮತ್: ಪೂರ್ವೋಕ್ತ, ಪುಟಗಳು ೨೨೦-೨೨೧.

೬೨. ಮುಕುಂದ ಪ್ರಭು (ಸಂ): ೨೦೦೦, ಪೊಲಿ, ಜಿಲ್ಲಾಧಿಕಾರಿ, ಮಂಗಳೂರು, ದ.ಕ ಪುಟ ೯೧.

೬೩. ಉಷಾ.ಪಿ. ರೈ: ಪೂರ್ವೋಕ್ತ, ಪುಟ ೬೩.

೬೪. ಸ್ವದೇಶಾಭಿಮಾನಿ, ಎಪ್ರಿಲ್ ೧, ೧೯೩೨.

೬೫. ವಿನಿತ್ ರಾವ್ ಸಂಯೋಜಕರು, ಗಾಂಧಿ ಅಧ್ಯಯನ ಕೇಂದ್ರ, ಎಂ.ಜಿ.ಎಂ ಕಾಲೇಜು, ಉಡುಪಿ ಇವರ ಪತ್ರಿಕಾ ಲೇಖನ, (ವಿಜಯವಾಣಿ, ದಿನಾಂಕ ೧೩ನೇ ಅಗೋಸ್ಟ್, ೨೦೧೬.)

೬೬. ಸ್ವದೇಶಾಭಿಮಾನಿ, ಎಪ್ರಿಲ್ ೩೦, ೧೯೩೧.

೬೭. ಸ್ವದೇಶಾಭಿಮಾನಿ, ಮಾರ್ಚ್ ೩೦, ೧೯೩೧.

೬೮. ಸ್ವದೇಶಾಭಿಮಾನಿ, ಎಪ್ರಿಲ್ ೬, ೧೯೩೧.

೬೯. ವಿನಿತ್ ರಾವ್: ಪೂರ್ವೋಕ್ತ, ದಿನಾಂಕ ೧೩ನೇ ಅಗೋಸ್ಟ್, ೨೦೧೬.

೭೦. ಸ್ವದೇಶಾಭಿಮಾನಿ, ಸೆಪ್ಟೆಂಬರ್ ೨೩, ೧೯೩೪.

೭೧. ಸ್ವದೇಶಾಭಿಮಾನಿ, ಡಿಸೆಂಬರ್ ೧೨, ೧೯೩೨.

೭೨. ಸ್ವದೇಶಾಭಿಮಾನಿ, ಡಿಸೆಂಬರ್ ೧೬, ೧೯೩೨.

೭೩. ಹೋಂ ಡಿಪಾರ್ಟ್ ಮೆಂಟ್ ರೆಕೋರ್ಡ್ಸ್, ೩ನೇ ಎಪ್ರಿಲ್ ೧೯೩೧.

೭೪. ಸೂರ್ಯನಾಥ ಕಾಮತ್: ಪೂರ್ವೋಕ್ತ, ಪುಟ ೨೩೬ - ೨೩೮.

೭೫. ರಾಷ್ಟ್ರಬಂಧು, ಜೂನ್ ೧, ೧೦೩೧.

೭೬. ಸ್ವದೇಶಾಭಿಮಾನಿ, ಜೂನ್ ೧೭, ೧೯೩೨.

೭೭. ಸ್ವದೇಶಾಭಿಮಾನಿ, ಜೂನ್ ೧೩, ೧೯೩೨.

೭೮. ಸ್ವದೇಶಾಭಿಮಾನಿ, ಜೂನ್ ೫, ೧೯೩೨.

೭೯. ಸ್ವದೇಶಾಭಿಮಾನಿ, ಜೂನ್ ೧೩, ೧೯೩೨.

೮೦. ಸ್ವದೇಶಾಭಿಮಾನಿ, ಫೆಬ್ರವರಿ ೧೨, ೧೯೩೨.

೮೧. ಸ್ವದೇಶಾಭಿಮಾನಿ, ಏಪ್ರಿಲ್ ೨೯, ೧೯೩೨.

೮೨. ಸ್ವದೇಶಾಭಿಮಾನಿ, ಮೇ ೬, ೧೯೩೨.

೮೩. ಜೆರಾಲ್ಡಿನ್ ಫೋಬ್ಸ್: ಪೂರ್ವೋಕ್ತ, ಪುಟ ೫೯-೬೦.

೮೪. ಸ್ವದೇಶಾಭಿಮಾನಿ, ಮೇ ೧೩, ೧೯೩೨.

೮೫. ಸ್ವದೇಶಾಭಿಮಾನಿ, ಫೆಬ್ರವರಿ ೧೨, ೧೯೩೨.

೮೬. ಸುದರ್ಶನ: ಪೂರ್ವೋಕ್ತ, ಪುಟ ೧೩೩- ೧೩೪.

೮೭. ಸ್ವದೇಶಾಭಿಮಾನಿ, ೧೨ ಆಗೋಸ್ಟು, ೧೯೩೨.

೮೮. ಸ್ವದೇಶಾಭಿಮಾನಿ, ಜನವರಿ ೧, ೧೯೩೨.

೮೯. ಸ್ವದೇಶಾಭಿಮಾನಿ, ಏಪ್ರಿಲ್ ೧೮, ೧೯೪೧.

೯೦. ಸ್ವದೇಶಾಭಿಮಾನಿ, ಆಗೋಸ್ಟು ೧೯, ೧೯೩೨.

೯೧. ಸ್ವದೇಶಾಭಿಮಾನಿ, ಏಪ್ರಿಲ್ ೨೨, ೧೯೩೨.

೯೨. ಸ್ವದೇಶಾಭಿಮಾನಿ, ಮೇ ೨೩, ೧೯೩೨.

೯೩. ಸ್ವದೇಶಾಭಿಮಾನಿ, ಮೇ ೨೭, ೧೯೩೨.

೯೪. ಸ್ವದೇಶಾಭಿಮಾನಿ, ಮೇ ೬, ೧೯೩೨.

೯೫. ಸ್ವದೇಶಾಭಿಮಾನಿ, ಮೇ ೧೩, ೧೯೩೨.

೯೬. ಸ್ವದೇಶಾಭಿಮಾನಿ, ಡಿಸೆಂಬರ್ ೨೭, ೧೯೩೨.

೯೭. ಸ್ವದೇಶಾಭಿಮಾನಿ, ಮಾರ್ಚ್ ೨, ೧೯೩೪.

೯೮. ಸ್ವದೇಶಾಭಿಮಾನಿ, ಜನವರಿ ೨೩, ೧೯೪೦.

೯೯. ಸ್ವದೇಶಾಭಿಮಾನಿ, ಅಕ್ಟೋಬರ್ ೮, ೧೯೩೬.

೧೦೦. ಸ್ವದೇಶಾಭಿಮಾನಿ, ಸೆಪ್ಟೆಂಬರ್ ೩, ೧೯೩೩.

೧೦೧. ಮಂಗಳೂರು ದರ್ಶನ : ಸಂಪುಟ ೧, ಪೂರ್ವೋಕ್ತ, ಪುಟ ೩೨೨.

೧೦೨. ಎಲ್ ಫರ್ತಾಡೋ, ಪೀಯುಸ್ ಎಫ್. ಪಿಂಟೋ, ಎಚ್.ಎಸ್ ವಿಲ್ಸನ್: ೨೦೧೬, ಪರ್ಸ್ಪೆಕ್ಟಿವ್ಸ್ ಫಾರ್ ಎ ಹಿಸ್ಟರಿ ಆಫ್ ಕ್ರಿಸ್ಟಿಯನ್ಸ್ ಇನ್ ಕರ್ನಾಟಕ, ಸಮನ್ವಯ ಪ್ರಕಾಶನ ಮಂಗಳೂರು, ಪುಟ ೨೭೩, ೨೭೪ .

೧೦೩. ಸ್ವದೇಶಾಭಿಮಾನಿ, ಡಿಸೆಂಬರ್ ೧೫, ೧೯೩೬.

೧೦೪. ಸ್ವದೇಶಾಭಿಮಾನಿ, ಎಪ್ರಿಲ್ ೮, ೧೯೩೭.

೧೦೫. ಸ್ವದೇಶಾಭಿಮಾನಿ, ಅಗೋಸ್ಟ್ ೬, ೧೯೪೩.

೧೦೬. ಸ್ವದೇಶಾಭಿಮಾನಿ, ಜನವರಿ ೨೨, ೧೯೪೩.

೧೦೭. ಸ್ವದೇಶಾಭಿಮಾನಿ, ಅಕ್ಟೋಬರ್ ೧೨, ೧೯೪೫.

೧೦೮. ಬಿಪನ್ ಚಂದ್ರ : ಪೂರ್ವೋಕ್ತ, ಪುಟಗಳು ೨೨೨- ೨೨೩.

೧೦೯. ಸೂರ್ಯನಾಥ ಕಾಮತ್: ಸಂಪುಟ - ೧, ಪೂರ್ವೋಕ್ತ, ಪುಟಗಳು ೫೪೬- ೫೪೭.

# ಉಪಸಂಹಾರ ಮತ್ತು ಫಲಿತಗಳು

ಭಾರತದ ಇತಿಹಾಸವನ್ನು ಗಮನಿಸಿದರೆ, ಸಮಾಜಕ್ಕೆ ಮಹಿಳೆಯರ ಕೊಡುಗೆಗಳು ಮತ್ತು ಸಾಧನೆಗಳು ಚರಿತ್ರೆಯ ಭಾಗವಾಗದೆ ಶೋಷಣೆಯ ದಾಖಲೆಗಳಂತ ಭಾಸವಾಗುತ್ತದೆ. ಮಹಿಳೆಯರಿಗೆ ಅವರದೇ ಆದ ಪುರಾಣಗಳಿಲ್ಲ, ಇರುವ ಪುರಾಣಗಳೆಲ್ಲವೂ ಪುರುಷರಿಂದ ರಚಿತವಾಗಿದ್ದು, ಪುರುಷಪರವಾದ ರೀತಿಯಲ್ಲಿ ರೂಪುಗೊಂಡಿವೆ. ಪುರುಷರು ಮಹಿಳೆಯರ ಕುರಿತು ಹೊಂದಿದ್ದ ಪೂರ್ವಾಗ್ರಹಗಳು ಅವರು ರಚಿಸಿದ ಪುರಾಣಗಳಲ್ಲೂ ಅಭಿವ್ಯಕ್ತಿಗೊಂಡಿವೆ. ಪುರುಷ ಚಿಂತನೆಯಲ್ಲಿಯೇ ಉಗಮವಾಗಿ ಅವರ ನಿಯಂತ್ರಣದಲ್ಲಿಯೇ ಬೆಳೆದು ಬಂದಿರುವಂತಹ ಧಾರ್ಮಿಕ ವ್ಯವಸ್ಥೆ, ಸ್ತ್ರೀಗೆ ಸ್ವತಂತ್ರವಾದ ಒಂದು ವ್ಯಕ್ತಿತ್ವವಿದೆ, ಆಕೆಗೂ ಜ್ಞಾನವನ್ನು ಪಡೆಯುವ ಹಾಗೂ ಜ್ಞಾನ ತರಬಲ್ಲಂಥ ಅನುಕೂಲಗಳನ್ನು ಅನುಭವಿಸುವ ಹಕ್ಕಿದೆ ಎಂಬ ತತ್ವಕ್ಕೆ ಮಾನ್ಯತೆಯನ್ನು ನೀಡಿಲ್ಲ. ಎಲ್ಲಾ ಧರ್ಮಗಳು ಮಾನವೀಯ ಮೌಲ್ಯಗಳಿಗೆ ಮಹತ್ವವಾದ ಸ್ಥಾನವನ್ನು ನೀಡಿದ್ದರೂ, ವಾಸ್ತವದಲ್ಲಿ ಮಹಿಳೆಯರ ಮೇಲೆ ಹೇರಿರುವ ನಿರ್ಬಂಧಗಳ ಸಂಖ್ಯೆಯೇ ಹೆಚ್ಚು. ಈ ದೃಷ್ಟಿಕೋನ ಧರ್ಮದ ದ್ವಿಮುಖ ಮೌಲ್ಯಗಳಿಗೆ ಸಾಕ್ಷಿಯಾಗಿದೆ. ತುಳುನಾಡಿನಲ್ಲೂ ಇಂತಹ ದ್ವಂದ್ವಗಳು ಕಂಡು ಬರುತ್ತದೆ. ಇಲ್ಲಿನ ಚರಿತ್ರೆಗೆ ಮೂಲ ಮೌಖಿಕ ಆಕರವಾದ ಪಾಡ್ದನಗಳ ಮೂಲಕ ಸಾಮಾಜಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳನ್ನು ಅರ್ಥೈಸಿಕೊಳ್ಳಲು ಸಾಧ್ಯ. ಅಧಿಕಾರ ಮತ್ತು ಸವಲತ್ತುಗಳನ್ನು ಹೊಂದಿದ್ದ ಶ್ರೀಮಂತ ವರ್ಗವನ್ನು ನೇರವಾಗಿ ವಿರೋಧಿಸುವುದು ಸಾಧ್ಯವಿಲ್ಲದ ಕಾರಣ ದೈವಗಳ ರೂಪದಲ್ಲಿ ಅವರನ್ನು ಕಾಡುವ ಹಾಗೂ ಶಿಕ್ಷಿಸುವ ಪ್ರಸಂಗಗಳನ್ನು ಪಾಡ್ದನಗಳು ತೆರೆದಿಡುತ್ತದೆ.

ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ, ಚಾರಿತ್ರಿಕವಾಗಿ ಸಾವಿರಾರು ವರ್ಷಗಳಿಂದ ಸ್ತ್ರೀಯರಿಗೆ ಮಾನವತ್ವವನ್ನು ನಿರಾಕರಿಸುತ್ತಾ ಬಂದ ಮಾನವ ಸಮಾಜ, ಹೆಣ್ಣನ್ನು ತಾಯಿಯೆಂದು ಗೌರವಿಸಿದ ದೇಶದಲ್ಲಿಯೇ, ಅವಳನ್ನು ದಿಗ್ಬಂಧನದಲ್ಲಿಟ್ಟಿರುವುದು ನಾಗರಿಕತೆಯ ಆರಂಭದಿಂದಲೂ ಕಂಡು ಬರುತ್ತದೆ. ಸಿಮೋನ್ ದಿ ಬೊವಾ ಹೇಳುವಂತೆ 'ಸ್ತ್ರೀಯು ಕೇವಲ ಸ್ತ್ರೀಯಾತ್ಮಕ ಗುಣಗಳನ್ನು ಮೈಗೂಡಿಸಿಕೊಳ್ಳುವಂತೆ ಸಮಾಜವು ನೈಜ ಮಹಿಳೆಯನ್ನು ಬಳಕೆಯ ವಸ್ತುವಿನಂತೆ ಸೃಜಿಸುತ್ತದೆ. ಸಹಜ ಸ್ವಾಭಾವಿಕ ಮಹಿಳೆಯಾಗದೆ ಅಸ್ವಾಭಾವಿಕ ಪ್ರಾಣಿಯಂತೆ ಸಮಾಜ ಆಕೆಯನ್ನು ರೂಪಿಸಿದೆ' ಎಂಬಂತೆ ಸಮಾಜದಲ್ಲಿ ಮಹಿಳೆ ಅಸ್ಮಿತಾ ಹೀನಳಾಗಿ ಆಧುನಿಕತೆಯಿಂದ ವಂಚಿತಳಾಗಿದಂತೆ ತೋರುತ್ತದೆ. ಬ್ರಿಟಿಷರು ಅನಾಗರಿಕರನ್ನು ನಾಗರಿಕತೆಯತ್ತ ಕೊಂಡೊಯ್ಯುವುದು ಬಿಳಿಯರಾದ ನಮ್ಮ ಜವಾಬ್ದಾರಿಯಾಗಿದ್ದು ಅದು ನಮಗೆ ನಿಸರ್ಗದತ್ತವಾಗಿ ಬಂದಿದೆ ಎನ್ನುವ ವಾದವನ್ನು ಮುಂದಿಟ್ಟು, ವಸಾಹತು ರಾಷ್ಟ್ರಗಳನ್ನು ಅತ್ಯಂತ ಹೀನಾಯವಾಗಿ ಹಾಗೂ ಅನಾಗರಿಕವಾಗಿ

ಪರಿಗಣಿಸಿದ್ದು ಚರಿತ್ರೆಯ ಪುಟಗಳಿಂದ ತಿಳಿದು ಬರುವ ಕಟು ಸತ್ಯವಾಗಿದೆ. ಆಧುನಿಕ ಶಿಕ್ಷಣವು ಜನರಲ್ಲಿ ಅವರ ಧರ್ಮದ ಬಗೆಗಿನ ಶ್ರದ್ಧೆಯನ್ನು ನಾಶಗೊಳಿಸಿ, ಕ್ರೈಸ್ತಧರ್ಮದತ್ತ ಅವರನ್ನು ಆಕರ್ಷಿಸಬಹುದು ಎಂದು ನಂಬಿದ್ದರು. ಈ ಉದ್ದೇಶದಿಂದ ಶಿಕ್ಷಣ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡ ಇವರು ಭಾರತೀಯ ಮಹಿಳೆಯರ ಶೋಚನೀಯ ಬದುಕಿನತ್ತವೂ ಗಮನಹರಿಸಿದರು.

ಪಾಶ್ಚಿಮಾತ್ಯ ಸಂಸ್ಕೃತಿಯೊಡನೆ ಸಂಪರ್ಕ ಬೆಳೆದುದರ ಪರಿಣಾಮಗಳಿಂದ ಹೊಸ ವಿಚಾರಧಾರೆಗಳು ಮೂಡತೊಡಗಿದವು. ವಸಾಹತು ಆಡಳಿತ ಮತ್ತು ಇಂಗ್ಲಿಷ್ ವಿದ್ಯಾಕ್ರಮಗಳ ಒಂದು ಪರಿಣಾಮವೆಂದರೆ ಬದುಕನ್ನು ಅರಿಯುವ ಕ್ರಮದಲ್ಲಿ ಆದ ಬದಲಾವಣೆ, ಪ್ರಪಂಚವನ್ನು ನೋಡುವ, ವರ್ಗೀಕರಿಸುವ, ತಿಳಿಯುವ, ಪರಿಭಾಷೆ, ನುಡಿಗಟ್ಟುಗಳು ಬದಲಾದವು. ಈ ನವಚೈತನ್ಯದ ಭಾವನೆಗಳು ೧೯ನೇ ಶತಮಾನದ ಅಂತ್ಯದ ವೇಳೆಗೆ ಸುಭದ್ರವಾದ ಮನೋವಿಕಾಸ ಅಡಿಪಾಯವನ್ನು ಹಾಕಿಕೊಟ್ಟವು. ಈ ಬದಲಾವಣೆಗಳ ಸಮಗ್ರ ಪರಿಣಾಮಗಳು ಭಾರತ ದೇಶದ ಜನರ ಸಾಮಾಜಿಕ ಜೀವನದ ಮೇಲೆ ನಿಧಾನವಾಗಿ, ಆದರೆ ಸ್ಥಿರವಾದ ರೀತಿಯಲ್ಲಿ ಕಾಣಿಸಿಕೊಳ್ಳತೊಡಗಿತು. ವಸಾಹತುಶಾಹಿ ಆಧುನಿಕತೆಯ ಅಂಶಗಳಾದ ವಿಜ್ಞಾನ, ತಂತ್ರಜ್ಞಾನ, ಶಿಕ್ಷಣ, ಸಾರ್ವಜನಿಕ ಹಕ್ಕು, ಆರ್ಥಿಕ, ಸಾಮಾಜಿಕ ಹಕ್ಕಿಗಾಗಿ ಹೋರಾಟ ಹಾಗೂ ರಾಜಕೀಯ ಸ್ಥಾನಮಾನ ಇವು ಭಾರತೀಯ ಮಹಿಳೆಯು ತನ್ನ ಶತಮಾನಗಳ ಸಂಕೋಲೆ ಮತ್ತು ನೈತಿಕ ನಿರ್ಬಂಧಗಳಿಂದ ಹೊರಬೀಳುವಲ್ಲಿ ಪ್ರಮುಖ ಪಾತ್ರ ವಹಿಸಿದೆ.

ವಸಾಹತುಶಾಹಿ ಆಡಳಿತ ತಂದ ಕೆಲವು ಬದಲಾವಣೆಗಳು ನಮ್ಮನ್ನು ತಲ್ಲಣಗೊಳಿಸಿದರೆ, ಮತ್ತೆ ಕೆಲವು ಭಾರತದಲ್ಲಿದ್ದ ಅನಿಷ್ಟ ಪದ್ಧತಿಗಳಿಂದ ಬಿಡುಗಡೆ ಪಡೆಯಲು ದಾರಿಯಾದವು. ಹೊಸ ಶಿಕ್ಷಣ ಪದ್ಧತಿಯು ಅಕ್ಷರದ ಓದು ಮತ್ತು ಬರಹಕ್ಕೆ ಹೆಣ್ಣಿಗಿದ್ದ ನಿಷೇಧವನ್ನು ತೊಡೆದು ಹಾಕಿತು. ಶಿಕ್ಷಣ ಮಾನವನ ಬದುಕನ್ನು ಅರ್ಥಪೂರ್ಣವನ್ನಾಗಿ ಮಾಡುವುದರೊಂದಿಗೆ, ಸಂಸ್ಕೃತಿಯನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾಯಿಸುವಂತಹ ಹಾಗೂ ಬದಲಾವಣೆಗಳನ್ನು ಸ್ವೀಕರಿಸಲು ಪ್ರೇರಣೆ ಮಾಡುವಂತಹ ಪ್ರಬಲ ಸಾಮಾಜಿಕ ಸಂಸ್ಥೆಯಾಗಿದೆ. ಇದು ಜನರಲ್ಲಿ ಪ್ರಗತಿಪರ ಮನೋಭಾವವನ್ನು ಬೆಳೆಸುವುದರ ಮೂಲಕ ಬದಲಾವಣೆಗಳನ್ನು ಸ್ವೀಕರಿಸಲು ತಯಾರು ಮಾಡುತ್ತದೆ.

ಸಮಾಜದ ಬೆನ್ನು ಹತ್ತಿದ ಮೌಢ್ಯಗಳನ್ನು ತೊಡೆದು ಹಾಕಿ ಮಹಿಳೆಯರಲ್ಲಿ ವಿಶ್ವಾಸ ಮೂಡಿಸಲು ಶಿಕ್ಷಣವು ಪೂರಕವಾಗಿದೆ. ಪಾಶ್ಚಾತ್ಯ ಪ್ರಭಾವದಿಂದಾಗಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅವರೆಗೆ ಶಿಕ್ಷಣದ ಪರಿಧಿಯಿಂದ ಹೊರಗಿಡಲಾಗಿದ್ದ ಹೆಣ್ಣು, ಶಿಕ್ಷಣದ ವೃತ್ತದೊಳಗೆ ಬಂದಳು. ವಿಶೇಷವಾಗಿ ಗಮನಹರಿಸಬಹುದಾದ ಸಂಗತಿಯೆಂದರೆ ಶಾಲೆಗಳಲ್ಲಿ ಬಾಲಕಿಯರಿಗೆ ನೀಡುವ ಶಿಕ್ಷಣದಲ್ಲಿ ನೈರ್ಮಲ್ಯಕ್ಕೆ ಪ್ರಾಶಸ್ತ್ಯ ಒದಗಿಸಿರುವುದು ಮತ್ತು ಆರೋಗ್ಯ ತಪಾಸಣೆಯನ್ನು ಕಡ್ಡಾಯಗೊಳಿಸಿರುವುದು. ಸಂಪ್ರದಾಯಗಳಿಗೆ ಕಟ್ಟು ಬಿದ್ದಿದ್ದ ಹಲವಾರು ಕಂದಾಚಾರಗಳನ್ನು ವಿವೇಚನೆ ಮಾಡದೆ ಪರಿಪಾಲಿಸಿಕೊಂಡು ಬರುತ್ತಿದ್ದ

ಸಮಾಜದಲ್ಲಿ ಹುಟ್ಟಿಕೊಂಡ ಶಿಕ್ಷಿತ ವರ್ಗವು, ಹೊಸ ಮೌಲ್ಯಗಳಿಂದ ಪ್ರಭಾವಿತರಾಗಿ ಹಿಂದಿನ ಸಂಪ್ರದಾಯ, ಆಚರಣೆಗಳ ಬಗ್ಗೆ ತೀವ್ರವಾಗಿ ವಿಚಾರಮಾಡಿ, ಪ್ರತಿಯೊಂದು ಹಳೆಯ ಸಂಪ್ರದಾಯಗಳ ನಡವಳಿಕೆಯನ್ನು ಪ್ರಶ್ನಿಸಲಾರಂಭಿಸಿತು. ಮಿಷನರಿಗಳಿಂದ ಪ್ರಭಾವಿತರಾದ ಜಿಲ್ಲೆಯ ಮುಂದಾಳುಗಳು ಸ್ಥಳೀಯ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಆ ಮೂಲಕ ಸ್ತ್ರೀ ಶಿಕ್ಷಣಕ್ಕೆ ಆದ್ಯತೆ ನೀಡಿದರು. ಬಾಲಕರಂತೆ ಬಾಲಕಿಯರಿಗೂ ಶಿಕ್ಷಣದ ಅನಿವಾರ್ಯತೆಯನ್ನು ಇವರು ಮನಗಂಡರು. ಇಲ್ಲಿ ಆರಂಭಗೊಂಡ ಹಲವಾರು ಸಮಾಜ ಸುಧಾರಣಾ ಸಂಸ್ಥೆಗಳು ಮಹಿಳಾಪರ ಜಾಗೃತಿಗೆ ಒತ್ತು ನೀಡಿದುದರ ಜೊತೆಗೆ ಸುಧಾರಣಾವಾದಿಗಳು ಮಹಿಳೆಯರ ಅಸಹನೀಯ ಬದುಕಿನತ್ತ ಗಮನಹರಿಸಿದರು. ಬ್ರಹ್ಮಸಮಾಜ, ಆರ್ಯಸಮಾಜ, ಮಹಿಳಾ ಸಭಾ, ಈಶ್ವರಾನಂದ ಸೇವಾಶ್ರಮ, ಭಗಿನಿ ಸಮಾಜ ಮೊದಲಾದ ಸಂಸ್ಥೆಗಳು ಮಹಿಳೆಯರನ್ನು ಸಮಾಜದ ಮುಖ್ಯವಾಹಿನಿಗೆ ತರುವುದಕ್ಕಾಗಿ ಶ್ರಮಿಸಿದವು.

ಮುದ್ರಣ ಮಾಧ್ಯಮವೂ ಕೂಡಾ ಸಾಮಾಜಿಕ ಜಾಗೃತಿ ಮೂಢಿಸುವಲ್ಲಿ ಗಣನೀಯ ಪಾತ್ರ ವಹಿಸಿದೆ. ವಸಾಹತು ಕಾಲಘಟ್ಟದ ಪತ್ರಿಕೆಗಳಲ್ಲಿ ಪ್ರಕಟಗೊಂಡಿರುವ ಸ್ತ್ರೀಪರ ಲೇಖನಗಳಾದ ಬಾಲ್ಯ ವಿವಾಹ: ಸಾಧಕ ಬಾಧಕಗಳು, ಸ್ತ್ರೀ ಶಿಕ್ಷಣ ಮತ್ತು ಸ್ವಾತಂತ್ರ್ಯ, ಸ್ತ್ರೀ ಮತ್ತು ಆರ್ಥಿಕ ವ್ಯವಸ್ಥೆ, ಉದ್ಯೋಗ ಮತ್ತು ಅವಕಾಶ ಮೊದಲಾದವುಗಳನ್ನು ಈ ನಿಟ್ಟಿನಲ್ಲಿ ಗಮನಿಸಬಹುದಾಗಿದೆ. ಸ್ವಾತಂತ್ರ್ಯಪೂರ್ವ ಕಾಲಘಟ್ಟದ ಒಟ್ಟು ಸಾಂಸ್ಕೃತಿಕ ಪಲ್ಲಟದ ಸನ್ನಿವೇಶ ಮತ್ತು ತದನಂತರದ ಬದಲಾವಣೆಗಳನ್ನು ತುಲನಾತ್ಮಕ ದೃಷ್ಟಿಕೋನದಲ್ಲಿ ಕಂಡು ಅವು ಹೆಣ್ಣಿನ ಮನೋಧರ್ಮದ ಮೇಲೆ ಉಂಟುಮಾಡಿರುವ ಪ್ರಭಾವ ಮತ್ತು ಪ್ರೇರಣೆಗಳನ್ನು ಈ ಲೇಖನಗಳಲ್ಲಿ ಗುರುತಿಸಬಹುದಾಗಿದೆ. ಪುರುಷ ಚಿಂತನೆಯ ಪ್ರಭಾವಕ್ಕೆ ಒಳಗಾಗುತ್ತಲೇ ಅದರಿಂದ ಬಿಡಿಸಿಕೊಳ್ಳುವ ಮಹಿಳಾ ಚಿಂತನೆಗಳು ಇಲ್ಲಿನ ಬರಹಗಳ ಹಿಂದೆ ಪ್ರಧಾನವಾಗಿ ಕೆಲಸ ಮಾಡಿರುವುದು ಶ್ಲಾಘನೀಯ. ಪಾಶ್ಚಾತ್ಯ ಶಿಕ್ಷಣ ಬೆರಳೆಣಿಕೆಯ ವರ್ಗವನ್ನು ತಲುಪಿದರೂ ಕೂಡಾ ಅದರ ಪ್ರಭಾವ ಜಿಲ್ಲೆಯ ಹೆಚ್ಚಿನ ಎಲ್ಲಾ ವರ್ಗಗಳಲ್ಲಿ ಕಂಡು ಬರುತ್ತದೆ. ಇದು ಶಿಕ್ಷಿತರನ್ನು ಅನುಕರಣೆ ಮಾಡುವ ಪ್ರಕ್ರಿಯೆ ಎಂದೆನ್ನಬಹುದು.

ಆಧುನಿಕ ಶಿಕ್ಷಣ ಮತ್ತು ಉದ್ಯೋಗಾವಕಾಶಗಳು ಕೌಟುಂಬಿಕ ಸಂಬಂಧಗಳನ್ನು ಶಿಥಿಲಗೊಳಿಸುವ ಅಪಾಯಕಾರಿ ಅಂಶವನ್ನು ಇಲ್ಲಿನ ಕೆಲವು ಬರಹಗಳು ಗುರುತ್ತಿಸುತ್ತಿವೆಯಾದರೂ ಮತ್ತೊಂದು ನೆಲೆಯಲ್ಲಿ ಆಧುನಿಕ ಶಿಕ್ಷಣವು ಮಹಿಳೆಗೆ ಸ್ವಾಯತ್ತವಾದ ಬದುಕನ್ನು ರೂಪಿಸಿಕೊಳ್ಳುವ ಚೈತನ್ಯ ಮತ್ತು ಅವಕಾಶ ಕಲ್ಪಿಸುವುದನ್ನು ತಿಳಿಸುತ್ತದೆ. ಈ ಎಲ್ಲಾ ವೈರುಧ್ಯಗಳು ಒಂದು ಬಗೆಯ ಸಂದಿಗ್ಧತೆಯಿಂದ ಹುಟ್ಟಿಕೊಂಡಿವೆ ಎನ್ನಬಹುದು. ಮಹಿಳಾ ವಿಮೋಚನೆಯ ದಾರಿಯಲ್ಲಿರುವ ತಿರುವುಗಳು ಮತ್ತು ಸುಳಿವುಗಳನ್ನು ಅರ್ಥೈಸಿಕೊಳ್ಳುವ ದೃಷ್ಟಿಯಿಂದಲೂ ಈ ಲೇಖನಗಳು ಸಹಕಾರಿಯಾಗಿವೆ. ಆದರೆ ಕೆಲವು ಲೇಖನಗಳು ಅನಾಮಧೇಯವಾಗಿರುವುದು ಗಮನಾರ್ಹ. ತಮ್ಮ ಅಸ್ಮಿತೆಯನ್ನು ತೋರ್ಪಡಿಸಲು ಬಯಸದ ಮಹಿಳಾ

